

ಪೂಜ್ಯ ಗಾಂಧೀಜಿಯವರು

(೧೯೩೦, ಪು. ೬೧)

# ಗಾಂಧಿಜೀಯವರ ಆತ್ಮಕಥೆ

ಅ ಥ ವಾ

# ಸತ್ಯಶೋಧನೆ

(ನಾಲ್ಕನೆಯ ಭಾಗ)

---

ಕರ್ಣಾಟಕ ಸಾಹಿತ್ಯ
**ಪ್ರಕಟನಾಲಯ**

ಬೆಂಗಳೂರು ನಗರ

**೧೯೩೦**

# ವಿಷಯ ಸೂಚಿಕೆ

# ೧

# ಮಾಡಿಮುಟ್ಟಿದುದೆಲ್ಲಾ ವ್ಯರ್ಥವಾಯಿತೋ?

ಮಿ. ಚೇಂಬರ್‌ಲೇನರು ದಕ್ಷಿಣ ಆಫ್ರಿಕದಿಂದ ಮೂರುವರೆ ಕೋಟಿ ಪೌನುಗಳ ದಾನವನ್ನು ತೆಗೆದು ಕೊಂಡು ಹೋಗುವ ದಕ್ಕೂ ಇಂಗ್ಲಿಷರ ಮತ್ತು, ಸಾಧ್ಯವಾದರೆ, ಬೋಅರರ ಮನಸ್ಸನ್ನು ವಶಪಡಿಸಿಕೊಳ್ಳುವದಕ್ಕೂ ಬಂದಿದ್ದರು. ಆದುದರಿಂದ ಹಿಂದೀಯ ಪ್ರತಿನಿಧಿಗಳಿಗೆ ಒಣ ಜವಾಬು ಮಾತ್ರ ದೊರಕಿತು.

ಅವರು "ಸ್ವಾತಂತ್ರ್ಯವುಳ್ಳ ಸ್ವಾಸ್ಥ್ಯಗಳ ಮೇಲೆ ಸಾಮ್ರಾಜ್ಯ ಸರ್ಕಾರಕ್ಕೆ ಹೆಸರಿಗೆ ಮಾತ್ರ ಅಧಿಕಾರವಿದೆಯೆಂಬುದು ನಿಮಗೆ ಗೊತ್ತೇ ಇದೆ. ನಿಮ್ಮ ಸಂಕಟಗಳೇನೋ ನಿಜವಾದವುಗಳೆಂದು ತೋರುತ್ತವೆ. ನನ್ನ ಕೈಲಾದುದನ್ನು ನಾನು ಮಾಡುತ್ತೇನೆ. ಆದರೆ ನೀವು ಬಿಳಿಯವರ ಮಧ್ಯ ಇರಬೇಕೆಂದರೆ ಸಾಧ್ಯವಾದಮಟ್ಟಿಗೆ ಅವರನ್ನು ಒಲಿಸಿಕೊಳ್ಳಬೇಕು." ಎಂದು ಹೇಳಿದರು.

ಈ ಉತ್ತರವನ್ನು ಕೇಳುತ್ತಲೇ ಪ್ರತಿನಿಧಿಗಳ ಮುಖಕ್ಕೆ ತಣ್ಣೀರೆರಚಿದಂತಾಯಿತು. ನನಗೂ ಕೂಡ ಆಶಾಭಂಗವಾಯಿತು. ಇದರಿಂದ ನಮ್ಮ ಕಣ್ಣುಕಟ್ಟು ಬಿಚ್ಚಿತೆಂದೂ ನಾವು ಪುನಃ ಈ ಕೆಲಸವನ್ನು ಮೊದಲಿನಿಂದ ಪ್ರಾರಂಭಿಸಬೇಕೆಂದೂ ನಾನು ಕಂಡೆನು. ನನ್ನ ಜೊತೆಯವರಿಗೆ ಈ ವಿಚಾರವನ್ನು ತಿಳಿಸಿದೆನು.

ಮಿ. ಚೇಂಬರ್‌ಲೇನರ ಜವಾಬಿನಲ್ಲಿ ತಪ್ಪು ತಾನೆ ಇದ್ದುದೇನು?

ಅವರು ಇದ್ದುದನ್ನು ಇದ್ದಂತೆಯೇ ಹೇಳಿದುದು ಒಳ್ಳೆಯದೇ ಆಯಿತು. ಬಾಹುಬಲವೇ ನ್ಯಾಯಕ್ಕೆ ಮೂಲ, ಅಥವಾ

ದೊಣ್ಣೆಯ ಪ್ರಯೋಗವೇ ಎಲ್ಲಕ್ಕೂ ದಾರಿ ಎಂಬ ತತ್ವವನ್ನು ಅವರು ಸಿಹಿಯಾದ ಮಾತುಗಳಿಂದ ನಾವು ಮನಗಾಣುವಂತೆ ಮಾಡಿದರು.

ಆದರೆ ನಮ್ಮ ಕೈಗೆ ದೊಣ್ಣೆಯೆಲ್ಲಿಂದ ಬಂದೀತು? ದೊಣ್ಣೆಯ ಏಟುಗಳನ್ನು ತಿಂದು ಸಹಿಸುವಷ್ಟು ಶಕ್ತಿಯು ಕೂಡ ನಮಗಿರಲಿಲ್ಲ.

ಚೇಂಬರ್‌ಲೇನರು ದಕ್ಷಿಣ ಆಫ್ರಿಕದಲ್ಲಿ ಎಲ್ಲೋ ಒಂದು ವಾರದ ಮಟ್ಟಿಗೆ ಇರುವವರಾಗಿದ್ದರು. ದಕ್ಷಿಣ ಆಫ್ರಿಕವು ಒಂದು ಸಣ್ಣ ಪ್ರಾಂತ್ಯವಲ್ಲ. ಅದು ಒಂದು ದೊಡ್ಡ ದೇಶ. ಶ್ರೀನಗರದಿಂದ ಕನ್ಯಾಕುಮಾರಿಗೆ ೧,೯೦೦ ಮೈಲಿಗಳಾದರೆ ಡರಬನಿನಿಂದ ಕೇಪ್‌ಟೌನ್ ೧,೧೦೦ ಮೈಲಿಗೆ ಎಂದಿಗೂ ಕಡಿಮೆಯಿಲ್ಲ. ಈ ಪ್ರಾಂತ್ಯವನ್ನೆಲ್ಲಾ ಚೇಂಬರ್‌ಲೇನರು ವಾಯುವೇಗದಿಂದ ಸಂಚರಿಸಬೇಕಾಗಿದ್ದಿತು.

ನೇಟಾಲಿನಿಂದ ಅವರು ಟ್ರಾನ್ಸ್‌ವಾಲಿಗೆ ಹೊರಟರು. ಆಗ ನಾನೂ ಅಲ್ಲಿಗೆ ಹೋಗಿ ಅಲ್ಲಿನ ಭಾರತೀಯರ ಪರವಾಗಿ ಕೂಡ ನಾನು ಅವರ ಮುಂದೆ ನಿಂತು ಮಾತನಾಡಬೇಕಾಗಿದ್ದಿತು. ಆದರೆ ನಾನು ಪ್ರಿಟೋರಿಯಾವನ್ನು ಸೇರುವದೆಂತು? ಅಲ್ಲಿಯ ನಮ್ಮ ಜನರು ನಾನು ಅಲ್ಲಿಗೆ ಹೊತ್ತಿಗೆ ಸರಿಯಾಗಿ ತಲಪುವದಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡುವ ಸ್ಥಿತಿಯಲ್ಲಿರಲಿಲ್ಲ. ಯುದ್ಧವಾದಮೇಲೆ ಟ್ರಾನ್ಸ್‌ವಾಲು ನಿರ್ಜನವಾದ ಅರಣ್ಯದಂತೆ ಆಗಿಬಿಟ್ಟಿದ್ದಿತು. ಅಲ್ಲಿ ಊಟತಿಂಡಿಗಳಿಗೆ ಸರಕಾಗಲಿ ಉಟ್ಟುಹೊದೆಯಲು ಬಟ್ಟೆಯಾಗಲಿ ದೊರಕುತ್ತಿರಲಿಲ್ಲ. ಯುದ್ಧಕಾಲದಲ್ಲಿ ಬರಿದಾದ ಅಥವಾ ಮುಚ್ಚಿದ ಅಂಗಡಿಗಳನ್ನು ತೆಗೆಯಬೇಕಾಗಿದ್ದಿತು. ಈ ಕೆಲಸವಂತು ಕಾಲಕ್ರಮೇಣ ನಡೆಯುವದಾಗಿದ್ದಿತೇ ಹೊರತು ಒಮ್ಮೆಯೇ ಸಾಧ್ಯವಿರಲಿಲ್ಲ. ಮನೆಬಾಗಿಲುಗಳನ್ನು ಬಿಟ್ಟು ಓಡಿಹೋದವರನ್ನು ಕೂಡ ಅಂಗಡಿಗೆ

ಸಾಮಾನು ಬಂದದ್ದನ್ನು ನೋಡಿಕೊಂಡೇ ಅವರವರ ಮನೆಗಳಿಗೆ ಹಿಂತಿರುಗುವದಕ್ಕೆ ಬಿಡಬೇಕಾಗಿದ್ದಿತು. ಆದುದರಿಂದ ಪ್ರತಿಯೊಬ್ಬ ಟ್ರಾನ್ಸ್‌ವಾಲ್ ವಾಸಿಯೂ ಒಂದೊಂದು ಅಪ್ಪಣೆ ಚೀಟಿಯನ್ನು ಪಡೆಯಬೇಕಾಗಿದ್ದಿತು. ಇದನ್ನು ಹೊಂದುವದಕ್ಕೆ ಬಿಳಿಯ ಜನರಿಗೇನೂ ತೊಂದರೆಯಾಗುತ್ತಿರಲಿಲ್ಲ. ಆದರೆ ಭಾರತೀಯರಿಗೆ ಇದು ದೊರಕುವದು ಬಹಳ ಕಷ್ಟದ ಮಾತಾಗಿದ್ದಿತು.

ಯುದ್ಧಕ್ಕಾಗಿ ಹಿಂದುಸ್ಥಾನದಿಂದಲೂ ಸಿಲೋನಿನಿಂದಲೂ ಬಹಳ ಜನ ಅಧಿಕಾರಿಗಳೂ ಸೈನಿಕರೂ ದಕ್ಷಿಣ ಆಫ್ರಿಕಕ್ಕೆ ಬಂದಿದ್ದರು. ಅವರಲ್ಲಿ ಯಾರುಯಾರು ಅಲ್ಲಿಯೇ ನೆಲೆಸಬೇಕೆಂದು ಇಚ್ಛಿಸುತ್ತಿದ್ದರೋ ಅವರಿಗೆಲ್ಲಾ ಅಲ್ಲಿಯೇ ವಾಸಿಸುವದಕ್ಕೆ ವ್ಯವಸ್ಥೆಯನ್ನು ಮಾಡಿಕೊಡುವದು ಬ್ರಿಟಿಷ್ ರಾಜ್ಯಾಧಿಕಾರಿಗಳ ಕರ್ತವ್ಯವೆಂಬುದಾಗಿ ಎಣಿಕೆಯಿದ್ದಿತು. ಅಧಿಕಾರಿಗಳ ಹೊಸ ಮಂಡಲವೊಂದನ್ನು ಆಗ ಹೇಗಿದ್ದರೂ ಸ್ಥಾಪಿಸಲೇಬೇಕಾಗಿದ್ದಿತು. ಈ ಉದ್ದೇಶಕ್ಕೆ ಈ ಅನುಭವಿಗಳಾದ ಅಧಿಕಾರಿಗಳಿದ್ದುದು ಬಹಳ ಅನುಕೂಲವೇ ಆಯಿತು. ಇವರ ತೀವ್ರಬುದ್ಧಿಬಲವು ಒಂದು ಹೊಸ ಆಡಳಿತದ ಶಾಖೆಯನ್ನೇ ಏರ್ಪಡಿಸಿತು. ಇದರಿಂದ ಅವರ ಚತುರತೆಯು ಕೂಡ ಕಂಡುಬಂದಿತು. ನೀಗ್ರೋಗಳಿಗಾಗಿ ಒಂದು ಆಡಳಿತದ ಶಾಖೆಯು ಇದ್ದೇ ಇದ್ದಿತು. ಹಾಗಾದರೆ ಏಷಿಯಾ ವಾಸಿಗಳಿಗಾಗಿ ಕೂಡ ಇಂತಹದೇ ಒಂದು ಆಡಳಿತದ ವಿಭಾಗ ವೇಕಿರಕೂಡದು ? ಈ ತರ್ಕವನ್ನಂತು ಯಾರೂ ವಿರೋಧಿಸುವ ಹಾಗಿರಲಿಲ್ಲ. ನಾನು ಅಲ್ಲಿಗೆ ತಲಪುವ ಹೊತ್ತಿಗೆ ಈ ಹೊಸ ವಿಭಾಗವು ಆಗಲೇ ಹೂಡಲ್ಪಟ್ಟಿದ್ದಿತು. ಮತ್ತು ಅದು ತನ್ನ ಬಲೆಯನ್ನು ನಿಧಾನವಾಗಿ ಹರಡುತ್ತಿದ್ದಿತು. ದೇಶದಿಂದ ಓಡಿ ಹೋಗಿದ್ದು ವಾಪಸು ಬಂದ ಜನರಿಗೆ ದೇಶದೊಳಕ್ಕೆ ಪ್ರವೇಶಿಸಲು ಅಪ್ಪಣೆ ಕೊಡುತ್ತಿದ್ದ ಅಧಿಕಾರಿಗಳೇ ಎಲ್ಲರಿಗೂ ಅಪ್ಪಣೆಯನ್ನು ಕೊಡಬಹುದಾಗಿದ್ದಿತು. ಆದರೆ ಹೊಸ ವಿಭಾಗದ ಮಧ್ಯಸ್ಥಿಕೆ

ಯಿಲ್ಲದೆ ಇವರು ಏಷಿಯಾವಾಸಿಗಳಿಗೆ ಅಪ್ಪಣೆಕೊಡುವದಕ್ಕಾ ದೀತೆ? ಈ ಹೊಸ ವಿಭಾಗದ ಶಿಫಾರಸಿನಿಂದ ಅಪ್ಪಣೆ ಕೊಟ್ಟುದೇ ಆದರೆ ತಮ್ಮ ಜವಾಬ್ದಾರಿಯು ಕಡಿಮೆಯಾಗಿ ಕೆಲಸವು ಹಗುರ ವಾಗುವದೆಂದು ಅವರು ತರ್ಕಿಸಿದರು. ಆದರೆ ಇದರ ನಿಜಾಂಶ ವೇನೆಂದರೆ ಹೊಸ ವಿಭಾಗಕ್ಕೆ ಹೆಸರಿಗಾದರೂ ಕೆಲಸಬೇಕಾಗಿದ್ದಿತು, ಆಜನರಿಗೆ ಹಣ ಬೇಕಾಗಿದ್ದಿತು. ಆ ವಿಭಾಗಕ್ಕೆ ಕೆಲಸವಿಲ್ಲದಿದ್ದರೆ ಅದಕ್ಕೆ ಯಾವ ಆವಶ್ಯಕತೆಯೂ ಇಲ್ಲದೆ ಅದು ಅಳಿಸಿಹೋಗುವ ಸಂಭವವೊದಗುತ್ತಿದ್ದಿತು. ಆದುದರಿಂದ ಆ ಶಾಖೆಯವರು ತಮ್ಮ ಕೆಲಸವನ್ನು ತಾವೇ ಈ ರೀತಿಯಾಗಿ ಹೊಂದಿಸಿಕೊಂಡರು.

ಅಪ್ಪಣೆಗಾಗಿ ಭಾರತೀಯರು ಈ ಶಾಖೆಗೆ ಅರ್ಜಿಯನ್ನು ಹಾಕಬೇಕಾಗಿದ್ದಿತು. ಎಷ್ಟೋ ದಿನಗಳಾದ ಬಳಿಕ ಇದಕ್ಕೆ ಉತ್ತರ ಬರುತ್ತಿದ್ದಿತು. ಟ್ರಾನ್ಸ್‌ವಾಲಿಗೆ ಹೋಗುವವರು ಬಹುಮಂದಿ ಇರುತ್ತಿದ್ದುದರಿಂದ ದಳ್ಳಾಳಿ (ಮಧ್ಯಸ್ಥಿಕೆಗಾರ)ಗಳ ಸಂದಣಿಯೊಂದು ಹುಟ್ಟಿ ಅವರು ಅಧಿಕಾರಿಗಳೊಡನೆ ಸೇರಿ ಬಡ ಭಾರತೀಯರಿಂದ ಸಾವಿರಾರು ರೂಪಾಯಿಗಳನ್ನು ಸುಲಿಗೆ ಮಾಡುತ್ತಿದ್ದರು. ಸಿಫಾರಸಿಲ್ಲದೆ ಅಪ್ಪಣೆ ಚೀಟಿಯು ದೊರಕುವ ದಿಲ್ಲವೆಂದೂ ಸಿಫಾರಸಿದ್ದರೂ ಕೆಲವು ಸಂದರ್ಭಗಳಲ್ಲಿ ನೂರಾರು ಪೌಂಡುಗಳನ್ನು ತೆರಬೇಕಾಗಿದ್ದಿತೆಂದೂ ನನಗೆ ಹೇಳಿದರು. ಈ ರೀತಿಯಾಗಿ ನನ್ನ ಮುಂದೆ ಯಾವ ದಾರಿಯೂ ಇಲ್ಲದಂತೆ ತೋರಿತು.

ನಾನು ನೇರವಾಗಿ ನನ್ನ ಹಳೆಯ ಮಿತ್ರರಾದ ಡರಬನಿನ ಪೋಲೀಸ್ ಸೂಪರಿಂಟೆಂಡೆಂಟರ ಬಳಿಗೆ ಹೋಗಿ "ನೀವು ದಯೆ ಯಿಟ್ಟು ಅಪ್ಪಣೆ ಕೊಡುವ ಅಧಿಕಾರಿಗಳಿಗೆ ನನ್ನ ಪರಿಚಯವನ್ನು ಮಾಡಿಕೊಟ್ಟು ನನಗೆ ಒಂದು ಅಪ್ಪಣೆಯ ಚೀಟಿಯನ್ನು ಕೊಡಿಸಿ ಕೊಡಿರಿ. ನಾನು ಟ್ರಾನ್ಸ್‌ವಾಲಿನಲ್ಲಿದ್ದೆನೆಂದು ನಿಮಗೆ ತಿಳಿದೇ ಇದೆ." ಎಂದು ಹೇಳಿದೆನು. ಅವರು ಒಡನೆಯೇ ತಲೆಗೆ

ಟೋಪಿಯನ್ನಿಟ್ಟುಕೊಂಡು ನನ್ನ ಜೊತೆಗೆ ಹೋಗಿ ನನಗೆ ಅಪ್ಪಣೆಯ ಚೀಟಿಯನ್ನು ಕೊಡಿಸಿಕೊಟ್ಟರು ರೈಲು ಹೊರಡುವದಕ್ಕೆ ಒಂದು ಗಂಟೆಯ ಹೊತ್ತು ಕೂಡ ಇರಲಿಲ್ಲ. ನನ್ನ ಗಂಟು ಮೂಟೆಗಳನ್ನು ಸಿದ್ಧವಾಗಿಟ್ಟಿದ್ದೆನು. ನಾನು ಸೂಪರಿಂಟೆಂಡೆಂಟ್ ಅಲೆಕ್ಸಾಂಡರರನ್ನು ಅವರ ಸಹಾಯಕ್ಕಾಗಿ ವಂದಿಸಿ ಪ್ರಿಟೋರಿಯಾಕ್ಕೆ ತೆರಳಿದೆನು.

ಆಗ ನನ್ನಿದಿರಿಗಿರುವ ತೊಡಕುಗಳು ನನಗೆ ಈಗ ಚೆನ್ನಾಗಿ ಗೋಚರಕ್ಕೆ ಬಂದುವು. ಪ್ರಿಟೋರಿಯಾವನ್ನು ಸೇರುತ್ತಲು ನಾನು ಅರ್ಜಿಯನ್ನು ಬರೆದೆನು. ಡರಬನಿನಲ್ಲಿ ಭಾರತೀಯರು ತಮ್ಮ ಪ್ರತಿನಿಧಿಗಳ ಹೆಸರುಗಳನ್ನು ಮುಂಚೆಯೇ ತಿಳಿಸಬೇಕಾಗಿದ್ದಂತೆ ನನಗೆ ನೆನಪಿಲ್ಲ. ಆದರೆ ಇಲ್ಲಿ ಹೊಸ ಶಾಖೆಯ ಆಡಳಿತವು ಆಗಲೇ ನಡೆಯುತ್ತಿದ್ದುದರಿಂದ ಮೊದಲೇ ಹೆಸರುಗಳನ್ನು ಕೇಳಿದರು. ನಾನು ಮಿ. ಚೇಂಬರ್‌ಲೇನರೊಡನೆ ಕಲೆಯದಂತೆ ಮಾಡಬೇಕೆಂಬುದೇ ಅಲ್ಲಿನ ಅಧಿಕಾರಿಗಳ ಅಭಿಪ್ರಾಯವೆಂಬುದು ಪ್ರಿಟೋರಿಯಾದ ಭಾರತೀಯರಿಗೆ ಆಗಲೇ ತಿಳಿದಿದ್ದಿತು.

ದುಃಖಕರವಾದರೂ ವಿನೋದವಾದ ಈ ಕತೆಯನ್ನು ಇನ್ನೊಂದು ಪ್ರಕರಣದಲ್ಲಿ ಹೇಳಬೇಕು.

~~~
~~~

## ೨

# ಏಷಿಯದಿಂದ ಬಂದ ನಿರಂಕುಶಾಧಿಕಾರಿಗಳು

ಹೊಸ ಇಲಾಖೆಗೆ ಮುಖ್ಯಸ್ಥರಾಗಿದ್ದ ಅಧಿಕಾರಿಗಳಿಗೆ ನಾನು ಟ್ರಾನ್ಸ್‌ವಾಲನ್ನು ಹೇಗೆ ಪ್ರವೇಶಿಸಿದೆನೆಂಬುದರ ಮರ್ಮವು ಗೊತ್ತಾಗಲಿಲ್ಲ. ಅವರ ಬಳಿಗೆ ಹೋಗುತ್ತಿದ್ದ ಭಾರತೀಯರನ್ನು ಅವರು ವಿಚಾರಿಸಿದರು. ಆದರೆ ಇವರಿಂದ ಸರಿಯಾದ ಯಾವ ವರ್ತಮಾನವೂ ತಿಳಿಯಲಿಲ್ಲ. ನನ್ನ ಹಿಂದಿನ ಗುರುತಿನ ಬಲದ ಮೇಲೆ ಅಪ್ಪಣೆಯ ಚೀಟಿಯಿಲ್ಲದೆಯೇ ನಾನು ಟ್ರಾನ್ಸ್‌ವಾಲನ್ನು ಪ್ರವೇಶಿಸಿರಬಹುದೆಂದು ಅವರು ಊಹಿಸಿದರು. ಈ ಊಹೆಯು ನಿಜವಾಗಿದ್ದರೆ ನನ್ನನ್ನು ಅಕ್ರಮಕ್ಕಾಗಿ ಹಿಡಿಯಬಹುದಾಗಿದ್ದಿತು!

ದೊಡ್ಡ ಯುದ್ಧವು ಮುಗಿದ ಮೇಲೆ ಆಳುವ ಸರಕಾರಕ್ಕೆ ಕೆಲವು ಕಾಲದ ಮಟ್ಟಿಗೆ ಹೆಚ್ಚಿನ ಅಧಿಕಾರಗಳನ್ನು ಕೊಡುವ ಪದ್ಧತಿಯು ಎಲ್ಲಾ ಕಡೆಯಲ್ಲಿಯೂ ಉಂಟು. ದಕ್ಷಿಣ ಆಫ್ರಿಕದಲ್ಲಿಯೂ ಹೀಗೆಯೇ ನಡೆಯಿತು. ಸರಕಾರದವರು ಶಾಂತಿಯನ್ನು ನೆಲೆಗೊಳಿಸುವದಕ್ಕಾಗಿ ಒಂದು ಕಾಯಿದೆಯನ್ನು ಜಾರಿಗೆ ತಂದಿದ್ದರು. ಆ ಕಾಯಿದೆಯ ಪ್ರಕಾರ ಅಪ್ಪಣೆಯಿಲ್ಲದೆ ಟ್ರಾನ್ಸ್‌ವಾಲನ್ನು ಪ್ರವೇಶಮಾಡುವವರನ್ನು ಹಿಡಿದು ಕೈದು ಮಾಡಬಹುದಾಗಿದ್ದಿತು. ಇದರಂತೆ ನನ್ನನ್ನು ಹಿಡಿಯಬೇಕೆಂದು ಚರ್ಚೆಯಾಯಿತು. ಆದರೆ ಅಪ್ಪಣೆಯ ಚೀಟಿಯನ್ನು ತೋರಿಸೆಂದು ನನ್ನನ್ನು ಕೇಳುವಷ್ಟು ಧೈರ್ಯವು ಯಾರಿಗೂ ಉಂಟಾಗಲಿಲ್ಲ.

ಅಧಿಕಾರಿಗಳು ಡರಬನಿಗೆ ಆಗಲೇ ತಂತಿಯನ್ನು ಕೊಟ್ಟಿದ್ದರು. ನಾನು ಅಪ್ಪಣೆಯ ಚೀಟಿಯನ್ನು ಪಡೆದೇ ಪ್ರವೇಶಿಸಿದೆನೆಂದು ಅಲ್ಲಿಂದ ತಿಳಿದುಬರಲು ಅವರಿಗೆ ಆಶಾಭಂಗವಾಯಿತು. ಆದರೆ ಅವರು ಇಷ್ಟಕ್ಕೇ ಸೋತುಹೋಗುವ ಮನುಷ್ಯರಾಗಿರ

ಲಿಲ್ಲ. ನಾನು ಟ್ರಾನ್ಸ್‌ವಾಲನ್ನು ಪ್ರವೇಶಿಸುವದರಲ್ಲಿ ಜಯ ಹೊಂದಿದ್ದರೂ ಚೇಂಬರ್‌ಲೇನರನ್ನು ನೋಡುವ ವಿಷಯದಲ್ಲಿ ಅವರು ನನ್ನನ್ನು ಸೋಲಿಸಬಲ್ಲವರಾಗಿದ್ದರು.

ಆದುದರಿಂದ ಅವರು ನಮ್ಮ ಜನರ ಪ್ರತಿನಿಧಿಗಳಾಗಿ ಚೇಂಬರ್‌ಲೇನರ ಬಳಿಗೆ ಹೋಗುವವರ ಹೆಸರುಗಳನ್ನು ಕೊಡಬೇಕೆಂದು ಕೇಳಿದರು. ಬಣ್ಣದ ದ್ವೇಷವು ದಕ್ಷಿಣ ಆಫ್ರಿಕದಲ್ಲಿ ಎಲ್ಲಾ ಕಡೆಯಲ್ಲೂ ಕಂಡುಬಂದರೂ ಹಿಂದುಸ್ಥಾನದಲ್ಲಿದ್ದಂತೆಯೇ ಇಲ್ಲಿಯೂ ಅಧಿಕಾರವರ್ಗದವರು ನೀಚವಾದ ಮತ್ತು ಒಳಸಂಚಿನ ಮಾರ್ಗಗಳನ್ನನುಸರಿಸುವರೆಂದು ನಾನು ತಿಳಿದುಕೊಂಡಿರಲಿಲ್ಲ. ದಕ್ಷಿಣ ಆಫ್ರಿಕದಲ್ಲಿನ ಇಲಾಖೆಗಳು ಜನರ ನೆಮ್ಮದಿಗಾಗಿ ಸ್ಥಾಪಿತವಾಗಿದ್ದುವು; ಜನರ ಅಭಿಪ್ರಾಯಕ್ಕೆ ಒಳಪಟ್ಟವಾಗಿದ್ದುವು. ಆದುದರಿಂದ ಅಲ್ಲಿನ ಅಧಿಕಾರವರ್ಗದವರಲ್ಲಿ ಒಂದು ತೆರನಾದ ನಯದ ನಡೆವಳಿಕೆಯೂ ನಮ್ರತೆಯೂ ಕಾಣಬರುತ್ತಿದ್ದುವು. ಇದರಿಂದ ಅಲ್ಲಿನ ಬಿಳಿಯ ಜನರಲ್ಲದೆ ಇತರರೂ ತಕ್ಕಮಟ್ಟಿಗೆ ಲಾಭ ಹೊಂದುತ್ತಿದ್ದರು. ಏಷಿಯದ ಅಧಿಕಾರಿಗಳ ಜೊತೆಗೇ ಅವರ ನಿರಂಕುಶಾಧಿಕಾರವೂ ಈ ಅಂಕೆಯಿಲ್ಲದ ಜನರಿಗೆ ಅಲ್ಲಿ ಮಂದಟ್ಟಾಗಿದ್ದ ಪದ್ಧತಿಗಳೂ ಇಲ್ಲಿ ಕಾಲಿಟ್ಟುವು. ದಕ್ಷಿಣ ಆಫ್ರಿಕದಲ್ಲಿ ಒಂದು ವಿಧವಾದ ಪ್ರಜಾಪ್ರತಿನಿಧಿ ಪ್ರಭುತ್ವವಿದ್ದಿತು. ಆದರೆ ಏಷಿಯದಿಂದ ಇವರು ತಂದ ಸರಕು ಕೇವಲ ನಿರಂಕುಶ ಪ್ರಭುತ್ವ. ಏಕೆಂದರೆ ಏಷಿಯದ ಜನರಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವಿರಲಿಲ್ಲ, ಅವರನ್ನು ವಿದೇಶೀಯರು ಆಳುತ್ತಿದ್ದರು. ದಕ್ಷಿಣ ಆಫ್ರಿಕದಲ್ಲಿನ ಫರಂಗಿಯವರು ಬೇರೆ ಕಡೆಯಿಂದ ಅಲ್ಲಿ ಬಂದು ನೆಲೆಸಿದವರಾಗಿದ್ದರು. ಅವರು ದಕ್ಷಿಣ ಆಫ್ರಿಕದ ಪ್ರಜೆಗಳಾಗಿ ಇಲಾಖೆಯ ಅಧಿಕಾರಗಳ ಮೇಲೆ ಅಂಕೆಯನ್ನಿಟ್ಟಿದ್ದರು. ಆದರೆ ಏಷಿಯದಿಂದ ನಿರಂಕುಶ ಪ್ರಭುಗಳು ಚಿತ್ತೈಸಿದುದರಿಂದ ಈಗ ಭಾರತೀಯರು ನೆಲದ ಮೇಲಿನ ಹಾವಿಗೂ ನೀರಿನೊಳಗಿನ

ಮೊಸಳೆಗೂ ಮಧ್ಯೆ ಸಿಕ್ಕಿದ ದುರ್ಭಾಗ್ಯನಂತೆ ಉಭಯಸಂಕಟಕ್ಕೀಡಾದರು.

ಈ ನಿರಂಕುಶವರ್ತನೆಯ ಪ್ರಭಾವವು ನನ್ನ ಮೇಲೂ ತಕ್ಕ ಮಟ್ಟಿಗೆ ಬಿದ್ದಿತು. ಮೊದಲು ನನಗೆ ಆ ಇಲಾಖೆಯ ಮುಖ್ಯಾಧಿಕಾರಿಯನ್ನು (ಈತನು ಸಿಲೋನಿನಿಂದ ಬಂದಿದ್ದನು) ನೋಡಬೇಕೆಂದು ಆಜ್ಞೆಯಾಯಿತು. 'ಆಜ್ಞೆ' ಯೆಂಬ ಮಾತನ್ನು ನಾನು ಉಪಯೋಗಿಸಿರುವದು ಉತ್ಪ್ರೇಕ್ಷೆಯಾಗಿ ಕಂಡೀತೆಂದು ನಾನು ಈ ವಿಚಾರವನ್ನು ಇನ್ನೂ ವಿಶದವಾಗಿ ಹೇಳುತ್ತೇನೆ. ನನಗೆ ಬರವಣಿಗೆಯಲ್ಲಿ ಅಪ್ಪಣೆಯನ್ನೇನೂ ಕಳುಹಿಸಿರಲಿಲ್ಲ. ಭಾರತೀಯರ ಪ್ರಮುಖರು ಈ ಇಲಾಖೆಯ ಅಧಿಕಾರಿಗಳನ್ನು ಅನೇಕ ಬಾರಿ ನೋಡಬೇಕಾಗುತ್ತಿದ್ದಿತು. ಇವರಲ್ಲಿ ತಯ್ಯಬ್ ಹಾಜಿ ಖಾನ್ ಮಹಮದ್ ಸೇಠರೂ ಒಬ್ಬರಾಗಿದ್ದರು. ಇಲಾಖೆಯ ಮುಖ್ಯಾಧಿಕಾರಿಯು ಇವರನ್ನು ನಾನು ಯಾರು, ಅಲ್ಲಿಗೆ ಏಕೆ ಬಂದಿದ್ದೆ ಎಂದು ಕೇಳಿದರು.

ತಯ್ಯಬ್ ಸೇಠರು "ಅವರು ನಮ್ಮ ಸಲಹೆಗಾರರು. ನಾವು ಕರೆದುದರಿಂದ ಅವರು ಇಲ್ಲಿಗೆ ಬಂದಿದ್ದಾರೆ" ಎಂದರು.

"ಹಾಗಾದರೆ ನಾವು ಇಲ್ಲಿ ಇರುವದೇತಕ್ಕೆ? ನಿಮ್ಮ ರಕ್ಷಣೆಗಾಗಿ ನಮ್ಮನ್ನು ನೇಮಿಸಿಲ್ಲವೇನು? ಇಲ್ಲಿಯ ಸ್ಥಿತಿಗತಿಗಳು ಗಾಂಧಿಗೇನು ಗೊತ್ತು?" ಎಂದು ಸಾಹೇಬರು ಕೇಳಿದರು.

ತಯ್ಯಬ್ ಸೇಠರು ಈ ಆಪಾದನೆಗೆ ಆದಷ್ಟು ಸಮರ್ಪಕವಾಗಿ ಉತ್ತರಕೊಟ್ಟರು: "ನೀವು ಇಲ್ಲಿರುವದೇನೋ ನಿಜ. ಆದರೆ ಗಾಂಧಿ ನಮ್ಮವರು. ಅವರಿಗೆ ನಮ್ಮ ಭಾಷೆ ಗೊತ್ತು. ನಮ್ಮ ಮನಸ್ಸು ಅವರಿಗೆ ತಿಳಿಯುತ್ತದೆ. ನೀವು ಎಷ್ಟೇ ಆಗಲಿ ಅಧಿಕಾರವರ್ಗಕ್ಕೆ ಸೇರಿದವರು."

ನನ್ನನ್ನು ತಮ್ಮೆದುರಿಗೆ ಕರೆದುಕೊಂಡು ಬರಬೇಕೆಂದು ಸಾಹೇಬರು ತಯ್ಯಬ್ ಸೇಠರಿಗೆ ಅಪ್ಪಣೆಯನ್ನಿತ್ತರು. ತಯ್ಯಬ್ ಸೇಠರು

ಮತ್ತು ಇತರರೊಂದಿಗೆ ನಾನು ಸಾಹೇಬರ ಬಳಿಗೆ ಹೋದೆನು. ನಮ್ಮನ್ನು ಕುಳಿತುಕೊಳ್ಳಿರೆಂದು ಹೇಳಲಿಲ್ಲ. ನಾವೆಲ್ಲರೂ ನಿಂತು ಕೊಂಡೇ ಇದ್ದೆವು.

"ನೀನು ಇಲ್ಲಿಗೆ ಏತಕ್ಕೆ ಬಂದಿದ್ದೀಯೆ?" ಎಂದು ಸಾಹೇಬರು ನನ್ನನ್ನು ಕುರಿತು ಕೇಳಿದರು.

"ನನ್ನ ಭಾರತೀಯ ಸಹೋದರರು ಕರೆದುದರಿಂದ ಅವರಿಗೆ ಸಲಹೆಕೊಟ್ಟು ಸಹಾಯಮಾಡುವದಕ್ಕಾಗಿ ಇಲ್ಲಿಗೆ ಬಂದಿದ್ದೇನೆ." ಎಂದು ಉತ್ತರಕೊಟ್ಟೆನು.

"ಆದರೆ ನಿನಗೆ ಇಲ್ಲಿಗೆ ಬರುವದಕ್ಕೆಯಾವ ಹಕ್ಕೂ ಇಲ್ಲವೆಂದು ನಿನಗೆ ಗೊತ್ತಿಲ್ಲವೆ? ನಿನಗೆ ಕೊಟ್ಟ ಅಪ್ಪಣೆಯ ಚೀಟಿಯು ತಿಳಿಯದೆ ತಪ್ಪಿನಿಂದ ಕೊಟ್ಟುದು. ನಿನ್ನನ್ನು ಇಲ್ಲಿಯೇ ನೆಲೆಸಿದ ಭಾರತೀಯ ನೆಂದು ಎಣಿಸಲಾಗುವದಿಲ್ಲ. ನೀನು ಹಿಂತಿರುಗಬೇಕು. ನೀನು ಮಿ. ಚೇಂಬರ್‌ಲೇನರನ್ನು ನೋಡಲಾಗದು. ಭಾರತೀಯರ ರಕ್ಷಣೆಗಾಗಿಯೇ ಏಷಿಯಾ ಇಲಾಖೆಯನ್ನು ಇಲ್ಲಿ ಏರ್ಪಡಿಸಿರು ವದು. ಒಳ್ಳೆಯದು, ಇನ್ನು ನೀನು ಹೊರಡಬಹುದು." ಎಂದು ಹೇಳಿ ನಾನು ಉತ್ತರಕೊಡಲು ಅವಕಾಶಕೊಡದೆ ಅವರು ನನ್ನನ್ನು ಕಳುಹಿಸಿದರು.

ಆದರೆ ನನ್ನ ಜೊತೆಗೆ ಬಂದವರನ್ನು ನಿಲ್ಲಿಸಿಕೊಂಡು ಅವರನ್ನು ಚೆನ್ನಾಗಿ ಬೈದು ನನ್ನನ್ನು ವಾಪಸು ಕಳುಹಿಸಿಕೊಡಬೇಕೆಂದು ಅವರಿಗೆ ಸಲಹೆಕೊಟ್ಟರು.

ಅವರು ಮುಖವನ್ನು ತಗ್ಗಿಸಿಕೊಂಡು ಹಿಂತಿರುಗಿದರು. ಈ ರೀತಿಯಾಗಿ ನಮಗೆ ಅನಿರೀಕ್ಷಿತವಾದ ಸಮಸ್ಯೆಯೊಂದು ಒದಗಿತು.



೩

# ಅಪಮಾನವನ್ನು ನುಂಗಿದುದು

ಈ ಅಪಮಾನದಿಂದ ನನಗೆ ಬಹಳ ದುಃಖವಾಯಿತು. ಆದರೆ ಇಂತಹ ಅಪಮಾನವನ್ನು ಹಿಂದೆ ಅನೇಕ ಸಲ ನುಂಗಿದ್ದೆನಾದುದರಿಂದ ಇದನ್ನು ಸಹಿಸುವದು ನನಗೆ ಅಭ್ಯಾಸವಾಗಿಹೋಗಿದ್ದಿತು. ಈ ಅಪಮಾನವನ್ನು ನುಂಗಿಕೊಂಡು ನಿಷ್ಪಕ್ಷಪಾತ ದೃಷ್ಟಿಯಿಂದ ಈ ಸಂದರ್ಭದಲ್ಲಿ ನನಗೆ ಕಂಡುಬರುವ ಕರ್ತವ್ಯಮಾರ್ಗವನ್ನನುಸರಿಸ ಬೇಕೆಂದು ನಿಶ್ಚಯಿಸಿದೆನು.

ಮೇಲೆ ಹೇಳಿದ ಅಧಿಕಾರಿಯಿಂದ ಒಂದು ಪತ್ರವೂ ಬಂದಿತು. ಅದರಲ್ಲಿ ಬರೆದಿದ್ದುದೇನೆಂದರೆ:—"ಎಂ. ಗಾಂಧಿಯವರು ಎಂ. ಚೇಂಬರ್‌ಲೇನರನ್ನು ಆಗಲೇ ಡರಬನಿನಲ್ಲಿ ನೋಡಿರುವದರಿಂದ ಇಲ್ಲಿನ ಪ್ರತಿನಿಧಿಗಳ ಪಟ್ಟಿಯಿಂದ ಅವರ ಹೆಸರನ್ನು ತೆಗೆದುಹಾಕು ವದು ಆವಶ್ಯಕವಾಗಿ ತಿಳಿದುಬಂದಿದೆ."

ನನ್ನ ಜೊತೆಗಾರರಿಗೆ ಈ ಪತ್ರವನ್ನು ಸಹಿಸುವದಕ್ಕಾಗಲಿಲ್ಲ. ತಾವು ಪ್ರತಿನಿಧಿಗಳನ್ನೇ ಕಳುಹಿಸಕೂಡದೆಂದು ಅಭಿಪ್ರಾಯ ಪಟ್ಟರು. ನಾನು ನಮ್ಮ ಜನರ ಕಷ್ಟವಾದ ಪರಿಸ್ಥಿತಿಯನ್ನು ಅವರ ಗಮನಕ್ಕೆ ತಂದೆನು :

"ನೀವು ಎಂ. ಚೇಂಬರ್‌ಲೇನರನ್ನು ಹೋಗಿ ನೋಡದೆ ಇದ್ದರೆ ಅದಕ್ಕೆ ಅವರು ನಿಮಗೆ ಇಲ್ಲಿ ಯಾವ ಕಷ್ಟವೂ ಇಲ್ಲವೆಂದು ಅರ್ಥ ಕಟ್ಟುತ್ತಾರೆ. ಮತ್ತು ನಾವು ಹೇಳಬೇಕಾದುದನ್ನೆಲ್ಲಾ ಹೇಗಿದ್ದರೂ ಬರೆದೇ ಕೊಡಬೇಕಾಗುತ್ತದೆ. ಅದು ಸಿದ್ಧವಾಗಿಯೇ ಇದೆ. ಅದನ್ನು ನಾನು ಓದಬೇಕೋ ಇನ್ನಾರಾದರೂ ಓದ ಬೇಕೋ ಎಂಬುದು ಮುಖ್ಯವಾದುದಲ್ಲ. ಎಂ. ಚೇಂಬರಲೇನ

ರೇನೂ ಈ ವಿಷಯವನ್ನು ನಮ್ಮೊಡನೆ ಚರ್ಚಿಸುವದಿಲ್ಲ. ನನಗಾಗಿರುವ ಅಪಮಾನವನ್ನು ನಾವು ಸಹಿಸಬೇಕೆಂದು ನನಗೆ ತೋರುತ್ತದೆ.'' ಎಂದೆನು.

ನಾನು ಇದನ್ನು ಮುಗಿಸುವಷ್ಟರಲ್ಲಿಯೇ ತಯ್ಯಬ್ ಸೇಠರು ''ನಿಮಗೆ ಅಪಮಾನವಾದರೆ ನಮ್ಮ ಜನರಿಗೆಲ್ಲಾ ಅಪಮಾನವಾಗಲಿಲ್ಲವೇನು? ನೀವು ನಮ್ಮ ಪ್ರತಿನಿಧಿಗಳೆಂಬುದನ್ನು ನಾವು ಮರೆಯುವದು ಹೇಗೆ?'' ಎಂದರು.

''ನೀವು ಹೇಳುವದು ಸರಿಯೇ. ಆದರೆ ಇಂತಹ ಅಪಮಾನವನ್ನು ನಮ್ಮ ಕೋಮಿನವರು ಕೂಡ ನುಂಗಬೇಕಾಗುತ್ತದೆ. ನಮಗೆ ಬೇರೆ ಉಪಾಯವೇನಿದೆ?'' ಎಂದೆನು.

''ಆದುದಾಗಲಿ, ತಿಳಿದೂ ತಿಳಿದೂ ನಾವೇ ನಮ್ಮ ಮೇಲೆ ಪುನಃ ಅಪಮಾನವನ್ನೇಕೆ ತಂದುಕೊಳ್ಳಬೇಕು? ನಮ್ಮ ಪರಿಸ್ಥಿತಿಯು ಈಗಿರುವದಕ್ಕಿಂತ ಕೇಡಾಗುವಹಾಗಿಲ್ಲ. ನಮಗೆ ಕಳಿಮುಕೊಳ್ಳುವದಕ್ಕೆ ಈಗ ಇರುವ ಹಕ್ಕು ತಾನೆ ಏನು?'' ಎಂದು ತಯ್ಯಬ್ ಸೇಠರು ಕೇಳಿದರು.

ಈ ಆವೇಶಪೂರಿತವಾದ ಉತ್ತರವು ನನ್ನ ಒಪ್ಪಿಗೆಗೆ ಬಂದಿತು. ಆದರೆ ಇದರಿಂದ ಈಗ ಏನೂ ಉಪಯೋಗವಿಲ್ಲವೆಂಬುದು ಕೂಡ ನನಗೆ ಚೆನ್ನಾಗಿ ತಿಳಿದಿದ್ದಿತು. ನಮ್ಮ ಕೋಮಿನ ಯೋಗ್ಯತೆಯು ಅಳತೆಯು ನನ್ನ ಅನುಭವಕ್ಕೆ ಚೆನ್ನಾಗಿ ಬಂದಿದ್ದಿತು. ಆದುದರಿಂದ ನಾನು ನನ್ನ ಮಿತ್ರರನ್ನು ಸಮಾಧಾನಪಡಿಸಿ ನನಗೆ ಬದಲಾಗಿ ಮಿ. ಜಾರ್ಜ್ ಗಾಡ್‌ಫ್ರೆಯುವರನ್ನು ಕರೆದುಕೊಂಡು ಹೋಗಬೇಕೆಂದು ಸಲಹೆಕೊಟ್ಟೆನು. ಜಾರ್ಜ ಗಾಡ್‌ಫ್ರೆಯುವರೊಬ್ಬ ಭಾರತೀಯ ಬ್ಯಾರಿಸ್ಟರರು.

ಗಾಡ್‌ಫ್ರೆಯುವರು ಪ್ರತಿನಿಧಿಗಳ ಮುಂದಾಳಾಗಿ ಚೇಂಬರ್‌ಲೇನರ ಬಳಿಗೆ ಹೋದುದೂ ಆಯಿತು. ಮಿ. ಚೇಂಬರ್‌ಲೇನರು

ತಾವು ಉತ್ತರಕೊಡುವಾಗ ನನ್ನನ್ನು ಸೇರಿಸದೆ ಇದ್ದ ವಿಚಾರ ವಾಗಿಯೂ ಒಂದೆರಡು ಮಾತಾಡಿದರು.''ಒಬ್ಬನೇ ಪ್ರತಿನಿಧಿಯನ್ನು ಬಾರಿಬಾರಿಗೂ ಕೇಳುವದಕ್ಕಿಂತ ಹೊಸಹೊಸ ಜನರೊಂದಿಗೆ ಕಲೆಯುವದು ಉತ್ತಮವಲ್ಲವೆ?'' ಇದೇ ಮುಂತಾಗಿ ಹೇಳಿ ಅಪಮಾನದ ಗಾಯದ ಉರಿಯನ್ನು ಆರಿಸುವದಕ್ಕೆ ಪ್ರಯತ್ನ ಪಟ್ಟರು.

ಆದರೆ ಇದರಿಂದ ನಮ್ಮ ಕೋಮಿನ ಮತ್ತು ನನ್ನ ಕೆಲಸವು ಮುಗಿದುಹೋಗುವದರ ಬದಲಾಗಿ ಇಸಗ್ಗಾ ಶುರುವಾಯಿತು. ಪುನಃ 'ಓಂ ಶ್ರೀ ಗಣೇಶಾಯನಮಃ' ದಿಂದ ಪ್ರಾರಂಭಿಸಬೇಕಾಯಿತು.

''ನಿಮ್ಮ ಆಜ್ಞೆಯ ಪ್ರಕಾರವೇ ನಮ್ಮ ಜನರು ಯುದ್ಧಕ್ಕೆ ಹೋಗಿ ಸಹಾಯಮಾಡಿದುದು. ಈಗ ಕಡೆಗೆ ಅದರ ಪರಿಣಾಮವು ಇದೇ ತಾನೆ?''—ಈ ರೀತಿಯಾಗಿ ನನ್ನನ್ನು ಕೆಲವರು ಹೀಯಾಳಿಸಿದರು. ಆದರೆ ನನ್ನನ್ನು ಇದು ತಟ್ಟಲಿಲ್ಲ. ''ಆ ಸಲಹೆಗಾಗಿ ನಾನೇನೂ ಈಗ ಪಶ್ಚಾತ್ತಾಪಪಡುವದಿಲ್ಲ. ನಾವು ಯುದ್ಧದಲ್ಲಿ ಸೇರಿದುದರಿಂದ ಸರಿಯಾದ ಕೆಲಸವನ್ನೇ ಮಾಡಿದೆವೆಂದು ನಾನು ಈಗ ಕೂಡ ಸಾಧಿಸುತ್ತೇನೆ. ಅದರಿಂದ ನಾವು ನಮ್ಮ ಕರ್ತವ್ಯವನ್ನು ಪಾಲನೆ ಮಾಡಿದೆವೇ ಹೊರತು ಇನ್ನೇನೂ ಅಲ್ಲ. ನಮ್ಮ ಕರ್ತವ್ಯದ ಫಲವನ್ನು ನಾವು ಹೊಂದುವ ಆಸೆಯನ್ನು ಇಟ್ಟುಕೊಂಡಿರಬಾರದು. ಆದರೆ ಒಳ್ಳೆಯ ಕೆಲಸದ ಫಲವು ಒಳಿತಾಗಿಯೇ ಇರುವುದೆಂದು ನನಗೆ ದೃಢವಾದ ನಂಬಿಕೆಯಿದೆ. ಮತ್ತು ಈಗ ನಡೆದುಹೋದ ವಿಷಯಗಳ ವಿಚಾರವಾಗಿ ಯೋಚಿಸುವದಕ್ಕಿಂತ ಈಗ ನಮ್ಮ ಕರ್ತವ್ಯವೇನೆಂದು ಯೋಚಿಸುವದು ಹೆಚ್ಚು ಆವಶ್ಯಕ. ಆದುದರಿಂದ ಬನ್ನಿ, ಈ ವಿಚಾರವಾಗಿ ಯೋಚನೆಮಾಡೋಣ.'' ಎಂದು ಹೇಳಿದೆನು.

ಇದಕ್ಕೆ ಎಲ್ಲರೂ ಒಪ್ಪಿದರು.

ನಾನು ಪುನಃ ''ಸರಿಯಾಗಿ ನೋಡಿದರೆ ನೀವು ನನ್ನನ್ನು ಯಾವ ಕಾರ್ಯದ ಉದ್ದೇಶವಾಗಿ ಇಲ್ಲಿಗೆ ಕರೆಸಿದರೋ ಅದು

ಮುಗಿದೇ ಇದೆಯೆಂದು ಹೇಳಬಹುದು. ಆದರೆ ನೀವು ನನಗೆ ಅಪ್ಪಣೆ ಕೊಟ್ಟರೂ ನಾನು ಸಾಧ್ಯವಾದಮಟ್ಟಿಗೆ ಟ್ರಾನ್ಸ್‌ವಾಲನ್ನು ಬಿಟ್ಟು ಹೋಗಕೂಡದೆಂದು ನಂಬುತ್ತೇನೆ. ಇನ್ನು ಮೇಲೆ ನಾನು ನನ್ನ ಕೆಲಸವನ್ನು ನೇಟಾಲಿನಿಂದ ನಡೆಸುವದರ ಬದಲು ಇಲ್ಲಿಂದ ನಡೆಸಬೇಕು. ಇನ್ನು ಹಿಂದು ಸ್ಥಾನಕ್ಕೆ ಒಂದು ವರ್ಷದೊಳಗಾಗಿ ಹಿಂತಿರುಗುವ ಯೋಚನೆಯನ್ನು ಬಿಟ್ಟು ಇಲ್ಲಿಯೇ ವಕೀಲಿ ಕೆಲಸ ಮಾಡಲು ಸನ್ನದನ್ನು ಪಡೆಯಲು ಯತ್ನಿಸಬೇಕು. ಈ ಹೊಸ ಇಲಾಖೆಯನ್ನು ನಾನು ಇದಿರಿಸಬಲ್ಲೆನೆಂಬ ಭರವಸೆಯು ನನಗುಂಟು. ನಾವು ಹೀಗೆ ಇದಿರಿಸದೇ ಇದ್ದರೆ ನಮ್ಮ ಜನರನ್ನು ಇಲ್ಲಿಂದ ಓಡಿಸುವದಲ್ಲದೆ ಅವರನ್ನು ಸುಲಿಗೆ ಮಾಡುವ ಸಂಭವ ಕೂಡ ಉಂಟು. ಪ್ರತಿ ದಿನವೂ ನಮ್ಮ ಕೋಮಿನವರಿಗೆ ಹೊಸ ಹೊಸ ಅಪಮಾನಗಳೊದಗಿ ಅವರ ಸ್ಥಿತಿಯು ಇನ್ನೂ ಕೇಡಾಗುತ್ತಾ ಹೋಗುತ್ತದೆ. ಮಿ. ಚೇಂಬರ್‌ಲೇನರು ನನ್ನನ್ನು ನೋಡದೆ ಇದ್ದುದೂ ಆ ಅಧಿಕಾರಿಯು ನನಗೆ ಅಪಮಾನ ಮಾಡಿದುದೂ ಮುಂದೆ ನಮ್ಮ ಕೋಮಿಗೆ ಉಂಟಾಗಬಹುದಾದ ಅಪಮಾನದ ಇದಿರಿಗೆ ಅತ್ಯಲ್ಪವೆಂದು ಹೇಳಬಹುದು. ಬಿಳಿಯ ಜನರ ಇಚ್ಛೆಯಂತೆ ಪಶು ಜೀವನದಂತೆ ಹೇಯವಾದ ಜೀವನವನ್ನು ನಡೆಸಿಕೊಂಡು ಸಹಿಸಿಕೊಂಡಿರುವದು ಅಸಾಧ್ಯ.'' ಎಂದು ಹೇಳಿದೆನು.

ಈ ರೀತಿಯಾಗಿ ನಾನು ಮಾತುಕತೆಯನ್ನು ಆಡಲು ಪ್ರಾರಂಭಮಾಡಿ ಪ್ರಿಟೋರಿಯಾದ ಮತ್ತು ಜೋಹಾನ್ಸ್‌ಬರ್ಗಿನ ಮುಖ್ಯ ಮುಖ್ಯ ಭಾರತೀಯರೊಡನೆ ಚರ್ಚಿಸಿ ಕಡೆಗೆ ಜೋಹಾನ್ಸ್‌ಬರ್ಗಿನಲ್ಲಿ ನನ್ನ ಕಚೇರಿಯನ್ನು ಹೂಡಲು ನಿಶ್ಚಯಿಸಿದೆನು.

ಟ್ರಾನ್ಸ್‌ವಾಲಿನಲ್ಲಿ ವಕೀಲಿ ಕೆಲಸವನ್ನು ನಡೆಸಲು ನನಗೆ ಸನ್ನದು ದೊರೆಯುವ ವಿಷಯದಲ್ಲಿ ನನಗೇನೋ ಹೆಚ್ಚಾದ ಸಂಶಯವಿದ್ದಿತು. ಆದರೆ ಅಲ್ಲಿನ ವಕೀಲರ ಮಂಡಲಿಯು ನನ್ನ

ಅರ್ಜಿಯನ್ನು ವಿರೋಧಿಸಲಿಲ್ಲ. ಅಲ್ಲಿನ ಮುಖ್ಯ ನ್ಯಾಯಸ್ಥಾನವು ನನಗೆ ಅಪ್ಪಣೆಯನ್ನು ಕೊಟ್ಟಿತು. ಭಾರತೀಯರಿಗೆ ಕಚೇರಿಗಾಗಿ ಒಳ್ಳೆಯ ಸ್ಥಳದಲ್ಲಿ ಮನೆಯು ಸಿಕ್ಕುವದು ಕೂಡ ಸುಲಭದ ಮಾತಾಗಿರಲಿಲ್ಲ. ಆಗ ಅಲ್ಲಿ ವ್ಯಾಪಾರಿಗಳಾಗಿದ್ದ ಎಂ. ರಿಚ್ ಅವರೊಡನೆ ನನಗೆ ಅಷ್ಟು ಹೊತ್ತಿಗೆ ಚೆನ್ನಾಗಿ ಪರಿಚಯವಾಗಿದ್ದಿತು. ಅವರಿಗೆ ಗೊತ್ತಿದ್ದ ಒಬ್ಬ ಮನೆಗಳ ದಳ್ಳಾಳಿಯ ಮೂಲಕ ಒಳ್ಳೆಯ ಸ್ಥಳದಲ್ಲಿ ಒಂದು ಮನೆಯನ್ನು ನನ್ನ ಕಚೇರಿಗಾಗಿ ತೆಗೆದುಕೊಂಡು ವಕೀಲಿ ಕೆಲಸವನ್ನು ಪ್ರಾರಂಭಿಸಿದೆನು.

೪

# ತ್ಯಾಗವೃತ್ತಿಯು ಹೆಚ್ಚಿದುದು

ಟ್ರಾನ್ಸ್‌ವಾಲಿನಲ್ಲಿ ನಮ್ಮ ಜನರ ಹಕ್ಕುಗಳಿಗಾಗಿ ಹೇಗೆ ಹೊಡೆದಾಡಬೇಕಾಯಿತು ಮತ್ತು ಏಷಿಯಾ ಇಲಾಖೆಯ ಅಧಿಕಾರಿಗಳೊಂದಿಗೆ ಯಾವ ರೀತಿಯಾಗಿ ವ್ಯವಹರಿಸಬೇಕಾಯಿತು, ಇವೇ ಮುಂತಾದ ವಿಷಯಗಳನ್ನು ವರ್ಣಿಸುವದಕ್ಕೆ ಮೊದಲು ನನ್ನ ಜೀವನದ ಇತರ ಕೆಲವು ವಿಚಾರಗಳ ಕಡೆಗೆ ಲಕ್ಷ್ಯಕೊಡುವದು ಆವಶ್ಯಕವಾಗಿದೆ.

ಇದುವರೆಗೂ ನನ್ನ ಮನೋವೃತ್ತಿಯು ದ್ವಂದ್ವವಾಗಿದ್ದಿತು. ತ್ಯಾಗವೃತ್ತಿಯ ಜೊತೆಗೆ ಭವಿಷ್ಯತ್ತಿಗಾಗಿ ಹಣವನ್ನು ಕೂಡಿಡಬೇಕೆಂಬ ಇಚ್ಛೆಯೂ ಇದ್ದಿತು. ಪರಮಾರ್ಥದ ಜೊತೆಗೆ ಸ್ವಾರ್ಥವೂ ಸೇರಿದ್ದಿತು.

ಮುಂಬಯಿಯಲ್ಲಿ ನಾನು ನನ್ನ ಕಚೇರಿಯನ್ನು ಹೂಡಿದ ಸಮಯದಲ್ಲಿ ಒಂದು ಅಮೆರಿಕನ್ ಜೀವವಿಮೆ ಕಂಪೆನಿಯ ದಳ್ಳಾಳಿಯು ಅಲ್ಲಿಗೆ ಬಂದಿದ್ದನು. ಆತನು ನಗುಮುಖದ ಸವಿನುಡಿಯ ಮನುಷ್ಯನಾಗಿದ್ದನು. ಆತನು ತಾನು ನನ್ನ ಪೂರ್ವಸ್ನೇಹಿತನೋ ಎಂಬಂತೆ ನನ್ನ ಭವಿಷ್ಯತ್ತಿನ ವಿಚಾರವಾಗಿ ಮಾತಾಡಿದನು : ''ಅಮೆರಿಕಾದಲ್ಲಿ ನಿಮ್ಮ ದರ್ಜೆಯ ಜನರೆಲ್ಲರೂ ಜೀವವಿಮೆಯನ್ನು ಮಾಡಿಯೇ ಮಾಡುತ್ತಾರೆ. ನೀವು ಕೂಡ ಜೀವವಿಮೆಯನ್ನು ಮಾಡಿ ಭವಿಷ್ಯತ್ತಿನ ವಿಚಾರವಾಗಿ ನಿಶ್ಚಿಂತರಾಗಿರಬೇಡವೆ? ಮನುಷ್ಯನು ಎಲ್ಲಿಯವರೆಗೆ ಜೀವಿಸಿರುವನೆಂಬುದಕ್ಕೆ ಭರವಸೆಯುಂಟೆ? ಅಮೆರಿಕಾದಲ್ಲಿ ನಾವಂತು ಜೀವವಿಮೆ ಮಾಡುವದು ಧಾರ್ಮಿಕ ಕರ್ತವ್ಯವೆಂದೇ ಎಣಿಸುತ್ತೇವೆ. ಸ್ವಲ್ಪ ಹಣಕ್ಕೆ ಜೀವವಿಮೆಮಾಡಬೇಕೆಂದು ನಾನು ನಿಮ್ಮನ್ನು ಪ್ರೇರಿಸಲಾಗದೆ?''

ಇಲ್ಲಿಯವರೆಗೆ ದಕ್ಷಿಣ ಆಫ್ರಿಕದಲ್ಲೂ ಹಿಂದುಸ್ತಾನದಲ್ಲೂ ಅನೇಕ ಜೀವವಿಮೆಯ ದಳ್ಳಾಳಿಗಳು ನನ್ನನ್ನು ಕಂಡಿದ್ದರು. ಆದರೆ ಇವರಲ್ಲಿ ಒಬ್ಬರಿಗೂ ನಾನು ಅವಕಾಶವನ್ನು ಕೊಟ್ಟಿರಲಿಲ್ಲ. ಏಕೆಂದರೆ ಜೀವವಿಮೆ ಮಾಡುವದೆಂದರೆ ಒಂದು ವಿಧವಾದ ಅಧೈರ್ಯ ವೆಂದೂ ದೇವರಲ್ಲಿ ಅಪನಂಬಿಕೆಯೆಂದೂ ನಾನು ಎಣಿಸಿದ್ದೆನು. ಆದರೆ ಈ ಸಲ ನಾನು ಅಮೆರಿಕದ ದಳ್ಳಾಳಿಯ ಬಲೆಗೆ ಬಿದ್ದೆನು. ಆತನು ವಾದಿಸುತ್ತಾಹೋದಹಾಗೆಲ್ಲಾ ನನ್ನ ಹೆಂಡತಿಮಕ್ಕಳ ಚಿತ್ರವು ನನ್ನ ಕಣ್ಣೆದುರಿಗೆ ನಿಂತಿತು. "ಎಲಾ ಪ್ರಾಣಿ, ನೀನು ನಿನ್ನ ಹೆಂಡತಿಯ ಮುಕ್ಕಾಲುಪಾಲು ಒಡವೆಗಳನ್ನೆಲ್ಲಾ ಮಾರಿಹಾಕಿ ಬಿಟ್ಟಿದ್ದಿ. ನಿನಗೆ ಏನಾದರೂ ಸಂಭವಿಸಿದರೆ ಆಕೆಯನ್ನು ಮತ್ತು ನಿನ್ನ ಮಕ್ಕಳನ್ನೂ ನೋಡಿಕೊಳ್ಳುವ ಹೊರೆಯು ಪಾಪ ತಂದೆ ಯಂತೆ ನಿನ್ನನ್ನು ಪೋಷಿಸಿದ ನಿಮ್ಮಣ್ಣನ ಮೇಲೆ ಬೀಳುವದಿಲ್ಲವೆ? ಇಲ್ಲ, ಇಲ್ಲ, ಇದು ಕೇವಲ ಅನುಚಿತ." ಎಂದು ನನ್ನಲ್ಲಿ ನಾನೇ ತರ್ಕಮಾಡಿಕೊಂಡು ೧೦,೦೦೦ ರೂಪಾಯಿಗೆ ಜೀವವಿಮೆಯನ್ನು ಮಾಡಿದೆನು.

ಆದರೆ ದಕ್ಷಿಣ ಆಫ್ರಿಕದಲ್ಲಿ ನನ್ನ ಜೀವನದ ರೀತಿಯು ಬದಲಾಯಿಸಿದಹಾಗೆಲ್ಲಾ ನನ್ನ ಮನೋವೃತ್ತಿಯೂ ವ್ಯತ್ಯಾಸ ವಾಗುತ್ತಾಬಂದಿತು. ಈ ಆಪತ್ಕಾಲದಲ್ಲಿ ದಕ್ಷಿಣ ಆಫ್ರಿಕದಲ್ಲಿ ನಾನು ಕೈಕೊಂಡ ಕಾರ್ಯಗಳೆಲ್ಲಾ ದೇವರನ್ನು ಸಾಕ್ಷಿಯಾಗಿಟ್ಟು ಕೊಂಡೇ ದೇವರ ಸೇವೆಗಾಗಿಯೇ ಕೈಕೊಂಡವಾಗಿದ್ದವು. ದಕ್ಷಿಣ ಆಫ್ರಿಕದಲ್ಲಿ ಎಷ್ಟು ದಿನ ನಿಲ್ಲಬೇಕಾಗುವದೆಂಬುದು ನನಗೆ ಸ್ವಲ್ಪವೂ ಗೊತ್ತಿರಲಿಲ್ಲ. ಹಿಂದುಸ್ತಾನಕ್ಕೆ ಹಿಂತಿರುಗುವದಕ್ಕೆ ಆಗದೆ ಇರ ಬಹುದೆಂಬ ಹೆದರಿಕೆ ಬೇರೆ ಇದ್ದಿತು. ಆದುದರಿಂದ ನನ್ನ ಹೆಂಡತಿ ಮಕ್ಕಳನ್ನು ನನ್ನೊಡನೆಯೇ ಇಟ್ಟುಕೊಂಡಿರಬೇಕೆಂದೂ ಅವರ ಮೇಲೆ ಇನ್ನು ವಿಯೋಗದುಃಖವನ್ನು ಹೊರಿಸಕೂಡದೆಂದೂ ಅವರ ಪಾಲನೆಪೋಷಣೆಗಳಿಗೆ ಸಾಕಾದಷ್ಟು ಸಂಪಾದಿಸಬೇಕೆಂದೂ ನಿಶ್ಚಯಿಸಿದೆನು. ಹೀಗೆ ವಿಚಾರಮಾಡುತ್ತಾ ನನಗೆ ಆ ಜೀವ

ವಿಮೆಯ ಜ್ಞಾಪಕ ಬಂದು ಅದನ್ನು ಮಾಡಿದುದು ದೊಡ್ಡ ತಪ್ಪೆಂದು ತೋರಿ ದಳ್ಳಾಳಿಯ ಬಲೆಗೆ ಸಿಕ್ಕಿಬಿದ್ದುದಕ್ಕಾಗಿ ನನಗೆ ನಾಚಿಕೆಯುಂಟಾಯಿತು. "ಎಲಾ, ನಿಮ್ಮಣ್ಣನು ನಿಜವಾಗಿಯೂ ತಂದೆಯಂತಿದ್ದರೆ, ಒಂದು ವೇಳೆ ಅಂತಹ ಸಂದರ್ಭವೊದಗಿ ನಿನ್ನ ಹೆಂಡತಿಯು ವಿಧವೆಯಾದರೆ ಆಕೆಯನ್ನು ಪಾಲಿಸುವದೇನೂ ಆತನಿಗೆ ದೊಡ್ಡ ಭಾರವಾಗಿ ಕಾಣುವದಿಲ್ಲ! ಮತ್ತು ಮಿಕ್ಕವರಿಗಿಂತ ಮೊದಲು ನೀನೇ ಸಾವಿಗೆ ತುತ್ತಾಗುವೆಯೆಂದು ತಿಳಿದುಕೊಳ್ಳುವದಕ್ಕೆ ಕಾರಣವೇನಾದರೂ ಇದೆಯೆ? ಸರಿಯಾಗಿ ನೋಡಿದರೆ, ಅವರನ್ನು ಕಾಪಾಡುವವನು ಪರಮಾತ್ಮನು; ನೀನೂ ಅಲ್ಲ, ನಿಮ್ಮಣ್ಣನೂ ಅಲ್ಲ. ಜೀವವಿಮೆಯನ್ನು ಮಾಡಿದುದರಿಂದ ನೀನು ನಿನ್ನ ಹೆಂಡತಿಮಕ್ಕಳನ್ನು ಪರಾಧೀನರನ್ನಾಗಿ ಮಾಡಿದ್ದೀ. ಅವರೇಕೆ ಸ್ವಾವಲಂಬಿಗಳಾಗಕೂಡದು? ಅಸಂಖ್ಯಾತರಾದ ಬಡವರ ಮನೆಯ ಮಕ್ಕಳಿಗಾಗುವದೇನು? ನೀನೂ ನಿನ್ನ ಹೆಂಡತಿಮಕ್ಕಳನ್ನು ಬಡವರ ಹೆಂಡತಿಮಕ್ಕಳ ಸಮಾನರೆಂದೇ ತಿಳಿಯಕೂಡದೇಕೆ?"

ಈ ರೀತಿಯಾಗಿ ವಿಚಾರಧಾರೆಯು ನನ್ನ ಮನಸ್ಸಿನಲ್ಲಿ ಹರಿಯತೊಡಗಿತು. ಆದರೆ ನಾನು ಒಡನೆಯೇ ಇದಕ್ಕೆ ಸರಿಯಾಗಿ ನಡೆಯಲಿಲ್ಲ. ಜೀವವಿಮೆಯ ಒಂದು ಕಿಸ್ತನ್ನಾದರೂ ದಕ್ಷಿಣ ಆಫ್ರಿಕದಿಂದ ಕಳುಹಿಸಿಕೊಟ್ಟೆನೆಂದು ನನಗೆ ನೆನಪಿದೆ.

ಹೊರಗಿನ ಸಂದರ್ಭಗಳಿಂದ ಕೂಡ ಈ ವಿಚಾರತರಂಗಕ್ಕೆ ಬೆಂಬಲವು ದೊರಕಿತು. ನಾನು ದಕ್ಷಿಣ ಆಫ್ರಿಕಕ್ಕೆ ಮೊದಲನೆಯ ಸಲ ಬಂದಾಗ ಈಸಾಯೀ ವಾಯುಮಂಡಲವು ನನ್ನನ್ನು ಧರ್ಮದ ವಿಷಯವಾಗಿ ಜಾಗೃತನನ್ನಾಗಿ ಇಟ್ಟಿದ್ದಿತು. ಈ ಸಲ ಬ್ರಹ್ಮಜ್ಞಾನ(ಥಿಯಾಸಫಿ)ದ ವಾತಾವರಣದಿಂದ ಈ ಜಾಗೃತಿಯು ಬಲಪಟ್ಟಿತು. ಮಿ. ರಿಚ್‌ರವರು ಬ್ರಹ್ಮಜ್ಞಾನಮಂಡಲಕ್ಕೆ ಸೇರಿದ್ದರು. ಅವರು ನನಗೆ ಜೋಹಾನ್ಸ್‌ಬರ್ಗಿನ ಮಂಡಲದ ಪರಿಚಯವನ್ನು ಮಾಡಿಕೊಟ್ಟರು. ಅನೇಕ ವಿಷಯಗಳಲ್ಲಿ ನನಗೂ

ಮಂಡಲದವರಿಗೂ ಮತಭೇದವಿದ್ದುದರಿಂದ ನಾನು ಮಂಡಲದ ಸದಸ್ಯನಾಗಲಿಲ್ಲ. ಆದರೂ ಪ್ರತಿಯೊಬ್ಬ ಸದಸ್ಯನೊಂದಿಗೂ ನನಗೆ ಗಾಢವಾದ ಸಂಬಂಧವುಂಟಾಯಿತು. ಅವರೊಡನೆ ಪ್ರತಿನಿತ್ಯವೂ ಧರ್ಮದ ವಿಷಯವಾಗಿ ಚರ್ಚೆ ನಡೆಯುತ್ತಿದ್ದಿತು. ನಾವು ಜೊತೆಗೆ ಥಿಯಾಸಫಿಯ ಪುಸ್ತಕಗಳನ್ನು ಓದುತ್ತಿದ್ದೆವು. ಅವರ ಮಂಡಲದಲ್ಲಿ ಭಾಷಣಮಾಡಬೇಕೆಂದೂ ನನಗೆ ಆಗಾಗ ಹೇಳುತ್ತಿದ್ದರು. ಥಿಯಾಸಫಿಯ ಮುಖ್ಯಸಿದ್ಧಾಂತವೇನೆಂದರೆ ಭ್ರಾತೃಭಾವವನ್ನು ಹುಟ್ಟಿಸಿ ಅದನ್ನು ಬೆಳಸುವದು. ಈ ವಿಷಯವಾಗಿ ನಾವು ಹೆಚ್ಚಾಗಿ ಚರ್ಚೆಮಾಡುತ್ತಿದ್ದೆವು. ಮತ್ತು ಈ ಸಿದ್ಧಾಂತಕ್ಕೂ ಅವರ ಆಚರಣೆಗೂ ಭೇದ ತೋರಿದೆಡೆಯಲ್ಲೆಲ್ಲಾ ನಾನು ಕೈ ತೋರಿಸುತ್ತಿದ್ದೆನು. ಇದರ ಪ್ರಭಾವವು ನನ್ನ ಮೇಲೆ ಕೂಡ ಚೆನ್ನಾಗಿ ಬೀಳದಿರಲಿಲ್ಲ. ಇದರಿಂದ ಆತ್ಮಸಂಶೋಧನೆಯು ಫಲಿಸಿತು.



೫

# ಆತ್ಮಸಂಶೋಧನೆಯ ಪರಿಣಾಮ

೧೮೯೩ನೆಯ ಇಸವಿಯಲ್ಲಿ ಈಸಾಯಿ ಮಿತ್ರರೊಡನೆ ನನಗೆ ಗಾಢವಾದ ಸಂಬಂಧವು ಬೆಳೆದಾಗ ನನ್ನ ವೃತ್ತಿಯು ಕೇವಲ ವಿದ್ಯಾರ್ಥಿಯ ವೃತ್ತಿಯಾಗಿದ್ದಿತು. ಈ ಮಿತ್ರರು ಬೈಬಲಿನ ಸಂದೇಶವು ನನಗೆ ಮನಸದಟ್ಟುವಂತೆ ಮಾಡುವದಕ್ಕೂ ನಾನು ಅದನ್ನು ಸ್ವೀಕರಿಸುವಂತೆ ಪ್ರೇರಿಸುವದಕ್ಕೂ ಬಹಳವಾಗಿ ಪ್ರಯತ್ನಪಡುತ್ತಿದ್ದರು. ನಾನು ನಮ್ರಭಾವಗಿಂದ, ಆದರೆ ತಟಸ್ಥವೃತ್ತಿಯಿಂದ, ಇದನ್ನೆಲ್ಲಾ ಕೇಳುತ್ತಲೂ ತಿಳಿದುಕೊಳ್ಳುತ್ತಲೂ ಇದ್ದೆನು. ಈ ಸಮಯದಲ್ಲಿ ನಾನು ಸ್ವಾಭಾವಿಕವಾಗಿ ನನ್ನ ಕೈಲಾದಮಟ್ಟಿಗೆ ಹಿಂದೂಧರ್ಮದ ಅಧ್ಯಯನವನ್ನು ಮಾಡಿದೆನು ಮತ್ತು ಇತರ ಧರ್ಮಗಳನ್ನು ತಿಳಿದುಕೊಳ್ಳುವದಕ್ಕೂ ಪ್ರಯತ್ನಪಟ್ಟೆನು.

ಆದರೆ ೧೮೯೪ ರಲ್ಲಿ ನನ್ನ ಸ್ಥಿತಿಯು ಸ್ವಲ್ಪ ಬದಲಾಯಿಸಿದ್ದಿತು. ಥಿಯಾಸಫಿಸ್ಟ ಮಿತ್ರರೇನೋ ನನ್ನನ್ನು ತಮ್ಮ ಮಂಡಲಕ್ಕೆ ಎಳೆದುಕೊಳ್ಳಬೇಕೆಂದು ಇಷ್ಟಪಡುತ್ತಿದ್ದುದು ನಿಜವೇ; ಆದರೆ ನಾನು ಹಿಂದುವೆಂಬ ದೃಷ್ಟಿಯಿಂದ ನನ್ನಿಂದ ಒತ್ತಾಸೆಯನ್ನು ಪಡೆಯಬೇಕೆನ್ನುವದೇ ಇವರ ಉದ್ದೇಶವಾಗಿದ್ದಿತು. ಥಿಯಾಸಫಿಯ ಸಾಹಿತ್ಯದಲ್ಲಿ ಹಿಂದೂಧರ್ಮದ ಛಾಯೆಯೂ ಅದರ ಪ್ರಭಾವವೂ ಬೇಕಾದಹಾಗೆ ಕಂಡುಬರುತ್ತವೆ. ಆದುದರಿಂದ ನನ್ನಿಂದ ತಮಗೆ ಸಹಾಯವಾಗಬಹುದೆಂದು ಈ ಮಿತ್ರರು ತಿಳಿದುಕೊಂಡಿದ್ದರು. ನನ್ನ ಸಂಸ್ಕೃತದ ಜ್ಞಾನವು ಹೇಳಿಕೊಳ್ಳುವಂತಹದೇನೂ ಅಲ್ಲವೆಂದೂ ನಾನು ಹಿಂದೂಧರ್ಮದ ಮೂಲ ಗ್ರಂಥಗಳನ್ನು ಸಂಸ್ಕೃತದಲ್ಲಿ ಓದಿಲ್ಲವೆಂದೂ ಅವುಗಳ ಭಾಷಾಂತ

ರವನ್ನು ಮಾತ್ರ ಓದಿರುವೆನೆಂದೂ ಹೀಗೆ ಓದಿರುವದು ಕೂಡ ಕೇವಲ ಸ್ವಲ್ಪವೆಂದೂ ಅವರಿಗೆ ಹೇಳಿದೆನು. ಆದರೆ ಅವರು ಸಂಸ್ಕಾರಪುನರ್ಜನ್ಮಗಳಲ್ಲಿ ನಂಬಿಕೆಯುಳ್ಳವರಾಗಿದ್ದುದರಿಂದ ನನ್ನಿಂದ ಅವರಿಗೆ ಕೊಂಚಮಟ್ಟಿಗಾದರೂ ಸಹಾಯವು ದೊರಕು ವದೆಂದು ಅವರು ಎಣಿಸಿದರು. ಹೀಗೆ

ನಿರಸ್ತೇ ಪಾದಪೇ ದೇಶೇ
ಏರಂಡೋಽಪಿ ದ್ರುಮಾಯತೇ

**(ಬೇರೆ ಇನ್ನಾವ ಗಿಡವೂ ಇಲ್ಲದ ಕಡೆ ಹರಳುಗಿಡವು ಕೂಡ ಶೋಭಿಸುತ್ತದೆ—ಹಾಳೂರಿಗೆ ಉಳಿದವನೇ ಗೌಡ.)**

ಎಂಬಂತೆ ನನಗೆ ಮಹತ್ವವು ದೊರಕಿದು. ಕೆಲವರೊಡನೆ ವಿವೇಕಾನಂದರ 'ರಾಜಯೋಗ'ವನ್ನೂ ಇನ್ನು ಕೆಲವರೊಡನೆ ಮಣಿಲಾಲ ದ್ವಿವೇದಿಯವರ 'ರಾಜಯೋಗ'ವನ್ನೂ ಓದಲು ಮೊದಲು ಮಾಡಿದುದಾಯಿತು. ಒಬ್ಬ ಮಿತ್ರರೊಡನೆ ಪತಂಜಲಿಯ ಯೋಗಸೂತ್ರಗಳನ್ನು ಓದಬೇಕಾಯಿತು. ಎಷ್ಟೋ ಜನರೊಡನೆ ಭಗವದ್ಗೀತೆಯ ಅಧ್ಯಯನವೂ ಮೊದಲಾಯಿತು. ಜಿಜ್ಞಾಸು ಮಂಡಲವೊಂದು ಪ್ರಾರಂಭವಾಗಿ ನಿಯತರೂಪದಿಂದ ಅಧ್ಯಯನವೂ ನಡೆಯುತೊಡಗಿತು. ಗೀತೆಯಲ್ಲಿ ನನಗೆ ಮೊದಲಿಂದಲೂ ಪ್ರೇಮವೂ ಶ್ರದ್ಧೆಯೂ ಇದ್ದಿತು. ಈಗ ಅದನ್ನು ಇನ್ನೂ ಸೂಕ್ಷ್ಮವಾಗಿ ಅಧ್ಯಯನಮಾಡುವದರ ಆವಶ್ಯಕತೆಯು ತೋರಿಬಂದಿತು. ನನ್ನ ಬಳಿ ಒಂದೆರಡು ಭಾಷಾಂತರಗಳಿದ್ದುವು. ಅವುಗಳ ಸಹಾಯದಿಂದ ಮೂಲಸಂಸ್ಕೃತವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಟ್ಟೆನು. ಮತ್ತು ಪ್ರತಿನಿತ್ಯವೂ ಒಂದೆರಡು ಶ್ಲೋಕಗಳನ್ನು ಬಾಯಿಪಾಠಮಾಡಬೇಕೆಂದು ನಿಶ್ಚಯಮಾಡಿದೆನು. ಬೆಳಿಗ್ಗೆ ಹಲ್ಲುಜ್ಜಿ ಸ್ನಾನಮಾಡುವ ಹೊತ್ತನ್ನು ಈ ಕೆಲಸಕ್ಕೆ ಉಪಯೋಗಿಸುತ್ತಿದ್ದೆನು. ಹಲ್ಲುಜ್ಜಿಕೊಳ್ಳುವದಕ್ಕೆ ಹದಿನೈದು ನಿಮಿಷವೂ ಸ್ನಾನಕ್ಕೆ ಇಪ್ಪತ್ತು ನಿಮಿಷವೂ ಆಗುತ್ತಿದ್ದಿತು. ಹಲ್ಲನ್ನು ನಾನು

ಪಾಶ್ಚಾತ್ಯರೀತಿಗನುಸಾರವಾಗಿ ನಿಂತುಕೊಂಡೇ ಉಜ್ಜಿಕೊಳ್ಳುತ್ತಿದ್ದೆನು. ಗೀತೆಯ ಶ್ಲೋಕಗಳನ್ನು ಕಾಗದದ ಮೇಲೆ ಬರೆದು ಇದಿರಿನ ಗೋಡೆಗೆ ಅಂಟಿಸಿಬಿಟ್ಟು ಅದನ್ನು ನೋಡಿಕೊಂಡು ಗಟ್ಟಿ ಮಾಡುತ್ತಿದ್ದೆನು. ಸ್ನಾನಮಾಡುವಾಗ ಈ ಶ್ಲೋಕಗಳನ್ನೇ ಮಂದಟ್ಟುಮಾಡಿಕೊಳ್ಳುತ್ತಿದ್ದೆನು. ಇದರ ಮಧ್ಯೆ ಹಿಂದಿನ ಶ್ಲೋಕಗಳನ್ನೆಲ್ಲಾ ಒಂದು ಸಲ ಹೇಳಿಕೊಳ್ಳುತ್ತಿದ್ದೆನು. ಈ ರೀತಿಯಾಗಿ ಗೀತೆಯ ಹದಿಮೂರು ಅಧ್ಯಾಯಗಳನ್ನು ಗಟ್ಟಿ ಮಾಡಿದೆನೆಂದು ನನಗೆ ನೆನಪಿದೆ. ಇದಾದಮೇಲೆ ನನ್ನ ಕಾರ್ಯಕಲಾಪವು ಜಾಸ್ತಿಯಾಯಿತು. ಸತ್ಯಾಗ್ರಹವೂ ಇಷ್ಟರಲ್ಲಿಯೇ ಹುಟ್ಟಿತು. ಅದರ ಸಂಗೋಪನಸಂವರ್ಧನಕಾರ್ಯಗಳಲ್ಲೇ ನನ್ನ ಸಮಾಲೋಚನೆಯ ಕಾಲವೆಲ್ಲಾ ಕಳೆಯತೊಡಗಿತು. ಈಗ ಕೂಡ ಅದೇ ಕೆಲಸವೇ ನನ್ನ ಹೊತ್ತನ್ನು ನುಂಗಿಕೊಳ್ಳುತ್ತಿದೆಯೆಂದು ಹೇಳಬಹುದು.

ಗೀತಾಧ್ಯಯನದಿಂದ ನನ್ನ ಸಹಾಧ್ಯಾಯಿಗಳಮೇಲೆ ಏನು ಪರಿಣಾಮವಾಯಿತೋ ಅದನ್ನು ನಾನು ಹೇಳಲಾರೆನು. ಅದು ಅವರಿಗೇ ಗೊತ್ತು. ಆದರೆ ನನಗಂತೂ ಅದು ಎಂದಿಗೂ ತಪ್ಪದ ಮಾರ್ಗದರ್ಶಿಯಾಯಿತು. ಅದು ನನಗೆ ಪ್ರತಿನಿತ್ಯವೂ ದಾರಿತೋರಿಸುವ ಧಾರ್ಮಿಕಕೋಶವಾಯಿತು. ನನಗೆ ತಿಳಿಯದ ಇಂಗ್ಲಿಷ್ ಪದಗಳ ವ್ಯುತ್ಪತ್ತಿ ಮತ್ತು ಅರ್ಥಗಳನ್ನು ತಿಳಿದುಕೊಳ್ಳುವದಕ್ಕಾಗಿ ನಾನು ಇಂಗ್ಲಿಷ್ ಶಬ್ದಕೋಶವನ್ನು ತೆಗೆದು ನೋಡುವಂತೆಯೇ ನಡತೆಯ ಸಂಬಂಧವಾಗಿ ತೊಡಕುಂಟಾದಾಗ ಸಂಕಟವೊದಗಿದಾಗ ಈ ತೊಡಕುಗಳನ್ನು ಬಿಡುಸುವದಕ್ಕೂ ಸಂಕಟದ ಪರಿಹಾರಕ್ಕೂ ನಾನು ಭಗವದ್ಗೀತೆಯನ್ನು ಆಶ್ರಯಿಸುತ್ತಿದ್ದೆನು. 'ಅಪರಿಗ್ರಹ', 'ಸಮಭಾವ' ಮುಂತಾದ ಪದಗಳು ನನ್ನ ಮನಸ್ಸನ್ನು ಹಿಡಿದುವು. ಈ ಸಮಭಾವವನ್ನು ರಕ್ಷಿಸಿ ಏಕಾಸಗೊಳಿಸುವದು ಹೇಗೆ? ಅಪಮಾನಪಡಿಸುವ, ಉದ್ಧತರಾದ, ಲಂಚಕೋರರಾದ

ಅಧಿಕಾರಿಗಳಿಗೂ ನಿನ್ನೆಯವರೆಗೂ ಜೊತೆಗಾರರಾಗಿದ್ದು ಇಂದು ವ್ಯರ್ಥವಾಗಿ ವಿರೋಧಿಸುವವರಿಗೂ ಮತ್ತು ಯಾವಾಗಲೂ ನನಗೆ ಒಳ್ಳೆಯವರಾಗಿರುವವರಿಗೂ ಏನೂ ಭೇದವಿಲ್ಲವೆಂದರೇನರ್ಥ? ಏನನ್ನೂ ಪರಿಗ್ರಹ ಮಾಡದೆ ಇರುವದು ಹೇಗೆ? ನಮ್ಮ ಶರೀರ ವನ್ನು ರಕ್ಷಿಸುತ್ತಿರುವದು ಸಾಕಾದಷ್ಟು ಪರಿಗ್ರಹವಾಗಲಿಲ್ಲ ವೇನು? ಹೆಂಡತಿಮಕ್ಕಳನ್ನು ಕಟ್ಟಿಕೊಂಡಿರುವದು ಪರಿಗ್ರಹ ವಲ್ಲದೆ ಮತ್ತೇನು? ಪುಸ್ತಕಗಳಿಂದ ತುಂಬಿದ ನನ್ನ ಅಲಮಾರ ಗಳನ್ನೆಲ್ಲಾ ಸುಟ್ಟುಬಿಡಬೇಕೇನು? ನನ್ನ ಸರ್ವಸ್ವವನ್ನೂ ತ್ಯಜಿಸಿ ದೇವರ ದಾರಿಯನ್ನು ಹಿಡಿಯುವದು ಸರಿಯೇನು? ಸರ್ವಸ್ವವನ್ನೂ ತ್ಯಜಿಸದೆ ದೇವರನ್ನು ಹಿಂಬಾಲಿಸುವದು ಸಾಧ್ಯವಲ್ಲವೆಂದು ನನ್ನ ಅಂತರಾತ್ಮನು ನಿಸ್ಸಂಶಯವಾಗಿ ಹೇಳಿತು. ಇಂಗ್ಲಿಷ್ ಕಾನೂನು ಗಳನ್ನು ನಾನು ಅಭ್ಯಾಸಮಾಡಿದುದು ಈಗ ನನ್ನ ಸಹಾಯಕ್ಕೆ ಬಂದಿತು. ಸ್ನೆಲ್ಲನು ಕಾನೂನಿನ ಸಿದ್ಧಾಂತದ ವಿಚಾರವಾಗಿ ತನ್ನ ಪುಸ್ತಕದಲ್ಲಿ ಮಾಡಿರುವ ಚರ್ಚೆಯು ನನಗೆ ನೆನಪಾಯಿತು. 'ಟ್ರಸ್ಟಿ' (ಪರರ ಸ್ವತ್ತನ್ನು ನೋಡಿಕೊಳ್ಳುವವನು—ಧರ್ಮ ದರ್ಶಿ) ಎಂಬ ಪದದ ಅರ್ಥವಿಶೇಷವು ಭಗವದ್ಗೀತೆಯಿಂದುಂಟಾದ ಜ್ಞಾನೋದಯದಿಂದ ಇನ್ನೂ ಚೆನ್ನಾಗಿ ಹೊಳೆಯಿತು. ವ್ಯವ ಹಾರಧರ್ಮಶಾಸ್ತ್ರ (ಜೂರಿಸ್‌ಪ್ರುಡೆನ್ಸ್)ದಲ್ಲಿ ನನಗಿದ್ದ ಆದ ರವು ಇನ್ನೂ ಹೆಚ್ಚಿತು. ಅದರಲ್ಲಿ ನನಗೆ ಧರ್ಮವು ಕಂಡುಬಂದಿತು. 'ಟ್ರಸ್ಟಿ'ಯ ಬಳಿ ಕೋಟ್ಯಂತರ ಹಣವಿದ್ದರೂ ಅದರಲ್ಲಿ ಒಂದು ಕಾಸನ್ನೂ ಆತನು ಮುಟ್ಟಲಾಗುವದಿಲ್ಲ. ಮುಮುಕ್ಷುವು ಕೂಡ ಇದೇ ಪ್ರಕಾರ ವ್ಯವಹಾರ ಮಾಡಬೇಕು ಎಂಬುದು ನನಗೆ ಭಗ ವದ್ಗೀತೆಯಿಂದ ಮುಂದಟ್ಟಾಯಿತು. ಅಪರಿಗ್ರಹಕ್ಕೂ ಸಮ ಭಾವಕ್ಕೂ ಹೃದಯಪರಿವರ್ತನೆಯೂ ಮನೋವೃತ್ತಿಯ ಬದಲಾ ವಣೆಯೂ ಆವಶ್ಯಕವೆಂದು ನನಗೆ ಸ್ಪಷ್ಟವಾಗಿ ಗೋಚರವಾಯಿತು. ನಾನು ಮಾಡಿದ ಜೀವವಿಮೆಗೆ ಹಣಕೊಡುವದನ್ನು ನಿಲ್ಲಿಸಿಬಿಡ ಬೇಕೆಂದೂ ಅದುವರೆಗೂ ಕೊಟ್ಟ ಹಣದಲ್ಲಿ ಎಷ್ಟಾದರೂ ಹಿಂದಕ್ಕೆ

ಬರುವಹಾಗಿದ್ದರೆ ಬರಮಾಡಿಕೊಳ್ಳಬೇಕೆಂದೂ ಇಲ್ಲದಿದ್ದರೆ ಅದು ಕಳೆದುಹೋದಹಾಗೆಂದು ಭಾವಿಸಬೇಕೆಂದೂ ನನ್ನಂತೆಯೇ ನನ್ನ ಹೆಂಡತಿಮಕ್ಕಳನ್ನೂ ಸೃಷ್ಟಿಸಿದ ಭಗವಂತನು ಅವರನ್ನು ರಕ್ಷಿಸುವನೆಂದೂ ನಾನು ರೇವಾಶಂಕರಭಾಯಿಗೆ ಬರೆದೆನು. ತಂದೆಯಂತಿದ್ದ ನಮ್ಮಣ್ಣನಿಗೆ "ಇದುವರೆಗೂ ಉಳಿದುದನ್ನೆಲ್ಲಾ ನಿಮ್ಮ ಸೇವೆಗಾಗಿ ಕಳಿಸುತ್ತಾ ಇದ್ದೇನೆ. ಅದು ನಿಮಗೆ ಸೇರಿದುದೇ ಆಗಿದೆ. ಇನ್ನು ಮೇಲೆ ನನ್ನಿಂದ ಏನನ್ನೂ ನಿರೀಕ್ಷಿಸಬೇಡಿ. ಏಕೆಂದರೆ ಉಳಿತಾಯವೆಲ್ಲಾ ನಮ್ಮ ಜನರ ಉಪಯೋಗಕ್ಕೆ ಹೋಗುತ್ತದೆ." ಎಂದು ಕಾಗದ ಬರೆದೆನು.

ಆದರೆ ಈ ವಿಷಯವು ಜಾಗ್ರತೆಯಾಗಿ ಅವರ ಮನಸ್ಸಿಗೆ ಹತ್ತುವಹಾಗೆ ಮಾಡುವದಕ್ಕೆ ನನ್ನಿಂದ ಆಗಲಿಲ್ಲ. ಅವರು ಖಂಡಿತವಾದ ಮಾತಿನಲ್ಲಿ ನನಗೆ ನನ್ನ ಧರ್ಮವನ್ನು ತಿಳಿಸಿದರು. ನಾನು ನಮ್ಮ ತಂದೆಯವರಿಗಿಂತ ಹೆಚ್ಚು ಬುದ್ಧಿವಂತನಾಗಿರುವದಕ್ಕೆ ಅಪೇಕ್ಷಿಸಕೂಡದೆಂದೂ ಅವರಂತೆಯೇ ಕುಟುಂಬವನ್ನು ನಿರ್ವಹಿಸಬೇಕೆಂದೂ ಹೇಳಿದರು. ನಾನು ನಮ್ಮ ತಂದೆಯವರ ಕೆಲಸವನ್ನು ನಡೆಸುತ್ತಾ ಬಂದಿದ್ದೇನೆಂದೂ ಕುಟುಂಬ ಪದದ ಅರ್ಥವನ್ನು ಸ್ವಲ್ಪ ವಿಸ್ತಾರಮಾಡಿದರೆ ನನ್ನ ಆಚರಣೆಯ ಅರ್ಥವು ಸ್ಪಷ್ಟವಾಗಿ ತಿಳಿಯುವದೆಂದೂ ಅವರಿಗೆ ವಿನಯಪೂರ್ವಕವಾಗಿ ಬಿನ್ನವಿಸಿದೆನು.

ನಮ್ಮಣ್ಣನವರು ನನ್ನ ಆಸೆಯನ್ನು ಬಿಟ್ಟುಬಿಟ್ಟರು. ನನ್ನೊಡನೆ ಕಾಗದಪತ್ರದ ಸಂಬಂಧವನ್ನೂ ನಿಲ್ಲಿಸಿದರು. ಇದರಿಂದ ನನಗೆ ಅತ್ಯಂತ ದುಃಖವಾಯಿತು. ಆದರೆ ನಾನು ನನ್ನ ಧರ್ಮವೆಂದು ತಿಳಿದಿದ್ದುದನ್ನು ಬಿಡುವದು ಇನ್ನೂ ಹೆಚ್ಚಾದ ಯಾತನೆಗೆ ಕಾರಣವಾಗುತ್ತಿದ್ದುದರಿಂದ ಇವೆರಡರಲ್ಲಿ ಕಡಿಮೆಯ ದುಃಖವನ್ನೇ ಆರಿಸಿದೆನು. ಆದರೂ ಇದರಿಂದ ನಮ್ಮಣ್ಣನಲ್ಲಿ ನಾನಿಟ್ಟಿದ್ದ ಭಕ್ತಿಗೆ ಏನೂ ಕುಂದಕವುಂಟಾಗಲಿಲ್ಲ. ಅದು ಎಂದಿನಂತೆಯೇ ನಿರ್ಮಲವಾಗಿಯೂ ಅತಿಶಯವಾಗಿಯೂ ಇದ್ದೇ ಇದ್ದಿತು. ನನ್ನಮೇ

ಅವರಿಗಿದ್ದ ಅತಿಶಯ ಪ್ರೇಮವೇ ಅವರ ದುಃಖಕ್ಕೆ ಮೂಲವಾಗಿದ್ದಿತು. ನಾನು ಹಣಸಹಾಯ ಮಾಡಬೇಕೆನ್ನುವದಕ್ಕಿಂತಲೂ ನಾನು ನಮ್ಮ ಕುಟುಂಬದವರೊಡನೆ ಸರಿಯಾಗಿ ವರ್ತಿಸಬೇಕೆಂಬುದೇ ಅವರ ಹೆಚ್ಚಿನ ಆಶಯವಾಗಿದ್ದಿತು.

ಅವರ ಜೀವಿತದ ಕಡೆಯಲ್ಲಿ ಅವರು ಪ್ರಸನ್ನರಾದರು. ನಾನು ಅನುಸರಿಸಿದ್ದ ಮಾರ್ಗವು ಸರಿಯಾದುದೆಂದೂ ಧರ್ಮವಾದುದೆಂದೂ ಅವರು ಮೃತ್ಯುಶಯ್ಯೆಯಲ್ಲಿ ಕಾಗದವನ್ನು ಬರೆದು ಕಳಿಸಿದರು. ಈ ಪತ್ರವು ಅತ್ಯಂತ ಕರುಣಾಜನಕವಾಗಿದ್ದಿತು. ತಂದೆಯು ಮಗನ ಕ್ಷಮಾಪಣೆಯನ್ನು ಕೇಳಬಹುದಾದರೆ ಅವರು ನನ್ನ ಕ್ಷಮಾಪಣೆಯನ್ನು ಬೇಡಿದರು. ತಮ್ಮ ಮಕ್ಕಳನ್ನು ನಾನು ನನಗೆ ತೋರಿದ ರೀತಿಯಲ್ಲಿ ಸಾಕಿ ಮುಂದಕ್ಕೆ ತರಬೇಕೆಂದು ಅವರನ್ನು ನನ್ನ ರಕ್ಷಣೆಗೆ ಒಪ್ಪಿಸಿದರು. ನಮ್ಮಣ್ಣಾನವರು ನನ್ನನ್ನು ನೋಡಲು ಹಂಬಲಿಸಿದರು. ದಕ್ಷಿಣ ಆಫ್ರಿಕಕ್ಕೆ ಬಂದು ನನ್ನನ್ನು ನೋಡುವೆನೆಂದು ತಾರು ಕೊಟ್ಟರು. ನಾನು ಅಗತ್ಯವಾಗಿ ಬನ್ನಿರೆಂದು ಉತ್ತರಕೊಟ್ಟೆನು. ಆದರೆ ನಮ್ಮಣ್ಣಾನನ್ನು ಪುನಃ ನೋಡುವ ಭಾಗ್ಯವು ನನ್ನ ಹಣೆಯಲ್ಲಿ ಬರೆದಿರಲಿಲ್ಲ.

ತಮ್ಮ ಮಕ್ಕಳ ವಿಷಯವಾಗಿ ಅವರು ವ್ಯಕ್ತಪಡಿಸಿದ ಇಚ್ಛೆಯನ್ನು ಕೂಡ ಪೂರ್ತಿಮಾಡಲಾಗಲಿಲ್ಲ. ನಮ್ಮಣ್ಣಾನವರು ದಕ್ಷಿಣ ಆಫ್ರಿಕಕ್ಕೆ ಹೊರಡುವದಕ್ಕೆ ಮುಂಚೆಯೇ ಸ್ವರ್ಗಸ್ಥರಾದರು. ಅವರ ಮಕ್ಕಳಿಗೆ ಅವರ ಹಿಂದಿನ ರೀತಿಯ ಜೀವನದ ಸಂಸ್ಕಾರವು ಹೆಚ್ಚಾಗಿದ್ದುದರಿಂದ ಅವರ ಜೀವಮಾನದಲ್ಲಿ ಯಾವ ಮಾರ್ಪಾಟೂ ಸಾಧ್ಯವಾಗಲಿಲ್ಲ. ಅವರನ್ನು ನನ್ನ ಕಡೆಗೆ ಎಳೆದುಕೊಳ್ಳುವದಕ್ಕೆ ನನ್ನ ಕೈಯಲ್ಲಾಗಲಿಲ್ಲ. ಇದರಲ್ಲಿ ಅವರ ತಪ್ಪೇನೂ ಇರಲಿಲ್ಲ. ಬಲವಂತವಾದ ತಮ್ಮ ನೈಜ ಸ್ವಭಾವದ ಸೆಳೆತವು ಇಷ್ಟು ದೂರ ಒಯ್ಯುತ್ತದೆ, ಇನ್ನಿಲ್ಲ ಎಂದು ಹೇಳಬಲ್ಲವರಾರು ? ಪೂರ್ವಜನ್ಮಸಂಸ್ಕಾರವನ್ನು ಕುಂದಿಸಬಲ್ಲವರಾರು ? ನಮ್ಮ ಜೀವ

ನದಲ್ಲಿ ಉಂಟಾಗುವ ಪರಿವರ್ತನೆಯೂ ನಮ್ಮ ಆತ್ಮವು ಹೊಂದುವ ವಿಕಾಸವೂ ಅದೇ ರೀತಿಯಲ್ಲೇ ನಮ್ಮ ಮಕ್ಕಳಲ್ಲೂ ಆಶ್ರಿತರಲ್ಲೂ ಜೊತೆಗಾರರಲ್ಲೂ ಕೂಡ ಉಂಟಾಗುವದೆಂದು ನಿರೀಕ್ಷಿಸುವದು ಕೇವಲ ಮೂಢತನ.

ತಂದೆತಾಯಿಗಳಾಗುವದು ಎಷ್ಟು ಭಯಂಕರವಾದ ಜವಾಬ್ದಾರಿಯೆನ್ನುವದು ಈ ಉದಾಹರಣೆಯಿಂದ ತಕ್ಕಮಟ್ಟಿಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ.

---

೬

# ಶಾಕಾಹಾರಕ್ಕೆ ಆಹುತಿ

ನನ್ನ ಜೀವನದಲ್ಲಿ ತ್ಯಾಗವೃತ್ತಿಯೂ ಸರಳತೆಯೂ ಬೆಳೆಯುತ್ತಾ ಹೋದಹಾಗೆಲ್ಲಾ ಮತ್ತು ಧರ್ಮಜಾಗೃತಿಯು ನನ್ನ ದಿನಚರಿಯಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಾ ಬಂದಹಾಗೆಲ್ಲಾ ಶಾಕಾಹಾರದ ಪ್ರಸಾರದಲ್ಲಿ ನನಗಿದ್ದ ಆಸಕ್ತಿಯು ಹೆಚ್ಚುತ್ತಾ ಬಂದಿತು. ಪ್ರಚಾರ ಮಾಡುವದಕ್ಕೆ ನನಗೆ ತಿಳಿದಿರುವದು ಒಂದೇ ಮಾರ್ಗ—ಸ್ವತಃ ಆಚರಿಸುವದು ಮತ್ತು ಅದರ ಜೊತೆಗೆ ಜ್ಞಾನಾರ್ಜನೆಯಲ್ಲಿ ಆಸಕ್ತಿಯುಳ್ಳವರೊಡನೆ ಚರ್ಚಿಸುವದು.

ಜೋಹಾನ್ಸ್‌ಬರ್ಗನಲ್ಲಿ ಶಾಕಾಹಾರದ ಭೋಜನಾಲಯವೊಂದಿದ್ದಿತು. ಅದನ್ನು ಒಬ್ಬ ಜರ್ಮನನು ನಡೆಸುತ್ತಿದ್ದನು. ಆತನಿಗೆ ಕ್ಯೂನೆಯುವರ ಜಲೋಪಚಾರದಲ್ಲಿ ವಿಶ್ವಾಸವಿದ್ದಿತು. ನಾನು ಆ ಗೃಹಕ್ಕೆ ಹೋಗತೊಡಗಿದೆನಲ್ಲದೆ ಆದಷ್ಟು ಜನ ಆಂಗ್ಲಮಿತ್ರರನ್ನೂ ಅಲ್ಲಿಗೆ ನನ್ನ ಜೊತೆಗೆ ಕರೆದುಕೊಂಡು ಹೋಗುತ್ತಿದ್ದೆನು. ಆದರೆ ಈ ಗೃಹವು ಹೆಚ್ಚು ದಿನ ಬಾಳಲಾರದೆಂಬುದು ನನಗೆ ಸ್ಪಷ್ಟವಾಯಿತು. ಏಕೆಂದರೆ ಯಾವಾಗಲೂ ಅದಕ್ಕೆ ಹಣದ ತೊಂದರೆಯು ಇರುತ್ತಲೇ ಇದ್ದಿತು. ನನಗೆ ಉಚಿತವಾಗಿ ತೋರಿದ ಮಟ್ಟಿಗೆ ಅದಕ್ಕೆ ಸಹಾಯಮಾಡಿದೆನು. ಅದರಲ್ಲಿ ಸ್ವಲ್ಪ ಹಣವನ್ನೂ ಕಳೆದುಕೊಂಡೆನು. ಆದರೆ ಕಡೆಗೆ ಅದನ್ನು ಮುಚ್ಚಬೇಕಾಯಿತು.

ಥಿಯಾಸಫಿಸ್ಟ ಸಂಗಡದಲ್ಲಿ ಬಹುಮಂದಿ ಹೆಚ್ಚುಕಡಿಮೆ ಶಾಕಾಹಾರಿಗಳೇ ಆಗಿರುತ್ತಾರೆ. ಈ ಮಂಡಲಿಯವರಲ್ಲಿ ಸಾಹಸಿಯಾದ ಒಬ್ಬಾಕೆಯು ಬಹು ವಿಜೃಂಭಣೆಯಿಂದ ಒಂದು ಶಾಕಾಹಾರದ ಭೋಜನಾಲಯವನ್ನು ಹೂಡಿದಳು. ಆಕೆಯು ಕಲಾ

ಪ್ರಿಯಳು, ದುಂದುಗಾರಳು. ಲೆಕ್ಕವಿಡುವದು ಆಕೆಗೆ ಗೊತ್ತೇ ಇರಲಿಲ್ಲ. ಆಕೆಯ ಮಿತ್ರಮಂಡಲಿಯು ದೊಡ್ಡದಾಗಿಯೇ ಇದ್ದಿತು. ಮೊಟ್ಟಮೊದಲು ಆಕೆಯು ತನ್ನ ಕಾರ್ಯವನ್ನು ಸಣ್ಣದಾಗಿ ಪ್ರಾರಂಭಿಸಿದರೂ ದೊಡ್ಡ ಮನೆಯನ್ನು ತೆಗೆದು ಕೊಂಡು ಅದನ್ನು ಹೆಚ್ಚಿಸಬೇಕೆಂದು ನಿರ್ಧರಿಸಿ ನನ್ನ ಸಹಾಯ ವನ್ನು ಆಸಿಸಿದಳು. ಆ ಸಮಯದಲ್ಲಿ ನನಗೆ ಆಕೆಯ ಆರ್ಥಿಕ ಸ್ಥಿತಿಯು ಸರಿಯಾಗಿ ತಿಳಿದಿರಲಿಲ್ಲ. ಆಕೆಯ ಅಂದಾಜು ಸ್ವಲ್ಪ ಹೆಚ್ಚು ಕಡಿಮೆ ಸರಿಯಾಗಿರಬೇಕೆಂದು ನಾನು ಎಣಿಸಿದೆನು. ಆಕೆಗೆ ಸಹಾಯಮಾಡುವಷ್ಟು ಅನುಕೂಲವೂ ನನಗಿದ್ದಿತು. ಅನೇಕ ಕಕ್ಷಿಗಾರರು ನನ್ನ ಬಳಿ ಹೆಚ್ಚು ಹಣವನ್ನು ಇಟ್ಟಿರುತ್ತಿದ್ದರು. ಇವರಲ್ಲಿ ಒಬ್ಬಾತನ ಒಪ್ಪಿಗೆಯನ್ನು ಪಡೆದು ನಾನು ಆತನ ಹಣ ದಲ್ಲಿ ಸುಮಾರು ೧೦೦೦ ಪೌಂಡನ್ನು ಆಕೆಗೆ ಎರವಾಗಿ ಕೊಟ್ಟೆನು. ಈ ಕಕ್ಷಿಗಾರನು ವಿಶಾಲಹೃದಯನೂ ಇತರರಲ್ಲಿ ನಂಬಿಕೆಯಿಡುವ ಸ್ವಭಾವದವನೂ ಆಗಿದ್ದನು. ಮೊಟ್ಟಮೊದಲು ಈತನು ದಕ್ಷಿಣಾ ಆಫ್ರಿಕಕ್ಕೆ 'ಗಿರಿಮಿಟಿಯ' (ಒಪ್ಪಂದದ ಕೂಲಿಗಾರ) ರಲ್ಲಿ ಒಬ್ಬ ನಾಗಿ ಬಂದಿದ್ದನು. ಆತನು "ನಿಮ್ಮ ಮನಸ್ಸಿಗೆ ಸರಿತೋರಿದರೆ ಹಣವನ್ನು ಆಕೆಗೆ ಕೊಡಿರಿ. ನನಗೆ ಇದೊಂದೂ ತಿಳಿಯುವದಿಲ್ಲ. ನನಗೆ ನೀವು ಮಾತ್ರ ಗೊತ್ತು." ಎಂದು ಹೇಳಿದನು.

ಈತನ ಹೆಸರು ಬದರಿಯೆಂದು. ಆಮೇಲೆ ಈತನು ಸತ್ಯಾ ಗ್ರಹದಲ್ಲಿ ಪ್ರಾಮುಖ್ಯವಾದ ಪಾತ್ರವನ್ನು ವಹಿಸಿದನು, ಸೆರೆ ಮನೆಗೆ ಕೂಡ ಹೋಗಿದ್ದನು. ಮೇಲೆ ಹೇಳಿದಂತೆ ಈತನು ಒಪ್ಪ ಲು ಸಮ್ಮತಿಯು ಸಾಕೆಂದು ನಾನು ಹಣವನ್ನು ಆಕೆಗೆ ಕೊಟ್ಟೆನು.

ಆದರೆ ಎರಡುಮೂರು ತಿಂಗಳೊಳಗಾಗಿಯೇ ಈ ಹಣವು ಹಿಂದಕ್ಕೆ ಬರುವದಿಲ್ಲವೆಂದು ನನಗೆ ಗೊತ್ತಾಯಿತು. ಇಷ್ಟು ದೊಡ್ಡ ನಷ್ಟವನ್ನು ಹೊರುವ ಶಕ್ತಿಯು ನನಗಿರಲಿಲ್ಲ. ಈ ಹಣ ವನ್ನು ಉಪಯೋಗಿಸಲು ನನಗೆ ಬೇರೆ ಎಷ್ಟೋ ಮಾರ್ಗಗಳಿ

ದ್ದುವು. ಕಡೆಗೆ ಹಣವು ವಾಪಸು ಬರಲೇ ಇಲ್ಲ. ಆದರೆ ವಿಶ್ವಾಸ ಶೀಲನಾದ ಬದರಿಯನ್ನು ನಷ್ಟಕ್ಕೆ ಗುರಿಮಾಡುವದು ಹೇಗೆ? ಅವನಿಗೆ ನಾನೊಬ್ಬನು ಮಾತ್ರ ಗೊತ್ತಿದ್ದೆನು. ನಾನು ಅವನ ಹಣವನ್ನು ನನ್ನ ಕೈಯಿಂದ ಅವನಿಗೆ ಕೊಟ್ಟೆನು.

ಒಬ್ಬ ಕಕ್ಷಿಗಾರ ಮಿತ್ರರಿಗೆ ನಾನು ಈ ಲೇಣೆದೇಣೆಯ ವಿಚಾರ ವನ್ನು ತಿಳಿಸಲು ಅವರು ನನ್ನನ್ನು ಸೌಮ್ಯಭಾವದಿಂದ ಬಯ್ಯುತ್ತಾ "ಅಣ್ಣಾ,"—ದಕ್ಷಿಣ ಆಫ್ರಿಕದಲ್ಲಿ ಸೌಭಾಗ್ಯವಶಾತ್ ನಾನು ಇನ್ನೂ 'ಮಹಾತ್ಮ' ನಾಗಿರಲಿಲ್ಲ. 'ಬಾಪು' ಕೂಡ ಆಗಿರ ಲಿಲ್ಲ. ನನ್ನ ಮಿತ್ರರೆಲ್ಲ ನನ್ನನ್ನು ಪ್ರೇಮಪೂರ್ವಕವಾದ 'ಅಣ್ಣಾ' ಎಂಬ ಮಾತಿನಿಂದಲೇ ಸಂಬೋಧಿಸುತ್ತಿದ್ದರು—"ಇದು ನೀವು ಮಾಡತಕ್ಕ ಕೆಲಸವಲ್ಲ. ಎಷ್ಟೋ ವಿಷಯದಲ್ಲಿ ನಾವು ನಿಮ್ಮನ್ನೇ ನಂಬಿದ್ದೇವೆ. ಈ ಹಣವು ನಿಮ್ಮ ಕೈಗೆ ಇನ್ನು ವಾಪಸು ಬರುವ ದಿಲ್ಲ. ಬದರಿಯನ್ನೇನೋ ನೀವು ನಷ್ಟಪಡಿಸುವದಿಲ್ಲ. ಆದರೆ ನೀವು ಕಳೆದುಕೊಳ್ಳುತ್ತೀರಿ. ಇಂತಹ ಸುಧಾರಣೆಗಳಿಗಾಗಿ ನೀವು ನಿಮ್ಮ ಕಕ್ಷಿಗಾರರ ಹಣವನ್ನು ಉಪಯೋಗಿಸುತ್ತಾ ಹೋದರೆ ಪಾಪ ಅವರು ಹಾಳಾಗುತ್ತಾರೆ. ಮತ್ತು ನೀವು ಭಿಕ್ಷಕ್ಕೆ ಹೋಗಬೇಕಾಗುತ್ತದೆ. ಆದರೆ ನಮ್ಮೆಲ್ಲರ ಒಳಿತು ನಿಮ್ಮ ಕೈಯಲ್ಲಿದೆ. ನೀವು ಭಿಕಾರಿಯಾದರೆ ನಮ್ಮ ಸಾರ್ವಜನಿಕ ಕಾರ್ಯವೆಲ್ಲಾ ನಿಂತುಹೋಗುತ್ತದೆ." ಎಂದು ಹೇಳಿದರು.

ನನ್ನ ಅದೃಷ್ಟದಿಂದ ಈ ಮಿತ್ರರು ಈಗಲೂ ಜೀವಂತರಾ ಗಿದ್ದಾರೆ. ದಕ್ಷಿಣ ಆಫ್ರಿಕದಲ್ಲೇ ಆಗಲಿ ಇನ್ನೆಲ್ಲೇ ಆಗಲಿ ಇವ ರಿಗಿಂತ ಸ್ವಚ್ಛಮಾನಸರನ್ನು ನಾನು ಇದುವರೆಗೆ ಕಂಡಿಲ್ಲ. ಯಾರ ವಿಷಯದಲ್ಲಾದರೂ ಮನಸ್ಸಿನಲ್ಲಿ ಸಂಶಯ ಹುಟ್ಟಿ ಆಮೇಲೆ ಆ ಶಂಕೆಯು ಆಧಾರವಿಲ್ಲದುದೆಂದು ಕಂಡುಬಂದರೆ ಈ ಮಿತ್ರರು ಕ್ಷಮೆಯನ್ನು ಬೇಡಿ ತಮ್ಮ ಆತ್ಮವನ್ನು ಶುದ್ಧಿಪಡಿಸಿಕೊಳ್ಳುತ್ತಿ ದ್ದುದು ನನಗೆ ತಿಳಿದಿದೆ.

ನನ್ನನ್ನು ಅವರು ಹೀಗೆ ಎಚ್ಚರಗೊಳಿಸಿದುದು ನನಗೆ ಸರಿಯೇ ಎಂದು ತೋರಿತು. ಏಕೆಂದರೆ ಬದರಿಯ ಹಣವನ್ನು ಅವನಿಗೆ ವಾಪಸು ಕೊಡುವದು ನನಗೆ ಸಾಧ್ಯವಾಯಿತಾದರೂ ಇನ್ನೊಂದು ಬಾರಿ ಇಂತಹ ಕೆಲಸದಲ್ಲಿಯೇ ಸಾವಿರ ಪೌಂಡನ್ನು ಕಳೆದುಕೊಂಡಿದ್ದರೆ ಆ ನಷ್ಟವನ್ನು ಹೊರುವದಕ್ಕೆ ನನ್ನಲ್ಲಿ ಕೊಂಚವೂ ಶಕ್ತಿಯಿರಲಿಲ್ಲವಾದುದರಿಂದ ಸಾಲಮಾಡಬೇಕಾಗಿ ಬರುತ್ತಿದ್ದಿತು. ಈ ಕೆಲಸವನ್ನು ನಾನು ನನ್ನ ಜೀವಮಾನದಲ್ಲಿ ಎಂದೂ ಮಾಡಿಲ್ಲ. ಸಾಲ ಮಾಡುವದೆಂದರೆ ನನಗೆ ಯಾವಾಗಲೂ ವಿಷದಂತೆ ಕಂಡುಬಂದಿದೆ. ಸುಧಾರಣೆ ಮಾಡುವದರಲ್ಲಿ ಆಸಕ್ತಿಯು ಕೂಡ ಮನುಷ್ಯನು ತನ್ನ ಶಕ್ತಿಯನ್ನು ಮೀರಿ ವರ್ತಿಸುವ ಹಾಗೆ ಮಾಡಕೂಡದೆಂದು ನನ್ನ ಅರಿವಿಗೆ ಬಂದಿತು. ಇದೂ ಅಲ್ಲದೆ ಈ ಲೇಣೆದೇಣೆಯಲ್ಲಿ ನಾನು ಭಗವದ್ಗೀತೆಯ ಮುಖ್ಯ ಆದೇಶವಾದ ನಿಷ್ಕಾಮ ಕರ್ಮದ ತತ್ವವನ್ನು ಉಲ್ಲಂಘಿಸಿದೆನೆಂಬುದೂ ನನಗೆ ಕಂಡುಬಂದಿತು. ಈ ತಪ್ಪು ನನಗೆ ದೀಪಸ್ತಂಭದಂತೆ ದೊಡ್ಡ ಮಾರ್ಗದರ್ಶಿಯಾದ ಜ್ಯೋತಿಯಾಗಿ ಪರಿಣಮಿಸಿತು.

ಈ ರೀತಿಯಾಗಿ ಶಾಕಾಹಾರಪ್ರಚಾರಕ್ಕೆ ನಾನು ಕೊಟ್ಟ ಆಹುತಿಯು ಆಗಿನ ವಿದ್ಯಮಾನದ ಬಲದಿಂದ ಉಂಟಾಯಿತೇ ಹೊರತು ಅದು ಉದ್ದೇಶಪೂರ್ವಕವಾದುದೂ ಆಗಿರಲಿಲ್ಲ, ಅದನ್ನು ನಾನು ಇಚ್ಛಿಸಿಯೂ ಇರಲಿಲ್ಲ.



೭

# ಮಣ್ಣು ಮತ್ತು ನೀರಿನ ಚಿಕಿತ್ಸೆಯ ಪ್ರಯೋಗ

ನನ್ನ ಜೀವನದಲ್ಲಿ ಸರಳತೆಯು ಹೆಚ್ಚುತ್ತಾ ಹೋದಹಾಗೆಲ್ಲಾ ಕಾಹಿಲೆಯಲ್ಲಿ ಔಷಧವನ್ನು ಸೇವಿಸುವದರಲ್ಲಿ ನನಗಿದ್ದ ಅರುಚಿಯೂ ಹೆಚ್ಚಿತು. ಡರಬನ್ನಿನಲ್ಲಿ ವಕೀಲಿ ಕೆಲಸಮಾಡುತ್ತಿದ್ದಾಗ ನಾನು ಕೆಲವು ಕಾಲ ನಿಶ್ಶಕ್ತಿಯಿಂದಲೂ ವಾಯುವಿನಿಂದಲೂ ನರಳಿದೆನು. ನನ್ನನ್ನು ನೋಡುವದಕ್ಕಾಗಿ ಅಲ್ಲಿಗೆ ಬಂದಿದ್ದ ಡಾ. ಪ್ರಾಣಜೀವನ ದಾಸ ಮಹೇತಾರವರು ನನಗೆ ಇದಕ್ಕಾಗಿ ಔಷಧವನ್ನು ಕೊಟ್ಟರು. ನನಗೆ ವಾಸಿಯಾಯಿತು. ಅಲ್ಲಿಂದೀಚೆಗೆ ನಾನು ಸ್ವದೇಶಕ್ಕೆ ಹಿಂತಿರುಗಿ ಬರುವವರೆಗೂ ನಾನು ಯಾವ ವ್ಯಾಧಿಯಿಂದಲೂ ನರಳಿದುದು ನನಗೆ ಜ್ಞಾಪಕವಿಲ್ಲ.

ಆದರೆ ನಾನು ಜೋಹಾನ್ಸಬರ್ಗಿನಲ್ಲಿದ್ದಾಗ ಮಲಬದ್ಧತೆಯಿಂದಲೂ ಬಾರಿಬಾರಿಗೂ ತಲೆನೋವಿನಿಂದಲೂ ತೊಂದರೆಯಾಗುತ್ತಿದ್ದಿತು. ಆಗಾಗ ಜುಲಾಬಿಗೆ ತೆಗೆದುಕೊಳ್ಳುವದರಿಂದಲೂ ಆಹಾರದಲ್ಲಿ ನಿಯಮವನ್ನನುಸರಿಸುವದರಿಂದಲೂ ಆರೋಗ್ಯವು ಕೆಡದಂತೆ ನೋಡಿಕೊಳ್ಳುತ್ತಿದ್ದೆನು. ಆದರೂ ನಾನು ಆರೋಗ್ಯವಂತನೆಂದು ಹೇಳಿಕೊಳ್ಳುವಹಾಗಿರಲಿಲ್ಲ. ಮತ್ತು ಜುಲಾಬಿಗೆ ತೆಗೆದುಕೊಳ್ಳುವ ಸಂಕಟದಿಂದ ಎಂದಿಗೆ ಪಾರಾದೇನೋ ಎನಿಸುತ್ತಿದ್ದಿತು.

ಈ ಸಮಯದಲ್ಲಿ ಮ್ಯಾಂಚೆಸ್ಟರಲ್ಲಿ 'ನೋ ಬ್ರೆಕ್‌ಫೆಸ್ಟ್ ಅಸೋಸಿಯೇಷನ್' (ಬೆಳಗಿನ ಊಟ ಬೇಡವೆನ್ನುವವರ ಕೂಟ) ಎಂಬ ಸಂಘವು ಪ್ರಾರಂಭವಾಯಿತೆಂದು ನನಗೆ ತಿಳಿಯಬಂದಿತು. ಈ ಸಂಘದ ಸ್ಥಾಪಕರು ವಾದಿಸಿದುದೇನೆಂದರೆ, "ಇಂಗ್ಲಿಷ್ ಜನರು ದಿನಕ್ಕೆ ಅನೇಕ ಬಾರಿ ಮತ್ತು ಅತಿಹೆಚ್ಚಾಗಿ ಆಹಾರವನ್ನು ತೆಗೆದು

ಕೊಳುತ್ತಾರೆ. ರಾತ್ರಿ ಹನ್ನೆರಡು ಘಂಟೆಯವರಿಗೂ ತಿನ್ನುತ್ತಲೇ ಇರುತ್ತಾರೆ. ಅದಕ್ಕೋಸ್ಕರವೇ ಅವರು ವೈದ್ಯರಿಗೆ ಅಷ್ಟೊಂದು ಹಣವನ್ನು ಸುರಿಯಬೇಕಾಗುತ್ತದೆ. ಈ ಅವ್ಯವಸ್ಥೆಯ ಸ್ಥಿತಿಯನ್ನು ಉತ್ತಮಗೊಳಿಸಬೇಕಾದರೆ ಕಟ್ಟಕಡೆಗೆ ಬೆಳಗಿನ ಊಟವನ್ನಾದರೂ ಬಿಟ್ಟುಬಿಡಬೇಕು.'' ಎಂದು. ಇದೆಲ್ಲಾ ನನಗೆ ಪೂರ್ತಿಯಾಗಿ ಅನ್ವಯಿಸುತ್ತಿರಲಿಲ್ಲವಾದರೂ ಇದರಲ್ಲಿ ಕೆಲವು ಅಂಶವಾದರೂ ನನಗೆ ತಟ್ಟುತ್ತಿದ್ದಿತೆಂದು ತೋರಿತು. ಮಧ್ಯಾಹ್ನ ಚಹಾ ತೆಗೆದು ಕೊಳ್ಳುತ್ತಿದ್ದುದಲ್ಲದೆ ನಾನು ದಿನಕ್ಕೆ ಮೂರು ಸಲ ಹೊಟ್ಟೆತುಂಬ ಊಟಮಾಡುತ್ತಿದ್ದೆನು. ನಾನು ಯಾವಾಗಲೂ ಅಲ್ಪಾಹಾರಿ ಯಾಗಿಲ್ಲ. ಮಾಂಸಾಹಾರವಲ್ಲದ, ಮಸಾಲೆಹಾಕದೆ ಮಾಡಲು ಸಾಧ್ಯವಾದ, ಸ್ವಾದಿಷ್ಟ ಪದಾರ್ಥಗಳನ್ನೆಲ್ಲಾ ತಿನ್ನುತ್ತಿದ್ದೆನು. ಬೆಳಿಗ್ಗೆ ಸಾಮಾನ್ಯವಾಗಿ ಆರೇಳು ಘಂಟೆಗೆ ಮುಂಚೆ ಏಳುತ್ತಲೇ ಇರಲಿಲ್ಲ. ಆದುದರಿಂದ ನಾನು ಕೂಡ ಬೆಳಗಿನ ಊಟವನ್ನು ಬಿಟ್ಟು ಬಿಟ್ಟರೆ ನನ್ನ ತಲೆನೋವು ವಾಸಿಯಾಗುವದೆಂದು ನನಗೆ ತೋರಿತು. ಇದಕ್ಕನುಸಾರವಾಗಿ ನಾನು ಬೆಳಗಿನ ಊಟವನ್ನು ಬಿಟ್ಟುಬಿಟ್ಟೆನು. ಕೆಲವು ದಿನವೇನೋ ಸ್ವಲ್ಪ ಕಿರಿಕಿರಿಯಾಯಿತು. ಆದರೆ ತಲೆ ನೋವು ಎಂದಿಗೂ ಬರದಂತೆ ಮಾಯವಾಯಿತು. ಇದರಿಂದ ನನಗೆ ಆವಶ್ಯಕವಾದುದಕ್ಕಿಂತ ಹೆಚ್ಚಾಗಿ ಊಟಮಾಡುತ್ತಿದ್ದೆ ನೆಂಬುದು ನಿಶ್ಚಯವಾಯಿತು.

ಆದರೆ ಈ ಬದಲಾವಣೆಯಿಂದ ಮಲಬದ್ಧತೆಯೇನೂ ಕಡಿಮೆ ಯಾಗಲಿಲ್ಲ. ನಾನು ಕ್ಯೂನೆಯ ಕಟಿಸ್ನಾನದ ಉಪಚಾರವನ್ನು ನಡೆಸಿದೆನು. ಇದರಿಂದ ಸ್ವಲ್ಪ ಉತ್ತಮವಾದರೂ ಸಂಪೂರ್ಣವಾಗಿ ಗುಣವಾಗಲಿಲ್ಲ. ಈ ಮಧ್ಯೆ ಶಾಕಾಹಾರದ ಭೋಜನಾಲಯ ವನ್ನಿಟ್ಟಿದ್ದ ಜರ್ಮನನೋ ಅಥವಾ ಇನ್ನಾವ ಮಿತ್ರರೋ ಜಸ್ಟ್ ಎಂಬಾತನ 'ರಿಟರ್ನ್ ಟು ನೇಚರ್' (ಪ್ರಕೃತಿಯ ದಾರಿಗೆ ಹಿಂತಿರುಗು) ಎಂಬ ಪುಸ್ತಕವನ್ನು ನನ್ನ ಕೈಯಲ್ಲಿಟ್ಟರು. ಅದ ರಲ್ಲಿ ನಾನು ಮಣ್ಣಿನ ಉಪಚಾರದ ವಿಷಯವಾಗಿ ಓದಿದೆನು.

ಹೊಸಹಣ್ಣುಗಳೂ ಬಾದಾಮಿ ಮುಂತಾದವೂ ಮನುಷ್ಯನ ಸ್ವಾಭಾವಿಕ ಆಹಾರವೆಂದು ಈ ಲೇಖಕರು ವಾದಿಸಿದ್ದರು. ಬರಿಯ ಹಣ್ಣನ್ನೇ ಆಹಾರವಾಗಿ ತೆಗೆದುಕೊಳ್ಳುವದನ್ನು ನಾನು ಒಡನೆಯೇ ಮೊದಲುಮಾಡಲಿಲ್ಲ. ಆದರೆ ಮಣ್ಣಿನ ಉಪಚಾರ ವನ್ನು ತಕ್ಷಣವೇ ಪ್ರಾರಂಭಿಸಿದೆನು. ಇದರಿಂದ ಅತ್ಯುತ್ತಮ ವಾದ ಫಲವು ದೊರಕಿತು. ಈ ಉಪಚಾರವನ್ನು ನಡೆಸಿದುದು ಹೇಗೆಂದರೆ: ಶುಚಿಯಾದ ಹೊಲದಿಂದ ಕರಿಯ ಅಥವಾ ಕೆಂಪು ಮಣ್ಣನ್ನು ತೆಗೆದುಕೊಂಡು ಬಂದು ಅದಕ್ಕೆ ನಿಯತ ಪರಿಮಾಣ ದಲ್ಲಿ ನೀರನ್ನು ಬೆರೆಸಿ ಆ ಮಣ್ಣನ್ನು ಒಂದು ತೆಳುವಾದ ಒದ್ದೆಯ ಬಟ್ಟೆಯಮೇಲೆ ಪೋಲ್ಟೀಸಿನಂತೆ ಹರಡಿ ಅದನ್ನು ಹೊಟ್ಟೆಯ ಮೇಲೆ ಕಟ್ಟುತ್ತಿದ್ದೆನು. ಇದನ್ನು ನಾನು ರಾತ್ರಿ ಮಲಗುವದಕ್ಕೆ ಮುಂಚೆ ಕಟ್ಟಿ ಬೆಳಿಗ್ಗೆ ಅಥವಾ ರಾತ್ರಿ ಯಾವಾಗ ಎಚ್ಚರವಾದರೆ ಆಗ ಬಿಚ್ಚುತ್ತಿದ್ದೆನು. ಇದರಿಂದ ನನ್ನ ಮಲಬದ್ಧತೆಯು ಸಂಪೂರ್ಣವಾಗಿ ತೊಲಗಿತು. ಅಲ್ಲಿಂದೀಚೆಗೆ ನಾನು ಈ ಮಣ್ಣಿನ ಉಪಚಾರವನ್ನು ನನ್ನ ವಿಷಯದಲ್ಲೂ ನನ್ನ ಮಿತ್ರರ ವಿಷಯ ದಲ್ಲೂ ನಡೆಸಿದ್ದೇನೆ. ಇದು ಒಂದು ಸಲವೂ ನಿಷ್ಫಲವಾಗಿಲ್ಲ.

ಸ್ವದೇಶಕ್ಕೆ ಹಿಂತಿರುಗಿದ ಮೇಲೆ ಈ ಉಪಚಾರವನ್ನು ಅಷ್ಟು ಭರವಸೆಯಿಂದ ನಡೆಸಲು ಶಕ್ತನಾಗಿಲ್ಲ. ನಾನು ಒಂದು ಕಡೆ ಶಾಂತಿಪೂರ್ವಕವಾಗಿ ನೆಲೆಸಿ ಈ ಶೋಧನೆಗಳನ್ನು ನಡೆಸುವದಕ್ಕೆ ನನಗೆ ಅವಕಾಶ ದೊರೆತಿಲ್ಲ. ಆದರೆ ಮಣ್ಣು ಮತ್ತು ನೀರು ಇವುಗಳ ಉಪಚಾರದಲ್ಲಿ ಈಗಲೂ ನನಗೆ ಮೊದಲಿದ್ದಷ್ಟೇ ನಂಬಿಕೆಯಿದೆ. ಇಂದು ಕೂಡ ನಾನು ಒಂದುಮಟ್ಟಿಗೆ ಈ ಉಪಚಾರವನ್ನು ನಡೆಸಿ ಕೊಳ್ಳುತ್ತೇನೆ ಮತ್ತು ಸಮಯವೊದಗಿದಾಗ ನನ್ನ ಜೊತೆಗಾರರಿಗೆ ಕೂಡ ಈ ಉಪಚಾರವನ್ನು ನಡೆಸಬೇಕೆಂದು ಹೇಳುತ್ತೇನೆ.

ನನ್ನ ಜೀವನದಲ್ಲಿ ನನಗೆ ಎರಡು ಸಲ ಉಗ್ರವಾದ ಕಾಹಿಲೆ ಯುಂಟಾಗಿದೆ. ಆದರೂ ಮನುಷ್ಯನಿಗೆ ಔಷಧ ಕುಡಿಯುವ

ಆವಶ್ಯಕತೆಯು ಕೇವಲ ಕಡಿಮೆಯೆಂದೂ ಸರಿಯಾದ ಪಥ್ಯದಿಂ ದಲೂ ಮಣ್ಣಿನ ಮತ್ತು ನೀರಿನ ಉಪಚಾರಗಳಿಂದಲೂ ಅದೇ ರೀತಿ ಯಲ್ಲಿ ಮನೆಯಲ್ಲಿ ಮಾಡಬಹುದಾದ ಇತರ ಚಿಕಿತ್ಸೆಗಳಿಂದಲೂ ಸಾವಿರದಲ್ಲಿ ಒಂಬೈನೂರ ತೊಂಬತ್ತೊಂಬತ್ತು ಕಾಹಿಲೆಗಳನ್ನು ಗುಣಮಾಡಬಹುದೆಂದೂ ನನಗೆ ವಿಶ್ವಾಸವಿದೆ. ಸ್ವಲ್ಪ ಹೆಚ್ಚು ಕಡಿಮೆಯಾದರೆ ಕ್ಷಣಕ್ಷಣಕ್ಕೂ ಡಾಕ್ಟರರ, ವೈದ್ಯರ ಅಥವಾ ಹಕೀಮರ ಬಳಿ ಹೋಗಿ ತನ್ನ ಶರೀರವನ್ನು ಭೂಮಿಸಂಬಂಧ ಅಥವಾ ಸಸ್ಯಸಂಬಂಧವಾದ ಔಷಧದಿಂದ ತುಂಬಿಕೊಳ್ಳುವವನು ತನ್ನ ಆಯುಸ್ಸಿನ ಪರಿಮಾಣವನ್ನು ಕಡಿಮೆಮಾಡಿಕೊಳ್ಳುವದಲ್ಲದೆ ತನ್ನ ಶರೀರದ ಯಜಮಾನನಾಗಿರುವದರ ಬದಲು ಅದರ ಗುಲಾ ಮನಾಗಿ ಹಾಗೆಯೇ ತನ್ನ ಮನಸ್ಸನ್ನು ದುರ್ಬಲಪಡಿಸಿಕೊಂಡು ತನ್ನ ಮನುಷ್ಯತ್ವವನ್ನು ಕಳೆದುಕೊಳ್ಳುತ್ತಾನೆ.

ನಾನು ಇದೆಲ್ಲವನ್ನೂ ರೋಗಶಯ್ಯೆಯಲ್ಲಿಯೇ ಬಿದ್ದುಕೊಂ ಡು ಬರಿಯುತ್ತಿದ್ದೇನೆಂದು ಯೋಚಿಸಿ ಯಾರೂ ಈ ಮಾತುಗಳನ್ನು ತುಚ್ಛೀಕರಿಸದಿರಲಿ. ನನ್ನ ಕಾಹಿಲೆಯ ಕಾರಣಗಳು ನನಗೆ ಗೊತ್ತು. ನಾನೇ ನನ್ನ ಕಾಹಿಲೆಗೆ ಕಾರಣನೆಂದು ನನಗೆ ಸಂಪೂರ್ಣವಾಗಿ ತಿಳಿದಿದೆ. ಈ ತಿಳಿವಳಿಕೆಯಿರುವದರಿಂ ದಲೇ ನಾನು ತಾಳ್ಮೆಗುಂದಿಲ್ಲ. ಈ ಕಾಹಿಲೆಯು ದೇವರು ನನಗೆ ಬುದ್ಧಿಕಲಿಸಲೋಸುಗ ನನ್ನಲ್ಲಿ ಮಾಡಿದ ಅನುಗ್ರಹವೆಂದು ಎಣಿಸಿ ಅನೇಕ ಔಷಧಗಳನ್ನು ತೆಗೆದುಕೊಳ್ಳುವ ಆಸೆಯನ್ನು ಇದಿರಿಸಿ ಜಯಿಸಿದ್ದೇನೆ. ನನ್ನ ಈ ಹಟದಿಂದ ನನ್ನ ಡಾಕ್ಟರ್ ಮಿತ್ರರಿಗೆ ಬಹಳ ಬೇಸರವುಂಟಾಗುವುದೆಂದು ನನಗೆ ಗೊತ್ತು. ಆದರೆ ಅವರು ಔದಾರ್ಯದಿಂದ ನನ್ನ ಹಟವನ್ನ ಸಹಿಸುತ್ತಾರೆಯೇ ವಿನಾ ನನ್ನನ್ನ ಬಿಟ್ಟುಬಿಡುವದಿಲ್ಲ.

ಆದರೆ ನಾನು ಅನ್ಯವಿಚಾರಕ್ಕೆ ಹೋಗಬಾರದು. ಆದುದ ರಿಂದ ನಾವು ೧೯೦೪-ಕ್ಕೆ ಹಿಂತಿರುಗುವ.

ಈ ವಿಚಾರವಾಗಿ ಮುಂದುವರಿಯುವದಕ್ಕೆ ಮೊದಲು ಪಾಠಕರಿಗೊಂದು ಎಚ್ಚರಿಕೆಯ ಮಾತನ್ನು ಹೇಳಬೇಕು. ಈ ಅಧ್ಯಾಯದ ಆಧಾರದ ಮೇಲೆ ಜಸ್ಟನ ಪುಸ್ತಕವನ್ನು ಕೊಳ್ಳುವವರು ಅದರಲ್ಲಿರುವ ಪ್ರತಿಯೊಂದು ಮಾತೂ ವೇದವಾಕ್ಯವೆಂದೆಣಿಸಕೂಡದು. ಪ್ರತಿಯೊಬ್ಬ ಲೇಖಕನೂ ಸಾಮಾನ್ಯವಾಗಿ ಯಾವ ವಿಷಯವನ್ನಾಗಲಿ ತನ್ನ ದೃಷ್ಟಿಯೊಂದರಿಂದ ಮಾತ್ರ ತಿಳಿಸುತ್ತಾನೆ. ಆದರೆ ಪ್ರತಿಯೊಂದು ವಿಷಯುವನ್ನೂ ಕಟ್ಟಕಡೆಗೆ ಏಳು ದೃಷ್ಟಿಯಿಂದ ನೋಡಬಹುದು. ಈ ಏಳು ದೃಷ್ಟಿಗಳಲ್ಲಿ ಪ್ರತಿಯೊಂದೂ ತನ್ನಷ್ಟಕ್ಕೆ ಮಾತ್ರ ಸರಿಯಾಗಿದ್ದರೂ ಒಂದೇ ಸಮಯದಲ್ಲಿ ಮತ್ತು ಒಂದೇ ಪ್ರಸಂಗದಲ್ಲಿ ಎಲ್ಲವೂ ಬಹುಶಃ ಸರಿಯಾಗಿರಲಾರವು. ಮತ್ತು ಅನೇಕ ಪುಸ್ತಕಗಳು ಮಾರಾಟಕ್ಕಾಗಿಯೂ ಖ್ಯಾತಿಯ ಆಸೆಗಾಗಿಯೂ ಬರೆದವಾಗಿರುತ್ತವೆ. ಆದುದರಿಂದ ಈ ಪುಸ್ತಕಗಳನ್ನೋದುವವರು ವಿವೇಚನಾಪೂರ್ವಕವಾಗಿ ಓದಲಿ ಮತ್ತು ಅವುಗಳಲ್ಲಿ ಹೇಳಿರುವ ಯಾವದಾದರೂ ಪ್ರಯೋಗವನ್ನು ನಡೆಸಬೇಕೆಂದು ಅವರು ಇಚ್ಛಿಸಿದರೆ ಮೊದಲು ಯಾರಾದರೂ ಅನುಭವವುಳ್ಳವರ ಸಲಹೆಯನ್ನು ಪಡೆಯಲಿ ಅಥವಾ ಈ ಪುಸ್ತಕಗಳನ್ನು ಸಾವಧಾನವಾಗಿ ಓದಿ ಚೆನ್ನಾಗಿ ಮನನ ಮಾಡಿಕೊಂಡು ಆಮೇಲೆ ಪ್ರಯೋಗಗಳನ್ನು ನಡೆಸಲಿ.

---

೮

# ಎಚ್ಚರಿಕೆ

ಈ ಅನ್ನವಿಚಾರವನ್ನು ಮುಂದಿನ ಅಧ್ಯಾಯದವರೆಗೂ ಬೆಳೆಸಬೇಕಾಗುವುದು.

ಮೇಲೆ ಹೇಳಿದಂತೆ ಮಣ್ಣಿನ ಚಿಕಿತ್ಸೆಯ ವಿಚಾರವಾದ ಶೋಧನೆಗಳ ಜೊತೆಗೆ ಆಹಾರವಿಷಯಕವಾದ ಪ್ರಯೋಗಗಳನ್ನೂ ನಡೆಸುತ್ತಿದ್ದೆನು. ಈ ಶೋಧನೆಗಳ ವಿಚಾರವಾಗಿ ಮುಂದೆ ತಿಳಿಸುವೆನಾದರೂ ಈಗ ಅವುಗಳನ್ನು ಕುರಿತು ಸ್ವಲ್ಪಮಟ್ಟಿಗೆ ಬರೆಯುವದು ಅನುಚಿತವಾಗಿರಲಾರದು.

ಈ ಅಧ್ಯಾಯಗಳಲ್ಲಿ ಈಗಾಗಲಿ ಮುಂದಾಗಲಿ ಆಹಾರವಿಷಯಕವಾದ ಶೋಧನೆಗಳ ವಿಚಾರವನ್ನು ವಿಸ್ತಾರವಾಗಿ ವರ್ಣಿಸುವದಿಲ್ಲ. ಏಕೆಂದರೆ ಈ ಕೆಲಸವನ್ನು ನಾನು ದಕ್ಷಿಣ ಆಫ್ರಿಕದಲ್ಲಿ 'ಇಂಡಿಯನ್ ಒಪಿನಿಯನ್' ಎಂಬ ವೃತ್ತಪತ್ರಿಕೆಯಲ್ಲಿ ಒಂದು ಲೇಖನಸಮುದಾಯದಲ್ಲಿ ನಡೆಸಿದೆನು. ಇದು 'ಆರೋಗ್ಯಸಾಧನ' ಎಂಬ ಹೆಸರಿನಿಂದ ಇಂಗ್ಲಿಷಿನಲ್ಲಿ ಆಮೇಲೆ ಪ್ರಸಿದ್ಧವಾಯಿತು. ನಾನು ಬರೆದಿರುವ ಸಣ್ಣಪುಸ್ತಕಗಳಲ್ಲಿ ಇದೇ ಪೂರ್ವದಲ್ಲಿಯೂ ಮತ್ತು ಪಶ್ಚಿಮದಲ್ಲಿಯೂ ಎಲ್ಲಕ್ಕಿಂತ ಹೆಚ್ಚಾದ ಪ್ರಸಿದ್ಧಿಯನ್ನು ಪಡೆದಿದೆ. ಇದಕ್ಕೆ ಕಾರಣವು ನನಗೆ ಇದುವರೆಗೂ ಗೊತ್ತಾಗಿಲ್ಲ. 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಸಲುವಾಗಿ ಈ ಪುಸ್ತಕವು ಬರೆಯಲ್ಪಟ್ಟಿತು. ಆದರೂ ಈ ಪುಸ್ತಕದ ಆಧಾರದ ಮೇಲೆಯೇ ನನ್ನನ್ನು ಎಂದೂ ನೋಡದ ಪೂರ್ವದ ಮತ್ತು ಪಶ್ಚಿಮದ ಅನೇಕ ಬಂಧುಭಗಿನಿಯರು ತಮ್ಮ ಜೀವನದ ರೀತಿಯನ್ನು ಬಹಳ ಮಾರ್ಪಡಿಸಿಕೊಂಡಿರುತ್ತಾರೆ. ಮತ್ತು ಅವರು ನನ್ನೊಡನೆ ಪತ್ರವ್ಯವಹಾರವನ್ನು ನಡೆಸಿರುತ್ತಾರೆ. ಆದುದರಿಂದ

ಲೇ ಈ ವಿಷಯವಾಗಿ ಇಲ್ಲಿ ಸ್ವಲ್ಪಮಟ್ಟಿಗೆ ಬರೆಯುವದು ಆವಶ್ಯಕವೆಂದು ತೋರಿದೆ. ಆ ಪುಸ್ತಕದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಬದಲಾಯಿಸಲು ನನಗೆ ಯಾವ ಆವಶ್ಯಕತೆಯೂ ತೋರದಿದ್ದರೂ ನಾನು ನನ್ನ ಆಚರಣೆಯಲ್ಲಿ ಕೆಲವು ಮಹತ್ವದ ಸುಧಾರಣೆಗಳನ್ನು ಮಾಡಿಕೊಂಡಿದ್ದೇನೆ. ಈ ವಿಷಯವು ಆ ಪುಸ್ತಕದ ಎಲ್ಲಾ ಪಾಠಕರಿಗೂ ಗೊತ್ತಿಲ್ಲ. ಅವರು ಇದನ್ನು ತಿಳಿದುಕೊಳ್ಳಬೇಕಾದುದು ಆವಶ್ಯಕ.

ನನ್ನ ಇತರ ಪುಸ್ತಕಗಳನ್ನು ಬರೆಯುವದರಲ್ಲಿದ್ದಂತೆಯೇ ಈ ಪುಸ್ತಕವನ್ನು ಬರೆಯುವದರಲ್ಲಿಯೂ ಕೇವಲ ಧರ್ಮಭಾವವಿದ್ದಿತು. ಈ ಭಾವವೇ ನಾನು ಮಾಡಿದ ಪ್ರತಿಯೊಂದು ಕಾರ್ಯವನ್ನೂ ಪ್ರೇರಿಸಿದೆ. ಆದುದರಿಂದ ಈ ಪುಸ್ತಕದಲ್ಲಿ ವಿವರಿಸಿರುವ ಕೆಲವು ವಿಷಯಗಳನ್ನು ಕಾರ್ಯತಃ ನಾನು ನಡೆಸಲು ಅಸಕ್ತನಾಗಿರುವದು ನನಗೆ ಬಹಳ ಖೇದಕ್ಕೂ ಲಜ್ಜೆಗೂ ಕಾರಣವಾಗಿದೆ.

ಮಗುವಾಗಿರುವಾಗ ತಾನು ಕುಡಿಯುವ ತಾಯ ಹಾಲನ್ನು ಬಿಟ್ಟು ಮನುಷ್ಯನಿಗೆ ಬೇರೆ ಹಾಲನ್ನು ಕುಡಿಯುವ ಆವಶ್ಯಕತೆಯೇ ಇಲ್ಲವೆಂದು ನನ್ನ ದೃಢವಾದ ಮತ. ಬಿಸಿಲಿನಲ್ಲಿ ಮಾಗಿದ ಹಣ್ಣು ಮತ್ತು ಬಾದಾಮಿ ಮುಂತಾದವಲ್ಲದೆ ಆತನು ಇನ್ನಾವ ಆಹಾರವನ್ನೂ ತೆಗೆದುಕೊಳ್ಳಕೂಡದು. ಬಾದಾಮಿ ಮುಂತಾದ ಬೀಜಗಳಿಂದಲೂ ದ್ರಾಕ್ಷಿ ಮುಂತಾದ ಹಣ್ಣುಗಳಿಂದಲೂ ಮನುಷ್ಯನ ಶರೀರಕ್ಕೂ ಬುದ್ಧಿಗೂ ಸಾಕಾದಷ್ಟು ಪೋಷಣೆಯು ದೊರೆಯುತ್ತದೆ. ಇಂತಹ ಆಹಾರದಿಂದ ಜೀವಿಸುವವರಿಗೆ ಬ್ರಹ್ಮಚರ್ಯವೂ ಆತ್ಮಸಂಯಮವೂ ಕೇವಲ ಸಹಜವಾದ ಗುಣಗಳಾಗುತ್ತವೆ. 'ಊಟದಂತೆಯೇ ಮಾಟ' ಎಂಬ ಗಾದೆಯಲ್ಲಿ ಬಹಳ ಸತ್ಯವಿದೆಯೆಂದು ನನಗೂ ನನ್ನ ಜೊತೆಗಾರರಿಗೂ ಅನುಭವದಿಂದ ಗೊತ್ತಾಗಿದೆ.

'ಆರೋಗ್ಯಸಾಧನ'ದಲ್ಲಿ ಈ ವಿಚಾರಗಳೆಲ್ಲಾ ವಿಸ್ತಾರವಾಗಿ ಸಮರ್ಥಿಸಲ್ಪಟ್ಟಿವೆ.

ಆದರೆ ಹಿಂದುಸ್ಥಾನದಲ್ಲಿ ಈ ತತ್ವಗಳಲ್ಲಿ ಕೆಲವನ್ನು ಅನುಸರಿಸಲು ನನಗೆ ದುರದೃಷ್ಟದಿಂದ ಸಾಧ್ಯವಿಲ್ಲದೆ ಹೋಗಿದೆ. ಖೇಡಾದಲ್ಲಿ ಯುದ್ಧಕ್ಕಾಗಿ ಸಿಪಾಯಿಗಳನ್ನು ಕೂಡಿಸುವ ಕಾರ್ಯದಲ್ಲಿ ತೊಡಗಿರುವಾಗ ನಾನು ಆಹಾರದ ವಿಷಯದಲ್ಲಿ ಅವಿವೇಕದಿಂದ ನಡೆದುದರಿಂದ ಮರಣಶಯ್ಯೆಯಲ್ಲಿ ಮಲಗಿದೆನು. ಅತಿಕುಂದಿದ ಆರೋಗ್ಯವನ್ನು ಹಾಲಿನ ಸಹಾಯವಿಲ್ಲದೆ ಉತ್ತಮಗೊಳಿಸಲು ಪ್ರಯತ್ನಪಟ್ಟೆನು. ಆದರೆ ಇದು ಸಫಲವಾಗಲಿಲ್ಲ. ಹಾಲಿಗೆ ಬದಲಾಗಿ ಬೇರಾವದಾದರೂ ಪದಾರ್ಥವನ್ನು ಸೂಚಿಸುವರೆಂದು ನನಗೆ ತಿಳಿದ ವೈದ್ಯರ, ಡಾಕ್ಟರರ, ಶಾಸ್ತ್ರಜ್ಞರಸಹಾಯವನ್ನು ಬೇಡಿದೆನು. ಕೆಲವರು ಹೆಸರುಬೇಳೆ ಸೀರನ್ನೂ ಕೆಲವರು 'ಮೌಹರ' ದ ಎಣ್ಣೆಯನ್ನೂ ಕೆಲವರು ಬಾದಾಮಿಯ ಹಾಲನ್ನೂ ಸೂಚಿಸಿದರು. ಈ ಪದಾರ್ಥಗಳನ್ನೆಲ್ಲಾ ಉಪಯೋಗಿಸುವ ಪ್ರಯತ್ನದಲ್ಲಿ ನನ್ನ ಶರೀರವು ಕುಂದಿತೇ ಹೊರತು ನಾನು ಹಾಸಿಗೆ ಬಿಟ್ಟು ಏಳುವದಕ್ಕಾಗಲಿಲ್ಲ. ರೋಗವನ್ನು ವಾಸಿಮಾಡಿಕೊಳ್ಳುವದರಲ್ಲಿ ಖಾದ್ಯಾಖಾದ್ಯಗಳ ಭೇದವೇನೂ ಇಲ್ಲವೆಂಬುದಕ್ಕೆ ಪ್ರಮಾಣವಾಗಿ ವೈದ್ಯರು ನನಗೆ ಚರಕ ಮುಂತಾದುದರಿಂದ ಶ್ಲೋಕಗಳನ್ನು ಓದಿದರು. ಇಂತಹರು ನಾನು ಹಾಲಿಲ್ಲದೆ ಬೇಏಸುವದಕ್ಕೆ ನನಗೇನೂ ಸಹಾಯಮಾಡುವಂತಿರಲಿಲ್ಲ. ಇನ್ನು 'ಬೀಫ್‌ಟೀ' (ದನದ ಮಾಂಸದಿಂದ ಮಾಡಿದ ಚಹಾ) ಮತ್ತು ಬ್ರ್ಯಾಂಡಿಗಳನ್ನು ತೆಗೆದುಕೊಳ್ಳಬೇಕೆಂದು ಸ್ವಲ್ಪವೂ ಹಿಂತೆಗೆಯದೆ ಹೇಳುವವರು ನಾನು ಹಾಲನ್ನು ಬಿಟ್ಟುಬಿಡುವದರಲ್ಲಿ ನನಗೆ ಸಹಾಯ ಮಾಡುವದಾದರೂ ಎಂತು?

ಹಸುವಿನ ಮತ್ತು ಎಮ್ಮೆಯ ಹಾಲನ್ನು ನಾನು ಕುಡಿಯುವದಕ್ಕೆ ಆಗುತ್ತಿರಲಿಲ್ಲ. ಏಕೆಂದರೆ ನಾನು ಹಾಗೆ ವ್ರತವನ್ನು ಹಿಡಿದಿದ್ದೆನು. ಈ ವ್ರತದ ಉದ್ದೇಶವೇನೋ ಎಲ್ಲಾ ತೆರದ ಹಾಲನ್ನು ತ್ಯಾಗಮಾಡಬೇಕೆಂದಿದ್ದರೂ ನಾನು ವ್ರತಹಿಡಿದಾಗ ನನ್ನ ಮನಸ್ಸಿನಲ್ಲಿ ಗೋಮಹಿಷಮಾತೆಯರು ಮಾತ್ರ ಇದ್ದುದರಿಂದಲೂ

ಮತ್ತು ನಾನು ಜೀವಿಸಿರಬೇಕೆಂಬ ಆಸೆ ನನಗಿದ್ದುದರಿಂದಲೂ ನಾನು ಈ ವ್ರತವನ್ನು ಅಕ್ಷರಶಃ ಪಾಲಿಸಿದರೆ ಸಾಕೆಂದು ಹೇಗೋ ನನ್ನ ಮನಸ್ಸು ಪ್ರೇರಿಸಿ ಮೇಕೆಯ ಹಾಲನ್ನು ತೆಗೆದುಕೊಳ್ಳಲು ನಿರ್ಧರಿಸಿದೆನು. ಮೇಕೆಯ ಹಾಲನ್ನು ತೆಗೆದುಕೊಳ್ಳಲು ಮೊದಲು ಮಾಡಿದಾಗ ನಾನು ವ್ರತವನ್ನು ಅಕ್ಷರಶಃ ಪಾಲಿಸಿದರೂ ನಿಜವಾಗಿ ಅದನ್ನು ಭಂಗಮಾಡಿದೆನೆಂದು ನನಗೆ ಚೆನ್ನಾಗಿ ಗೊತ್ತಿದ್ದಿತು.

ಆದರೆ ರೌಲಟ್ ಕಾನೂನಿಗೆ ವಿರೋಧವಾಗಿ ಚಳವಳಿಯನ್ನು ನಡೆಸಬೇಕೆಂಬ ಮೋಹವು ನನ್ನನ್ನು ಹಿಡಿದಿದ್ದಿತು. ಅದರೊಡನೆಯೇ ಬದುಕಿರಬೇಕೆಂಬ ಇಚ್ಛೆಯೂ ಬೆಳೆಯಿತು. ಇದರಿಂದ ನನ್ನ ಜೀವನದ ದೊಡ್ಡ ಶೋಧನೆಗಳಲ್ಲಿ ಒಂದು ನಿಂತುಹೋಯಿತು.

'ಖಾನಪಾನಕ್ಕೂ ಆತ್ಮಕ್ಕೂ ಯಾವ ಸಂಬಂಧವೂ ಇಲ್ಲ. ಅದುರಿಂದ ಲಾಭವಾಗಲಿ ಹಾನಿಯಾಗಲಿ ಉಂಟಾಗುವದು ಹೊರಗಿನಿಂದ ಒಳಕ್ಕೆ ಹೋಗುವ ಆಹಾರದಿಂದಲ್ಲ, ಒಳಗಿನಿಂದ ಹೊರಡುವ ಮಾತುಗಳಿಂದ' ಎಂದು ವಾದಿಸುವದು ನನಗೆ ಗೊತ್ತು. ಇದರಲ್ಲಿ ಸ್ವಲ್ಪ ತಥ್ಯಾಂಶವೂ ಉಂಟು. ಆದರೆ ಈ ವಾದವನ್ನು ವಿಮರ್ಶಿಸುವದರ ಬದಲು ಇಲ್ಲಿ ಈ ವಿಚಾರವಾಗಿ ನನ್ನ ದೃಢ ನಿಶ್ಚಯವನ್ನು ತಿಳಿಸುತ್ತೇನೆ. ಯಾರು ಈಶ್ವರನಲ್ಲಿ ಭಯವಿಟ್ಟು ನಡೆಯಬೇಕೆಂದಿರುತ್ತಾರೋ, ಯಾರು ಈಶ್ವರನ ಪ್ರತ್ಯಕ್ಷ ದರ್ಶನವನ್ನು ಹೊಂದಲೆಳಸುತ್ತಾರೋ, ಆ ಸಂಶೋಧಕರಿಗೆ ಮನೋನಿಗ್ರಹವೂ ಮಾತಿನ ಸಂಯಮವೂ ಹೇಗೆ ಆವಶ್ಯಕವೋ ಹಾಗೆಯೇ ಆಹಾರದ ರುಚಿ ಮತ್ತು ಪರಿಮಾಣಗಳ ವಿಷಯದಲ್ಲಿ ಕೂಡ ನಿಗ್ರಹವೂ ಆವಶ್ಯಕ.

ಆದರೆ ನಾನು ಸ್ವತಃ ಎಡವಿರುವ ದಾರಿಯ ವಿಚಾರವನ್ನು ತಿಳಿಸುವದಷ್ಟೇ ಅಲ್ಲದೆ ಇತರರು ಆ ದಾರಿಯಲ್ಲಿ ಹೋಗಕೂಡದೆಂದು ಎಚ್ಚರಿಕೆಯನ್ನೂ ಕೊಡಬೇಕು. ಆದುದರಿಂದ ನನ್ನ ಪುಸ್ತ

ಕದಲ್ಲಿ ವಿವರಿಸಿರುವ ತತ್ವಗಳ ಆಧಾರದ ಮೇಲೆ ಹಾಲನ್ನು ಬಿಟ್ಟಿರು ವವರು ಅದರಿಂದ ತಮಗೆ ಎಲ್ಲಾ ವಿಧದಲ್ಲೂ ಗುಣ ತೋರಿ ಬಂದ ಹೊರತು ಅಥವಾ ಅನುಭವಶಾಲಿಗಳಾದ ಡಾಕ್ಟರ ಸಲ ಹೆಯ ಮೇರೆಗೆ ವಿನಾ ಹಾಲಿನ ತ್ಯಾಗವನ್ನು ಮಾಡದಿರಲಿ. ಇಲ್ಲಿಯು ವರೆಗಿನ ನನ್ನ ಅನುಭವದಿಂದ ನನಗೆ ಕಂಡುಬರುವದೇ ನೆಂದರೆ: ಅರಗಿಸಿಕೊಳ್ಳುವ ಶಕ್ತಿಯಿಲ್ಲದವರಿಗೆ ಮತ್ತು ಕಾಹಿಲೆ ಮಲಗಿರುವವರಿಗೆ ಹಾಲಿನಷ್ಟು ಹಗುರವಾದ ಪೋಷಣೆಯನ್ನು ಕೊಡುವ ಆಹಾರ ಮತ್ತೊಂದಿಲ್ಲ.

ಈ ಪ್ರಕರಣವನ್ನು ಓದಿದ ವೈದ್ಯರಾಗಲಿ, ಡಾಕ್ಟರಾಗಲಿ, ಹಕೀಮರಾಗಲಿ, ಅಥವಾ ಈ ವಿಚಾರದಲ್ಲಿ ಅನುಭವವುಳ್ಳ ಇತರರ ರಾಗಲಿ—ಪುಸ್ತಕವನ್ನೋದುವದರಿಂದಲ್ಲ—ತಮ್ಮ ಅನುಭವದಿಂದ ಹಾಲಿನಷ್ಟೇ ಹಗುರವಾದ ಪೋಷಕವಾದ ವನಸ್ಪತಿ ಯಾವದಾ ದರೂ ಇದ್ದರೆ ನನಗೆ ತಿಳಿಸಿದರೆ ಉಪಕಾರವಾದೀತು.

~~~
~~~

೯

# ಅಧಿಕಾರದೊಡನೆ ಕದನ

ಈಗ 'ಏಷ್ಯಾಟಿಕ್' ಖಾತೆಯ ಕಡೆ ದೃಷ್ಟಿಯನ್ನು ತಿರುಗಿಸೋಣ.

ಜೋಹಾನ್ಸ್‌ಬರ್ಗ್ ನಗರವು 'ಏಷ್ಯಾಟಿಕ್' ಅಧಿಕಾರಿಗಳಿಗೆ ಎಲ್ಲಕಿಂತ ದೊಡ್ಡ ಠಾಣೆಯಾಗಿದ್ದಿತು. ಈ ಅಧಿಕಾರಿಗಳು ಏಷಿಯಾ ನಿವಾಸಿಗಳಾದ ಭಾರತೀಯರು ಚೀನರು ಮುಂತಾದವರನ್ನು ರಕ್ಷಿಸುವದರ ಬದಲು ಅರೆದು ಹಾಕುತ್ತಿದ್ದುದನ್ನು ನಾನು ನೋಡುತ್ತಿದ್ದೆನು. "ಹಕ್ಕಿರುವವರನ್ನು ಒಳಕ್ಕೆ ಬಿಡುವದೇ ಇಲ್ಲ, ಹಕ್ಕಿಲ್ಲದವರು ನೂರು ನೂರು ಪೌಂಡುಕೊಟ್ಟು ಕಳ್ಳತನದಿಂದ ಒಳಕ್ಕೆ ಬರುತ್ತಾರೆ. ನೀವು ಇದಕ್ಕೆ ಮದ್ದು ಮಾಡದಿದ್ದರೆ ಇನ್ನಾರ ಕೈಯಲ್ಲಾಗುತ್ತದೆ?" ಎಂದು ಪ್ರತಿನಿತ್ಯವೂ ನನ್ನ ಬಳಿಗೆ ಫಿರ್ಯಾದು ಬರುತ್ತಿದ್ದಿತು. ನನಗೂ ಹೀಗೇ ಎನಿಸುತ್ತಿದ್ದಿತು. ಈ ಕೇಡನ್ನು ತೊಲಗಿಸುವದು ನನ್ನ ಕೈಯಲ್ಲಾಗದಿದ್ದರೆ ನಾನು ಟ್ರಾನ್ಸ್‌ವಾಲಿನಲ್ಲಿರುವದು ವ್ಯರ್ಥವೆನಿಸಿತು.

ನಾನು ಋಜುವಾತಿಗೆ ಬೇಕಾದ ವಿಷಯಗಳನ್ನು ಒಟ್ಟುಗೂಡಿಸತೊಡಗಿದೆನು. ಇದಕ್ಕೆ ಸಾಕಾದಷ್ಟನ್ನು ಸೇರಿಸಿದೊಡನೆಯೇ ನಾನು ಪೋಲಿಸ್ ಕಮಿಷನರ ಬಳಿಗೆ ಹೋದೆನು. ಅವರು ನ್ಯಾಯವರ್ತಿಗಳಾದ ಮನುಷ್ಯರೆಂದು ನನಗೆ ತೋರಿತು. ನನ್ನನ್ನು ತಿರಸ್ಕರಿಸಿ ಕಳುಹಿಸುವದಕ್ಕೆ ಬದಲಾಗಿ ಅವರು ನಾನು ಹೇಳುವದನ್ನೆಲ್ಲಾ ಸಾವಧಾನವಾಗಿ ಕೇಳಿ ನಾನು ಒಟ್ಟುಗೂಡಿಸಿದ್ದ ಋಜುವಾತಿನ ವಿಷಯವನ್ನೆಲ್ಲಾ ಅವರ ಮುಂದಿಡಬೇಕೆಂದು ಹೇಳಿದರು. ಸಾಕ್ಷಿಗಳನ್ನೆಲ್ಲಾ ತಾವೇ ವಿಚಾರ ಮಾಡಿ ತೃಪ್ತಿಹೊಂದಿದರು. ಆದರೆ ದಕ್ಷಿಣ ಆಫ್ರಿಕದಲ್ಲಿ

ಬಿಳಿಯ ಪಂಚಾಯಿತರ ಬಾಯಲ್ಲಿ ಬಿಳಿಯ ಅಪರಾಧಿಯು ಕರಿಯ ಜನರ ವಿಷಯದಲ್ಲಿ ತಪ್ಪಿತಸ್ತನೆಂದು ಹೊರಡಿಸುವದು ಪ್ರಯಾಸವೆಂದು ನನಗೆ ತಿಳಿದಷ್ಟುಗೆ ಅವರಿಗೂ ತಿಳಿದಿದ್ದಿತು. "ಆದರೂ ನಾವು ಪ್ರಯತ್ನಪಟ್ಟು ನೋಡೋಣ. ಮತ್ತು ಪಂಚಾಯಿತರು ಬಿಟ್ಟುಬಿಡುವರೆಂಬ ಹೆದರಿಕೆಗೋಸ್ಕರ ಇಂತಹ ತಪ್ಪಿತಸ್ತರನ್ನು ಹಿಡಿಯದೆ ಬಿಡುವದೂ ಸರಿಯಲ್ಲ. ನಾನು ಅವರನ್ನು ದಸ್ತಗಿರಿ ಮಾಡಿಸಬೇಕು. ನಾನು ನನ್ನ ಕೈಯಲ್ಲಾದುದನ್ನೆಲ್ಲಾ ಮಾಡುತ್ತೇನೆಂದು ನಿಮಗೆ ಭರವಸೆ ಕೊಡುತ್ತೇನೆ." ಎಂದು ಹೇಳಿದರು.

ನನಗೆ ಈ ಭರವಸೆಯು ಇದ್ದೇ ಇದ್ದಿತು. ಅನೇಕ ಅಧಿಕಾರಗಳ ಮೇಲೆ ನನಗೆ ಗುಮಾನಿಯಿದ್ದಿತಾದರೂ ಅವರ ವಿಷಯವಾಗಿ ಸಾಕಾದಷ್ಟು ರುಜುವಾತಿರಲಿಲ್ಲ. ಇಬ್ಬರು ಅಧಿಕಾರಿಗಳ ತಪ್ಪಿನ ವಿಷಯದಲ್ಲಿ ನನಗೆ ಯಾವ ಸಂಶಯವೂ ಇರಲಿಲ್ಲ. ಆದುದರಿಂದ ಇವರಿಬ್ಬರ ದಸ್ತಗಿರಿಗಾಗಿ ಅಪ್ಪಣೆಯು (ವಾರಂಟ್) ಹೊರಟಿತು.

ನನ್ನ ಓಡಾಟವನ್ನು ಅವರಿವರ ಕಣ್ಣಿಗೆ ಬೀಳದಂತೆ ಇಟ್ಟಿರಲು ಎಂದಿಗೂ ಆಗುತ್ತಿರಲಿಲ್ಲ. ನಾನು ಹೆಚ್ಚುಕಡಿಮೆ ಪ್ರತಿದಿನವೂ ಪೋಲಿಸ್ ಕಮಿಷನರ ಕಚೇರಿಗೆ ಹೋಗುತ್ತಿದ್ದುದು ಎಷ್ಟೋ ಜನಕ್ಕೆ ತಿಳಿದಿದ್ದಿತು. ಆ ಇಬ್ಬರು ಅಧಿಕಾರಿಗಳಿಗೆ ತಕ್ಕಮಟ್ಟಿಗೆ ಗಟ್ಟಿಗರಾದ ಗೂಢಚಾರರಿದ್ದರು. ಅವರು ನನ್ನ ಕಚೇರಿಯಮೇಲೆ ಕಣ್ಣಿಟ್ಟುಕೊಂಡಿದ್ದು ನಾನು ಹೋಗಿಬರುವ ಸಮಾಚಾರವನ್ನು ಆ ಅಧಿಕಾರಿಗಳಿಗೆ ತಿಳಿಸುತ್ತಿದ್ದರು. ಆದರೆ ಈ ಅಧಿಕಾರಿಗಳು ಅತಿಕೇಡಿಗರಾಗಿದ್ದುದರಿಂದ ಅವರ ಬಳಿ ಹೆಚ್ಚು ಗೂಢಚಾರರು ಸೇರುವಂತಿರಲಿಲ್ಲವೆನ್ನುವ ವಿಷಯವನ್ನು ನಾನು ತಿಳಿಸಬೇಕು. ಹಿಂದೀಯರೂ ಚೀನರೂ ನನಗೆ ಸಹಾಯಮಾಡಿರದಿದ್ದರೆ ಅವರನ್ನು ದಸ್ತಗಿರಿಮಾಡುವದು ನನಗೆ ಅಸಾಧ್ಯವಾಗುತ್ತಿದ್ದಿತು.

ಈ ಅಧಿಕಾರಿಗಳಿಬ್ಬರಲ್ಲಿ ಒಬ್ಬನು ಓಡಿಹೋದನು. ಪೋಲಿಸ್ ಕಮಿಷನರು ಅವನನ್ನು ದೇಶದ ಹೊರಗಿನಿಂದ ದಸ್ತಗಿರಿ ಮಾಡುವದಕ್ಕೆ ಅಪ್ಪಣೆ ಪಡೆದು ಅವನನ್ನು ಹಿಡಿಸಿ ಟ್ರಾನ್ಸ್‌ವಾಲಿಗೆ ಕರೆತಂದರು. ಆ ಅಧಿಕಾರಿಗಳಿಬ್ಬರ ವಿಚಾರಣೆಯೂ ನಡೆಯಿತು. ಅವರ ತಪ್ಪಿಗೆ ಬಲವಾದ ರುಜುವಾತಿದ್ದರೂ ಅವರಿಬ್ಬರಲ್ಲಿ ಒಬ್ಬನು ತಪ್ಪಿಸಿಕೊಂಡು ಹೋಗಿದ್ದನೆಂಬುದು ಪಂಚಾಯಿತರಿಗೆ ತಿಳಿದಿದ್ದಿತಾದರೂ, ಅವರಿಬ್ಬರೂ ತಪ್ಪಿತಸ್ಥರಲ್ಲವೆಂದು ಪಂಚಾಯಿತರಿಂದ ಇತ್ಯರ್ಥವಾಗಿ ಅವರಿಬ್ಬರನ್ನೂ ಬಿಟ್ಟುಬಿಟ್ಟರು.

ನಾನು ಅತ್ಯಂತ ನಿರಾಶನಾದೆನು. ಪೋಲಿಸ್ ಕಮಿಷನರಿಗೂ ದುಃಖವಾಯಿತು ನನಗೆ ವಕೀಲವೃತ್ತಿಯಲ್ಲೇ ಅಸಹ್ಯ ಹುಟ್ಟಿತು. ತಪ್ಪನ್ನು ಮುಚ್ಚುವದಕ್ಕಾಗಿ ಬುದ್ಧಿಯು ಉಪಯೋಗವಾಗುತ್ತಿದ್ದುದನ್ನು ನೋಡಿ ನನಗೆ ಬುದ್ಧಿಯಲ್ಲೇ ಜುಗುಪ್ಸೆ ಹುಟ್ಟಿತು.

ಆದರೆ ಈ ಇಬ್ಬರು ಅಧಿಕಾರಿಗಳ ತಪ್ಪು ಎಷ್ಟು ಪ್ರಸಿದ್ಧವಾಗಿ ಬಿಟ್ಟಿದ್ದಿತೆಂದರೆ ಅವರನ್ನು ಬಿಡುಗಡೆಮಾಡಿದರೂ ಸರಕಾರದವರು ಅವರನ್ನು ಇಟ್ಟುಕೊಳ್ಳುವಹಾಗಿರಲಿಲ್ಲ. ಅವರನ್ನು ಕೆಲಸದಿಂದ ಓಡಿಸಿದರು. ಮತ್ತು ಏಷ್ಯಾಟಿಕ್ ಇಲಾಖೆಯು ಸ್ವಲ್ಪ ಉತ್ತಮವಾಯಿತು. ಈಗ ಭಾರತೀಯರಿಗೆ ಧೈರ್ಯವೂ ನಂಬಿಕೆಯೂ ಉಂಟಾದುವು.

ಈ ಘಟನೆಯಿಂದ ನನ್ನ ಖ್ಯಾತಿಯು ಹೆಚ್ಚಿತು. ನನ್ನ ವಕೀಲಿ ಕೆಲಸವೂ ಬೆಳೆಯಿತು. ನಮ್ಮ ಜನರು ಪ್ರತಿ ತಿಂಗಳೂ ಲಂಚಕ್ಕಾಗಿ ತೆರುತ್ತಿದ್ದ ನೂರಾರು ಪೌಂಡುಗಳಲ್ಲಿ ಹೆಚ್ಚಿನ ಭಾಗದ ಉಳಿತಾಯವಾಯಿತು. ಎಲ್ಲವನ್ನೂ ಉಳಿಸಲಾಯಿತೆಂದು ಹೇಳುವಂತಿಲ್ಲ. ಏಕೆಂದರೆ ಅಪ್ರಾಮಾಣಿಕರು ಈಗಲೂ ಲಂಚವನ್ನು ತಿನ್ನುತ್ತಿದ್ದರು. ಆದರೆ ಈಗ ಪ್ರಾಮಾಣಿಕರಿಗೆ ತಮ್ಮ ಪ್ರಾಮಾ

ಣಿಕತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಯಿತೆಂದು ಹೇಳ ಬಹುದು.

ಈ ಅಧಿಕಾರಿಗಳು ಇಷ್ಟು ಅಧಮರಾಗಿದ್ದರೂ ನನಗೆ ಅವರ ಮೇಲೆ ವ್ಯಕ್ತಿಗತರೂಪದಲ್ಲಿ ಯಾವ ಜಗಳವೂ ಇರಲಿಲ್ಲವೆಂದು ಹೇಳಬಲ್ಲೆನು. ಅವರಿಗೂ ಇದು ಗೊತ್ತಿದ್ದಿತು. ತಮ್ಮ ದುರ್ದೆಸೆಯಲ್ಲಿ ಅವರು ನನ್ನ ಬಳಿಗೆ ಬಂದಾಗ ನಾನು ಅವರಿಗೆ ಸಹಾಯವನ್ನೂ ಮಾಡಿದೆನು. ನಾನು ವಿರೋಧಿಸದಿದ್ದರೆ ಜೋಹಾನ್ಸ್ ಬರ್ಗಿನ ಪೌರಸಭೆಯಲ್ಲಿ ಅವರಿಗೆ ಚಾಕರಿ ದೊರೆಯುವ ಸಂಭವವಿದ್ದಿತು. ಅವರ ಮಿತ್ರರೊಬ್ಬರು ನನ್ನನ್ನು ಕಾಣಲು ನಾನು ವಿರೋಧಿಸುವದಿಲ್ಲವೆಂದು ಒಪ್ಪಿದೆನು. ಅವರಿಗೆ ನೌಕರಿಯು ದೊರೆಯಿತು.

ನನ್ನ ಮನೋವೃತ್ತಿಯು ಹೀಗಿದ್ದುದರಿಂದ ಕಾರ್ಯವಶಾತ್ ನನ್ನೊಡನೆ ಸಂಪರ್ಕಕ್ಕೆ ಬರುವ ಅಧಿಕಾರಿಗಳೆಲ್ಲರೂ ನಿಸ್ಸಂಕೋಚವಾಗಿ ವರ್ತಿಸುತ್ತಿದ್ದರು ಮತ್ತು ನಾನು ಅವರ ಇಲಾಖೆಯೊಡನೆ ಅನೇಕ ಸಲ ಹೊಡೆದಾಡಬೇಕಾಗಿದ್ದರೂ, ಬಿರುಸಾದ ಮಾತನ್ನು ಆಡಬೇಕಾಗಿದ್ದಿತಾದರೂ, ಅವರು ನನ್ನೊಡನೆ ಮಿತ್ರಸಂಬಂಧವನ್ನೇ ಇಟ್ಟಿದ್ದರು.ಈ ರೀತಿಯ ವರ್ತನೆಯು ನನ್ನ ಸ್ವಭಾವದಲ್ಲಿಯೇ ಇದ್ದಿತೆಂದು ಆಗ ನನಗೆ ಸರಿಯಾಗಿ ಗೊತ್ತಿರಲಿಲ್ಲ. ಇದು ಸತ್ಯಾಗ್ರಹದ ಮುಖ್ಯವಾದ ಅಂಶಗಳಲ್ಲಿ ಒಂದೆಂದೂ ಇದು ಅಹಿಂಸೆಯ ಅಂಗವೆಂದೂ ನನಗೆ ಆಮೇಲೆ ತಿಳಿಯಿತು.

ಮನುಷ್ಯ ಮತ್ತು ಅವನ ಕಾರ್ಯ, ಇವೆರಡೂ ಬೇರೆಯಾದ ವಸ್ತುಗಳಾಗಿವೆ. ಒಳ್ಳೆಯ ಕೆಲಸಕ್ಕೆ ಆದರವೂ ಕೆಟ್ಟಕೆಲಸಕ್ಕೆ ತಿರಸ್ಕಾರವೂ ದೊರಕಲೇಬೇಕು. ಆದರೆ ಈ ಕೆಲಸವನ್ನು ಮಾಡುವವನ ಕೆಲಸವು ಒಳ್ಳೆಯದಾಗಿರಲಿ ಕೆಟ್ಟದಾಗಿರಲಿ ಅವನು ಯಾವಾಗಲೂ ಸಂದರ್ಭಕ್ಕೆ ತಕ್ಕಂತೆ ಗೌರವವನ್ನಾಗಲಿ ಕನಿಕರವನ್ನಾಗಲಿ ಪಡೆಯಲರ್ಹನಾಗಿರುತ್ತಾನೆ. 'ಪಾಪವನ್ನು ದ್ವೇಷಿಸು,

ಪಾಪಿಯನ್ನಲ್ಲ' ಎಂಬ ತತ್ವವನ್ನು ತಿಳಿದುಕೊಳ್ಳುವದೇನೋ ಸುಲಭ, ಆದರೆ ಅದನ್ನು ನಡೆಸುವವರು ಅಪೂರ್ವ. ಇದಕ್ಕಾಗಿಯೇ ಪ್ರಪಂಚದಲ್ಲಿ ದ್ವೇಷದ ವಿಷವು ಹರಡುವದು.

ಸತ್ಯವನ್ನರಸುವದಕ್ಕೆ ಈ ಅಹಿಂಸೆಯೇ ಮೂಲವಾಗಿದೆ. ಅಹಿಂಸೆಯ ಆಧಾರದ ಮೇಲಲ್ಲದೆ ಸತ್ಯಾನ್ವೇಷಣವು ಸಾಧ್ಯವಲ್ಲ ವೆಂಬುದನ್ನು ನಾನು ಪ್ರತಿದಿನವೂ ಮನಗಾಣುತ್ತಿದ್ದೇನೆ. ನಮಗೆ ದುಷ್ಟವಾಗಿ ಕಾಣುವ ಕ್ರಮವನ್ನು ಅಥವಾ ವ್ಯವಸ್ಥೆಯನ್ನು ಇದಿರಿಸುವದು ಉಚಿತವೇ ಸರಿ. ಆದರೆ ಆ ಕ್ರಮದ ಅಥವಾ ವ್ಯವಸ್ಥೆಯ ಕರ್ತನನ್ನು ಇದಿರಿಸಿದರೆ ತನ್ನನ್ನೇ ಇದಿರಿಸಿಕೊಂಡಂ ತಾಗುತ್ತದೆ. ಏಕೆಂದರೆ ನಾವೆಲ್ಲರೂ ಒಂದೇ ಅಚ್ಚಿನಲ್ಲಿ ಅಚ್ಚಾ ಗಿದ್ದೇವೆ. ಅದೇ ಸೃಷ್ಟಿಕರ್ತನ ಮಕ್ಕಳಾಗಿರುತ್ತೇವೆ. ಆದುದ ರಿಂದ ನಮ್ಮಲ್ಲಿರುವ ದೈವಿಕ ಶಕ್ತಿಯು ಅನಂತವಾಗಿದೆ. ಯಾರೊಬ್ಬ ಮನುಷ್ಯನನ್ನು ತುಚ್ಛೀಕರಿಸುವದೆಂದರೆ ಆ ಅನಂತದೈವಿ ಕಶಕ್ತಿಯನ್ನು ತುಚ್ಛೀಕರಿಸಿದಂತಾಗುತ್ತದೆ. ಆದುದರಿಂದ ಆ ಒಬ್ಬನಿಗೆ ಕೆಡಕಾಗುವದರೊಡನೆ ಪ್ರಪಂಚಕ್ಕೇ ಕೆಡಕಾಗುತ್ತದೆ.



೧೮

# ಪವಿತ್ರಸ್ಮರಣೆ ಮತ್ತು ಪ್ರಾಯಶ್ಚಿತ್ತ

ನನ್ನ ಜೀವನದಲ್ಲಿನ ನಾನಾಬಗೆಯ ಘಟನೆಗಳಿಂದ ನನಗೆ ಅನೇಕ ಮತಗಳ ಮತ್ತು ಅನೇಕ ಜಾತಿಗಳ ಜನರೊಡನೆ ಗಾಢ ಸಂಬಂಧವುಂಟಾಗಿದೆ. ಈ ಎಲ್ಲರೊಡನೆ ನನಗುಂಟಾಗಿರುವ ಅನು ಭವದಿಂದ ನಾನು ಹೀಗೆ ಧೈರ್ಯವಾಗಿ ಹೇಳಬಲ್ಲೆನು : ನನ್ನವರು, ಇತರರು, ಸ್ವದೇಶದವರು, ಪರದೇಶದವರು, ಕರಿಯ ಜನರು, ಬಿಳಿಯಜನರು, ಹಿಂದುಗಳು, ಅನ್ಯಭಾರತೀಯರು (ಇವರು ಮುಸಲ್ಮಾನರಾಗಲಿ, ಪಾರಸಿಗಳಾಗಲಿ, ಈಸಾಯಿಗಳಾಗಲಿ, ಯಹೂದ್ಯರಾಗಲಿ) ಎಂಬ ಭೇದಭಾವವನ್ನು ನಾನು ಎಂದೂ ಇಟ್ಟ ವನಲ್ಲ. ಈ ರೀತಿಯ ಭೇದವನ್ನೆಣಿಸುವದಕ್ಕೆ ನನ್ನ ಸ್ವಭಾವಕ್ಕೆ ಬಾರಲೇ ಬಾರದೆಂದು ಹೇಳಬಲ್ಲೆನು. ಆದರೆ ಇದೇನೂ ನನ್ನ ವಿಶೇಷ ಗುಣವೆಂದು ಹೇಳಲಾರೆನು. ಏಕೆಂದರೆ ಇದು ನನ್ನ ಪ್ರಯತ್ನಕ್ಕೆ ಫಲವಾಗಿ ಉಂಟಾದುದಕ್ಕಿಂತ ಹೆಚ್ಚಾಗಿ ನನ್ನ ಪ್ರಕೃತಿ ಯಲ್ಲೇ ಬೇರೂರಿದೆ. ಆದರೆ ಅಹಿಂಸೆ, ಬ್ರಹ್ಮಚರ್ಯ, ಅಪರಿಗ್ರಹ ಇವೇ ಮುಂತಾದ ಪ್ರಧಾನ ಗುಣಗಳ ವಿಷಯದಲ್ಲಿಯಾದರೋ ನಾನು ಸದಾ ಅವುಗಳ ವಿಕಾಸಕ್ಕಾಗಿ ಪ್ರಯತ್ನಪಡುತ್ತಿರುವದು ನನಗೆ ಚೆನ್ನಾಗಿ ಗೊತ್ತು.

ನಾನು ಡರಬನಿನಲ್ಲಿ ವಕೀಲಿ ಕೆಲಸ ಮಾಡುತ್ತಿದ್ದಾಗ ನನ್ನ ಗುಮಾಸ್ತರು ಅನೇಕವೇಳೆ ನನ್ನೊಡನೆಯೇ ವಾಸಿಸುತ್ತಿದ್ದರು. ಅವ ರಲ್ಲಿ ಹಿಂದುಗಳೂ ಈಸಾಯಿಗಳೂ, ಅಥವಾ ಪ್ರಾಂತ್ಯದ ಪ್ರಕಾರ ಹೇಳಬೇಕೆಂದರೆ, ಗುಜರಾತಿನವರೂ ತಮಿಳುನಾಡಿನವರೂ ಇರು ತ್ತಿದ್ದರು. ಇವರನ್ನು ನನ್ನ ಬಂಧುಜನರೆಂದೆಣಿಸಿದ್ದೇನೇ ಹೊರತು ಇನ್ನಾವರೀತಿಯಲ್ಲೂ ಕಂಡಂತೆ ನನಗೆ ನೆನಪಿಲ್ಲ. ನಾನು ಇವ

ರನ್ನು ನನ್ನ ಕುಟುಂಬಕ್ಕೆ ಸೇರಿದವರೆಂದೇ ಎಣಿಸಿದ್ದೆನು. ನನ್ನ ಹೆಂಡತಿಯು ಒಂದುವೇಳೆ ಹೀಗೆ ಕಾಣುವದಕ್ಕೆ ಅಡ್ಡಬಂದರೆ ನಾನು ಆಕೆಯೊಡನೆ ಜಗಳವಾಡುತ್ತಿದ್ದೆನು. ಈ ಗುಮಾಸ್ತೆಗಳಲ್ಲಿ ಒಬ್ಬರು ಈಸಾಯಿಗಳಾಗಿದ್ದರು. ಇವರ ತಂದೆತಾಯಿಗಳು ಪಂಚಮರು.

ನಾನಿದ್ದ ಮನೆಯು ಪಾಶ್ಚಾತ್ಯ ರೀತಿಯಲ್ಲಿ ಕಟ್ಟಲ್ಪಟ್ಟಿದ್ದಿತು. ಅದರ ಕೋಣೆಗಳಲ್ಲಿ ಜಲವಿಸರ್ಜನೆಗಾಗಿ ಮೋರಿಗಳಿರಲಿಲ್ಲ. ಅವು ಇರಕೂಡದೆಂದೇ ನನ್ನ ಮತ. ಆದುದರಿಂದ ಪ್ರತಿಯೊಂದು ಕೋಣೆಯಲ್ಲೂ ಇದಕ್ಕಾಗಿ ಒಂದು ಮಡಿಕೆಯು ಇರುತ್ತಿದ್ದಿತು. ಜವಾನನ ಅಥವಾ ಝಾಡಮಾಲಿಯ ಕೈಲಿ ಇವನ್ನು ಶುಚಿಮಾಡಿಸುವದರ ಬದಲು ನಾವು ಗಂಡಹೆಂಡತಿಯರೇ ಈ ಕೆಲಸವನ್ನು ಮಾಡುತ್ತಿದೆವು. ಅದು ತಮ್ಮ ಮನೆಯೇ ಎಂದು ತಿಳಿದುಕೊಂಡಿದ್ದುದರಿಂದ ಗುಮಾಸ್ತರೆಲ್ಲರೂ ಸ್ವಾಭಾವಿಕವಾಗಿ ತಮ್ಮ ಮಡಿಕೆಗಳನ್ನು ತಾವೇ ಶುಚಿಮಾಡಿಕೊಳ್ಳುತ್ತಿದ್ದರು. ಆದರೆ ಈ ಈಸಾಯಿ ಗುಮಾಸ್ತರು ಹೊಸಬರಾಗಿದ್ದುದರಿಂದ ಅವರ ಸೌಕರ್ಯಗಳನ್ನು ನೋಡಿಕೊಳ್ಳುವದು ನಮ್ಮ ಕರ್ತವ್ಯವಾಗಿದ್ದಿತು. ಇತರ ಮಡಿಕೆಗಳನ್ನೇನೋ ಕಸ್ತೂರಿಬಾಯಿಯು ನೋಡಿಕೊಳ್ಳುತ್ತಿದ್ದಳು. ಆದರೆ ಪಂಚಮಕುಲದಲ್ಲಿ ಹುಟ್ಟಿದ ಈತನು ಉಪಯೋಗಿಸಿದ ಮಡಿಕೆಯನ್ನು ಶುಚಿಮಾಡುವದೆಂದರೆ ಆಕೆಯ ಸಹನೆಯ ಮಿತಿಯನ್ನು ದಾಟಿದುದಾಗಿದ್ದಿತು. ಇದರಿಂದ ನಮ್ಮಿಬ್ಬರಿಗೂ ಕಲಹವುಂಟಾಯಿತು. ನಾನು ಆ ಮಡಿಕೆಯನ್ನು ತೊಳೆಯುವದನ್ನು ಆಕೆಯು ಸಹಿಸಲಿಲ್ಲ. ತಾನು ತೊಳೆಯುವದೂ ಆಕೆಗೆ ಸರಿಬೀಳಲಿಲ್ಲ. ಕೆಂಪೇರಿದ ಕಣ್ಣುಗಳಲ್ಲಿ ಮುತ್ತಿನ ಹನಿಗಳನ್ನು ಸುರಿಸುತ್ತಾ ಕೈಯಲ್ಲಿ ಮಡಿಕೆಯನ್ನು ಹಿಡಿದುಕೊಂಡು ಏಣಿಯಿಂದ ಇಳಿಯುತ್ತಿರುವ ಕಸ್ತೂರಿ ಬಾಯಿಯ ಚಿತ್ರವು ಈಗಕೂಡ ನನ್ನ ಕಣ್ಣಿನಮುಂದೆ ನಿಲ್ಲುತ್ತದೆ. ಆದರೆ ನಾನು ಆಕೆಯಲ್ಲಿಟ್ಟಿದ್ದ ಪ್ರೇಮವು ನಿಷ್ಠುರತೆಯಿಂದೊಡಗೂಡಿದ್ದಿತು. ನಾನು ಆಕೆಯ

ಶಿಕ್ಷಕನೆಂದು ತಿಳಿದುಕೊಂಡಿದ್ದೆನು. ನನಗೆ ಆಕೆಯಲ್ಲಿದ್ದ ಅಂಥ ಪ್ರೇಮದಿಂದ ಆಕೆಯನ್ನು ಬಹಳವಾಗಿ ಗೋಳಾಡಿಸುತ್ತಿದ್ದೆನು.

ಆಕೆಯು ಮಡಿಕೆಯನ್ನು ಹೊರುವದರಷ್ಟರಿಂದಲೇ ನನಗೆ ತೃಪ್ತಿಯುಂಟಾಗಲಿಲ್ಲ. ಆಕೆಯು ನಗುನಗುತ್ತಾ ಆ ಕೆಲಸವನ್ನು ಮಾಡಿದರೇ ನನಗೆ ಸಮಾಧಾನ. ಆದುದರಿಂದ ನಾನು ನನ್ನ ದನಿಯನ್ನು ಏರಿಸಿ " ಈ ಆಟವೆಲ್ಲಾ ನನ್ನಮನೆಯಲ್ಲಿ ನಡೆಯುವದಿಲ್ಲ. " ಎಂದು ಹೇಳಿದೆನು.

ಈ ಮಾತುಗಳು ಆಕೆಯ ಹೃದಯವನ್ನು ಬಾಣದಂತೆ ಇರಿದುವು.

" ನಿಮ್ಮ ಮನೆಯನ್ನು ನೀವೇ ನೋಡಿಕೊಳ್ಳಿ ! ನಾನು ಇಲ್ಲಿಂದ ಹೊರಟೆ. " ಎಂದು ಆಕೆಯು ಉತ್ತರಕೊಟ್ಟಳು.

ನಾನು ಸ್ಮೃತಿಗೆಟ್ಟಿದ್ದೆನು. ನನ್ನ ಹೃದಯದಲ್ಲಿ ದಯೆಯಲವಲೇಶವೂ ಉಳಿಯದೆ ಬತ್ತಿಹೋಯಿತು. ನಾನು ಅಬಲೆಯಾದ ಆಕೆಯ ಕೈ ಹಿಡಿದೆಳೆದುಕೊಂಡು ಏಣಿಯ ಇದಿರಿಗಿದ್ದ ಬಾಗಿಲ ಬಳಿಗೆ ಹೋಗಿ ಆಕೆಯನ್ನು ಹೊರಕ್ಕೆ ನೂಕಲೋಸುಗ ಬಾಗಿಲನ್ನು ತೆಗೆಯತೊಡಗಿದೆನು.

ಆಕೆಯು ಕಣ್ಣುಗಳಿಂದ ನೀರನ್ನು ಪ್ರವಾಹವಾಗಿ ಸುರಿಸುತ್ತಾ " ನಿಮಗೆ ನಾಚಿಕೆ ಮರ್ಯಾದೆ ಎನ್ನುವದು ಬೇಡಲೇ ಬೇಡವೆ ? ನೀವು ಇಷ್ಟು ದೂರ ಮೈಮರೆಯಬೇಕೆ ? ನನ್ನನ್ನು ಹೊರದೂಡಿದರೆ ನಾನೆಲ್ಲಿಗೆ ಹೋಗಲಿ ? ನಾನು ಹೋಗಿ ಸೇರಿಕೊಳ್ಳುವದಕ್ಕೆ ಇಲ್ಲಿ ನಮ್ಮ ತಾಯಿತಂದೆಗಳ ಮನೆಯಿದೆಯೆ ? ನಾನು ನಿಮ್ಮ ಹೆಂಡತಿಯಾಗಿರುವದರಿಂದ ನಿಮ್ಮ ಕೈಲಿ ಬೈಗಳನ್ನೂ ಹೊಡೆತವನ್ನೂ ತಿನ್ನಬೇಕಾಗಿ ಬಂದಿದೆ. ದೇವರಾಣೆ ! ಸ್ವಲ್ಪ ಮಾನಮರ್ಯಾದೆಯನ್ನಿಟ್ಟುಕೊಂಡು ಬಾಗಿಲನ್ನು ಮುಂದಕ್ಕೆ

ಹಾಕಿ! ಯಾರಾದರೂ ನೋಡಿದರೆ ನಮ್ಮಿಬ್ಬರಲ್ಲಿ ಯಾರಿಗೂ ಮಾನ ಬರುವದಿಲ್ಲ''. ಎಂದು ಹೇಳಿದಳು.

ನನಗೆ ಇದನ್ನು ಕೇಳಿ ನಾಚಿಕೆಯಾಯಿತು. ಆದರೂ ನನ್ನ ಮುಖಮುದ್ರೆಯನ್ನು ಬದಲಾಯಿಸದೆ ಬಾಗಿಲನ್ನು ಮುಚ್ಚಿದೆನು. ನನ್ನ ಹೆಂಡತಿಯು ನನ್ನನ್ನು ಬಿಟ್ಟು ಹೋಗುವಹಾಗಿರಲಿಲ್ಲವಾದರೆ ನಾನೂ ಆಕೆಯನ್ನು ಬಿಟ್ಟು ಇರುಲಾಗುತ್ತಿರಲಿಲ್ಲ. ನಮ್ಮಿಬ್ಬರಿಗೂ ಎಷ್ಟೋ ಸಲ ಜಗಳವಾಗಿರುತ್ತದೆ, ಆದರೆ ಪ್ರತಿಯೊಂದು ಸಲವೂ ಶಾಂತಿಯಲ್ಲಿಯೇ ಕೊನೆಗಂಡಿದೆ. ತನ್ನ ಎಣೆಯಿಲ್ಲದ ತಾಳ್ಮೆಯ ಬಲದಿಂದ ನನ್ನ ಹೆಂಡತಿಯು ಸದಾ ಜಯಶೀಲಳಾಗಿದ್ದಾಳೆ.

ಈ ಘಟನೆಯು ನಡೆದ ಕಾಲದಲ್ಲಿನ ನನ್ನ ಮನೋವೃತ್ತಿಯಿಂದ ನಾನು ಬಹು ದೂರ ಸಾಗಿಬಂದಿರುವೆನಾದುದರಿಂದ ಈಗ ನಾನು ಇದನ್ನು ತಕ್ಕಮಟ್ಟಿನ ತಟಸ್ಥತೆಯಿಂದ ವರ್ಣಿಸಬಲ್ಲೆನು. ಈಗ ನಾನು ಮೋಹಾಂಧನಾದ ಪತಿಯಾಗಿಯೂ ಇಲ್ಲ, ನಾನು ನನ್ನ ಹೆಂಡತಿಯ ಶಿಕ್ಷಕನೆಂದು ಎಣಿಸಿಕೊಂಡಿರುವದೂ ಇಲ್ಲ. ನಾನು ಆಕೆಯ ವಿಷಯದಲ್ಲಿ ಹಿಂದೆ ವರ್ತಿಸುತ್ತಿದ್ದಂತೆಯೇ ನನ್ನ ಹೆಂಡತಿಯು ಆಕೆಗೆ ಇಷ್ಟ ಬಂದರೆ ಈಗ ನನ್ನ ವಿಷಯದಲ್ಲಿ ಪರುಷವಾಗಿ ವರ್ತಿಸಬಹುದು. ಇಂದು ನಾವು ಒಬ್ಬರನ್ನೊಬ್ಬರು ಬಹು ಕಾಲ ಪರೀಕ್ಷಿಸಿದ ಮಿತ್ರರಾಗಿದ್ದೇವೆ. ಈಗೇನೂ ನಾವು ಒಬ್ಬರನ್ನೊಬ್ಬರು ಭೋಗ್ಯವಸ್ತುವೆಂದು ಭಾವಿಸಿಲ್ಲ. ನನ್ನ ಕಾಹಿಲೆಗಳಲ್ಲೆಲ್ಲಾ ಆಕೆಯು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ನನ್ನ ಶುಶ್ರೂಷೆಯನ್ನು ಮಾಡಿದ್ದಾಳೆ.

ಈ ಘಟನೆಯು ನಡೆದಾಗ, ಎಂದರೆ ೧೮೯೮ರಲ್ಲಿ, ನನಗೆ ಬ್ರಹ್ಮಚರ್ಯತತ್ವದ ಕಲ್ಪನೆಯೇ ಇರಲಿಲ್ಲ. ಆ ಕಾಲದಲ್ಲಿ ನಾನು ಹೆಂಡತಿಯು ಗಂಡನ ಸಹಧರ್ಮಿಣಿ, ಸಹಚಾರಿಣಿ, ಸುಖದುಃಖ

ಭಾಗಿನಿ ಎನ್ನುವದಕ್ಕಿಂತ ಹೆಚ್ಚಾಗಿ ಹೆಂಡತಿಯು ಗಂಡನ ವಿಷಯಭೋಗಕ್ಕೆ ಭಾಜನಳೆಂದೂ ಅವಳು ಗಂಡನ ಆಜ್ಞೆಯು ಏನೇ ಆಗಿರಲಿ ಅದನ್ನು ಪಾಲಿಸಲೋಸುಗವೇ ನಿರ್ಮಿತಳಾಗಿರುವಳೆಂದೂ ತಿಳಿದುಕೊಂಡು ವರ್ತಿಸುತ್ತಿದ್ದೆನು.

ಈ ಭಾವನೆಗಳೆಲ್ಲಾ ಗಂಭೀರವಾದ ಪರಿವರ್ತನೆಯನ್ನೈದಿದುದು ೧೯೦೦ರಲ್ಲಿ. ೧೯೦೬ರ ಹೊತ್ತಿಗೆ ಅವು ಪರಿಪಾಕಕ್ಕೆ ಬಂದುವು. ಆದರೆ ಈ ವಿಷಯವನ್ನು ಸರಿಯಾದ ಸ್ಥಾನದಲ್ಲಿ ತಿಳಿಸುತ್ತೇನೆ. ಈಗ ಇಷ್ಟು ಮಾತ್ರ ಹೇಳಿದರೆ ಸಾಕು—ನನ್ನಲ್ಲಿ ವಿಷಯಸುಖದ ಆಸೆಯು ಕಡಿಮೆಯಾಗುತ್ತಾ ಬಂದಹಾಗೆಲ್ಲ ನನ್ನ ಕುಟುಂಬದ ಜೀವನವು ಹೆಚ್ಚು ಹೆಚ್ಚಾಗಿ ಶಾಂತವೂ ಮಧುರವೂ ಸುಖಪೂರಿತವೂ ಆಗುತ್ತಾ ಬಂದಿದೆ.

ಈ ಪೂರ್ವಸ್ಮರಣೆಯ ವರ್ಣನೆಯಿಂದ ನಾವಿಬ್ಬರೂ ಆದರ್ಶದಂಪತಿಗಳೆಂದೂ ನನ್ನ ಹೆಂಡತಿಯಲ್ಲಿ ದೋಷಲೇಶವೂ ಇಲ್ಲವೆಂದೂ ಅಥವಾ ನಮ್ಮಿಬ್ಬರ ಆದರ್ಶಗಳೂ ಒಂದೇ ಎಂದೂ ಯಾರೂ ಭಾವಿಸದಿರಲಿ. ನನ್ನ ಧ್ಯೇಯಗಳನ್ನುಳಿದು ತನ್ನವೇ ಬೇರೆ ಆದರ್ಶಗಳಿವೆಯೋ ಇಲ್ಲವೋ ಎಂಬುದು ಪ್ರಾಯಶಃ ಕಸ್ತೂರಿಬಾಯಿಗೇ ಗೊತ್ತಿಲ್ಲ. ಇಂದು ಕೂಡ ನನ್ನ ಕಾರ್ಯಗಳಲ್ಲಿ ಅನೇಕವು ಆಕೆಯ ಒಪ್ಪಿಗೆಗೆ ಬರದಿರಬಹುದು. ಈ ವಿಷಯವಾಗಿ ನಾವು ಎಂದೂ ಚರ್ಚಿಸುವದಿಲ್ಲ. ಚರ್ಚಿಸುವದರಿಂದ ಯಾವ ಪ್ರಯೋಜನವೂ ಇರುವಂತೆ ನನಗೆ ಕಾಣುವದಿಲ್ಲ. ಏಕೆಂದರೆ ಆಕೆಯ ತಂದೆತಾಯಿಗಳು ಆಕೆಗೆ ಶಿಕ್ಷಣವನ್ನು ಕೊಡಲಿಲ್ಲ. ನಾನೂ ಉಚಿತವಾದ ಕಾಲದಲ್ಲಿ ಆಕೆಗೆ ಶಿಕ್ಷಣವನ್ನು ಕೊಡಲಿಲ್ಲ. ಆದರೆ ಸಾಮಾನ್ಯವಾಗಿ ಎಲ್ಲಾ ಹಿಂದೂ ಪತ್ನಿಯರಲ್ಲೂ ಹೆಚ್ಚು ಕಡಿಮೆಯಾಗಿ ಕಂಡುಬರುವ ಒಂದು ದೊಡ್ಡ ಗುಣವು ಆಕೆಯಲ್ಲಿ ಹೆಚ್ಚು ಪರಿಮಾಣದಲ್ಲಿದೆ. ಅದೇನೆಂದರೆ—ಇಚ್ಛಾಪೂರ್ವಕವಾಗಲಿ, ಅನಿಚ್ಛಾಪೂರ್ವಕವಾಗಲಿ ಆಕೆಯು ನನ್ನ ಹೆಜ್ಜೆಯನ್ನು ಅನು

ಸರಿಸುವದೇ ತನ್ನ ಜೀವನದ ಸಾರ್ಥಕತೆಯೆಂದು ಭಾವಿಸಿದ್ದಾಳೆ, ಮತ್ತು ಸಂಯಮದ ಜೀವನವನ್ನು ನಡೆಸಬೇಕೆಂಬ ನನ್ನ ಪ್ರಯತ್ನಗಳಿಗೆ ಎಂದೂ ಅಡ್ಡಬಂದಿಲ್ಲ. ಆದುದರಿಂದ ನಮ್ಮಿಬ್ಬರ ಬುದ್ಧಿಶಕ್ತಿಯಲ್ಲಿ ಹೆಚ್ಚಾದ ಅಂತರವಿದ್ದರೂ ನಮ್ಮ ಜೀವನವು ತೃಪ್ತಿಯ, ಸಂತೋಷದ, ಸುಖದ ಮತ್ತು ಊರ್ಧ್ವಗಾಮಿಯಾದ ಜೀವನವೆಂದು ನನಗೆ ಯಾವಾಗಲೂ ತೋರಿಬಂದಿದೆ.

---

೧೧

# ಐರೋಪ್ಯರೊಡನೆ ಗಾಢವಾದ ಪರಿಚಯ

ಈ ಪ್ರಕರಣವನ್ನು ಬರೆಯುತ್ತಾ, ಈ ಕಥೆಯು ವಾರ ವಾರಕ್ಕೂ ಹೇಗೆ ಬರೆಯಲ್ಪಡುತ್ತದೆ ಎಂಬುದನ್ನು ವಾಚಕರಿಗೆ ವಿವರಿಸಬೇಕಾದ ಪ್ರಸಂಗವೊದಗಿದೆ.

ಈ ಕಥೆಯನ್ನು ಮೊದಲುಮಾಡಿದಾಗ ನಾನು ರಚನಾಕ್ರಮವನ್ನು ನಿರ್ಧರಿಸಿರಲಿಲ್ಲ. ಯಾವ ದಿನಚರಿಯ ಪುಸ್ತಕವನ್ನಾಗಲಿ ಅಥವಾ ಬೇರೆ ಕಾಗದಪತ್ರಗಳನ್ನಾಗಲಿ ಮುಂದಿಟ್ಟುಕೊಂಡೂ ಈ ಪ್ರಕರಣಗಳನ್ನು ಬರೆದಿಲ್ಲ. ಬರೆಯುವ ಸಮಯದಲ್ಲಿಅಂತರಾತ್ಮನು ಹೇಗೆ ಪ್ರೇರಿಸುತ್ತಾನೋ ಹಾಗೆ ಬರೆಯುತ್ತೇನೆ. ನಾನು ಮಾಡುವ ಕಾರ್ಯಗಳೆಲ್ಲವೂ ನನ್ನ ಮನಸ್ಸಿನಲ್ಲಿ ಪ್ರಯತ್ನತಃ ಮೂಡುವ ಭಾವಗಳೆಲ್ಲವೂ ಆ ಅಂತರಾತ್ಮನ ಪ್ರೇರಣೆಯಿಂದಲೇ ಸಂಭವಿಸುತ್ತವೆಂದು ನಾನು ನಿಶ್ಚಯಪೂರ್ವಕವಾಗಿ ತಿಳಿದಿದ್ದೇನೆಂದು ಹೇಳಲಾರೆನು. ಆದರೆ ನಾನು ನನ್ನ ಜೀವನದಲ್ಲಿ ನಡೆಸಿರುವ ಬಹು ದೊಡ್ಡ ಹಾಗೆಯೇ ಅತಿ ಸಣ್ಣ ಕಾರ್ಯಗಳನ್ನು ವಿಮರ್ಶಿಸಿ ನೋಡಿದರೆ ಅವೆಲ್ಲವೂ ಅಂತರಾತ್ಮನಿಂದ ಪ್ರೇರಿತವಾದವೆಂದು ಹೇಳುವದು ಅನುಚಿತವಾಗಲಾರದು.

ನಾನು ಆ ಪರಮಾತ್ಮನನ್ನು ಕಂಡಿಲ್ಲ, ತಿಳಿದೂ ಇಲ್ಲ. ಪ್ರಪಂಚಕ್ಕೆ ಆತನಲ್ಲಿರುವ ನಂಬಿಕೆಯನ್ನು ನನ್ನದಾಗಿ ಮಾಡಿಕೊಂಡಿದ್ದೇನೆ. ನನ್ನ ಈ ನಂಬಿಕೆಯು ಎಂದಿಗೂ ಅಳಿಸಿಹೋಗುವದಿಲ್ಲವಾದುದರಿಂದ ನಾನು ಈ ನಂಬಿಕೆಯೇ ಅನುಭವಕ್ಕೆ ಸಮಾನವೆಂದು ಎಣಿಸಿದ್ದೇನೆ. ಆದರೂ ನಂಬಿಕೆಯನ್ನೇ ಅನುಭವವೆಂದು ಹೇಳುವದರಿಂದ ಸತ್ಯಕ್ಕೆ ಭಂಗ ಬರುವದೆಂದು ಹೇಳಬಹುದಾದುದರಿಂದ ನನಗೆ ಈಶ್ವರನಲ್ಲಿರುವ ನಂಬಿಕೆಯನ್ನು ವರ್ಣಿಸತಕ್ಕ

ಶಬ್ದವೇ ನನಗೆ ತೋರುವದಿಲ್ಲವೆಂದು ಹೇಳಿದರೆ ಹೆಚ್ಚು ಉಚಿತ ವಾದೀತು.

ಅಂತರಾತ್ಮನ ಪ್ರೇರಣೆಯಂತೆ ಈ ಕಥೆಯನ್ನು ನಾನು ಬರೆಯುತ್ತಿದ್ದೇನೆ ಎಂದು ನಾನೇಕೆ ನಂಬಿದ್ದೇನೆಂಬುದು ಈಗ ಪ್ರಾಯಶಃ ಸ್ವಲ್ಪ ಸುಲಭವಾಗಿ ತಿಳಿಯಬಹುದು.

ನಾನು ಹಿಂದಿನ ಪ್ರಕರಣವನ್ನು ಮೊದಲುಮಾಡಿದಾಗ ಅದಕ್ಕೆ ಈ ಅಧ್ಯಾಯಕ್ಕೆ ಕೊಟ್ಟಿರುವ ಹೆಸರನ್ನೇ ಕೊಟ್ಟಿದ್ದೆನು ಆದರೆ ಅದನ್ನು ಬರೆಯುವದಕ್ಕೆ ಮುಂಚೆ ಪೀಠಿಕೆಯ ರೂಪವಾಗಿ ಹಿಂದಿನ ಅಧ್ಯಾಯದಲ್ಲಿ ವಿವರಿಸಿರುವ ಪವಿತ್ರಸ್ಮರಣೆಯನ್ನು ಬರೆಯ ಬೇಕೆಂದು ನನಗೆ ಕಂಡುಬಂದಿತು. ಆದುದರಿಂದ ಅದನ್ನು ಬರೆದು ಶೀರ್ಷಕವನ್ನು ಬದಲಾಯಿಸಿದೆನು. ಈಗ ಈ ಪ್ರಕರಣವನ್ನು ಆರಂಭಿಸುವಾಗ ಕೂಡ ಹೊಸ ಧರ್ಮಸಂಕಟವೊಂದು ಬಂದೊದಗಿದೆ. ಆಂಗ್ಲ ಮಿತ್ರರ ವಿಚಾರವಾಗಿ ಏನನ್ನು ತಿಳಿಸಬೇಕು, ಏನನ್ನು ಬಿಡ ಬೇಕು ಎಂಬುದು ಒಂದು ದೊಡ್ಡ ಪ್ರಶ್ನೆಯಾಗಿದೆ. ಪ್ರಸ್ತುತವಾದ ವಿಷಯಗಳನ್ನು ಬಿಟ್ಟುಬಿಟ್ಟರೆ ಸತ್ಯದ ಕಾಂತಿಗೆ ಕುಂದುಂಟಾಗುತ್ತದೆ. ಆದರೆ ಈ ಕಥೆಯನ್ನು ಬರೆಯುವದೇ ಪ್ರಸ್ತುತವಹುದೋ ಅಲ್ಲವೋ ಎಂಬ ಸಂಶಯವೊದಗಿರುವಾಗ ಪ್ರಸ್ತುತವಿಷಯವನ್ನು ಒಡನೆಯೇ ನಿರ್ಧಾರಮಾಡುವದು ಬಹಳ ಕಷ್ಟ.

ಚರಿತ್ರೆಯ ದೃಷ್ಟಿಯಿಂದ ಆತ್ಮಕಥೆಗಳೆಲ್ಲಾ ಅಸಂಪೂರ್ಣ ವಾದವು ಎಂದು ನಾನು ಬಹುಕಾಲದ ಹಿಂದೆ ಓದಿದುದು ಇಂದು ನನಗೆ ಇನ್ನೂ ಹೆಚ್ಚಾಗಿ ವಿಶದವಾಗಿದೆ. ನನಗೆ ನೆನಪಿರುವದ ನ್ನೆಲ್ಲಾ ನಾನು ಈ ಆತ್ಮಕಥೆಯಲ್ಲಿ ಬರೆಯುತ್ತಿಲ್ಲವೆಂದು ನನಗೆ ಗೊತ್ತು. ಸತ್ಯದ ಸಲುವಾಗಿ ಎಷ್ಟನ್ನು ಹೇಳಬೇಕು, ಎಷ್ಟನ್ನು ಬಿಟ್ಟುಬಿಡಬೇಕು ಎಂಬುದನ್ನು ಹೇಳಬಲ್ಲವರಾರು? ಮತ್ತು ನನ್ನ ಜೀವನದ ಕೆಲವು ಘಟನೆಗಳ ವಿಷಯದಲ್ಲಿ ನಾನು ಕೊಟ್ಟಿರುವ ಏಕಪಕ್ಷದ, ಅಸಂಪೂರ್ಣವಾದ ಸಾಕ್ಷ್ಯಕ್ಕೆ ನ್ಯಾಯಸ್ಥಾನದವರು

ಕಟ್ಟುವ ಬೆಲೆ ತಾನೆ ಏನು? ನಾನು ಇದುವರೆಗೂ ಬರೆದಿರುವ ಅಧ್ಯಾಯಗಳ ಮೇಲೆ ಯಾರಾದರೂ ನನ್ನನ್ನು ಪಾಟಿ ಸವಾಲು ಮಾಡಿದರೆ ಇವುಗಳ ವಿಚಾರವು ಇನ್ನೂ ಸ್ಪಷ್ಟವಾಗಿ ತಿಳಿಯಬಹುದು ಮತ್ತು ಅದು ಶತ್ರುಭಾವದಿಂದ ಮಾಡಿದ ಪಾಟಿ ಸವಾಲಾದರೆ ಆತನು ನನ್ನ ಹೆಮ್ಮೆಯ ಹುಳುಕನ್ನು ಹೊರಗೆಡವಿದೆನೆಂದು ಹೊಗಳಿಕೊಳ್ಳಬಹುದು.

ಹೀಗೆಯೇ ವಿಚಾರಮಾಡುತ್ತಾ ಈ ಪ್ರಕರಣಗಳನ್ನು ಬರೆಯುವದನ್ನು ನಿಲ್ಲಿಸಿಬಿಡುವದೇ ಯೋಗ್ಯವಲ್ಲವೆ ಎಂದು ನನಗೆ ಒಂದು ಕ್ಷಣಕಾಲ ತೋರುತ್ತದೆ. ಆದರೆ ಅಂತರಾತ್ಮನು ಬೇಡವೆನ್ನುವವರೆಗೂ ನಾನು ಬರೆಯುವದನ್ನು ನಿಲ್ಲಿಸಬಾರದು. ಪ್ರಾರಂಭಮಾಡಿದ ಕಾರ್ಯವನ್ನು ಅದು ನೀತಿಗೆ ವಿರುದ್ಧವಾದುದೆಂದು ತೋರುವವರೆಗೂ ಎಂದಿಗೂ ಬಿಡಬಾರದೆಂಬ ನ್ಯಾಯವನ್ನು ಅನುಸರಿಸಬೇಕು.

ವಿಮರ್ಶಕರನ್ನು ಸಂತೋಷಗೊಳಿಸುವದಕ್ಕಾಗಿ ನಾನು ಈ ಆತ್ಮಕಥೆಯನ್ನು ಬರೆಯುತ್ತಿಲ್ಲ. ಇದನ್ನು ಬರೆಯುವದೇ ಸತ್ಯದ ಪ್ರಯೋಗಗಳಲ್ಲಿ ಒಂದು. ನನ್ನ ಸಹಯೋಗಿಗಳನ್ನು ಸಂತೈಸುವದೂ ಅವರ ಮನೋವಿಚಾರಕ್ಕೆ ಸಾಮಗ್ರಿಯನ್ನೊದಗಿಸುವದೂ ಇದನ್ನು ಬರೆಯುವ ಉದ್ದೇಶಗಳಲ್ಲಿ ಒಂದಾಗಿವರುದೇನೋ ನಿಜ. ಅವರ ಬಯಕೆಯನ್ನು ಈಡೇರಿಸುವದಕ್ಕೇ ಇದನ್ನು ಆರಂಭಮಾಡಿದುದು. ಸ್ವಾಮಿ ಆನಂದರೂ ಮತ್ತು ಜಯರಾಮದಾಸರೂ ಬಿಡದೆ ಒತ್ತಾಯಪಡಿಸದಿದ್ದರೆ ಬಹುಶಃ ಇದನ್ನು ಮೊದಲುಮಾಡುತ್ತಲೇ ಇರಲಿಲ್ಲ. ಆದುದರಿಂದ ಈ ಆತ್ಮಕಥೆಯನ್ನು ಬರೆಯುವದು ತಪ್ಪಾದರೆ ಈ ದೋಷದಲ್ಲಿ ಅವರೂ ಭಾಗಿಗಳಾಗಬೇಕು.

ಇನ್ನು ಈ ಅಧ್ಯಾಯಕ್ಕೆ ಕೊಟ್ಟಿರುವ ಹೆಸರಿನಿಂದ ಸೂಚಿಸಿರುವ ವಿಷಯಗಳನ್ನು ತೆಗೆದುಕೊಳ್ಳೋಣ. ಕೆಲವರು ಭಾರತೀ

ಯರು ನನ್ನ ಮನೆಯಲ್ಲಿ ನನ್ನ ಕುಟುಂಬದವರಂತೆ ವಾಸಿಸುತ್ತಿದ್ದ ಹಾಗೆಯೇ ಕೆಲವರು ಆಂಗ್ಲ ಮಿತ್ರರೂ ಡರಬನಿನಲ್ಲಿ ನನ್ನೊಡನೆ ವಾಸಿಸುತ್ತಿದ್ದರು. ಇದು ನನ್ನೊಡನೆ ಇದ್ದವರಿಗೆಲ್ಲಾ ಸರಿ ಹೋಗುತ್ತಿದ್ದಿತೆಂದಲ್ಲ. ಆದರೆ ನಾನು ಅವರನ್ನು ಬಲವಂತ ದಿಂದ ನನ್ನ ಬಳಿ ಇಟ್ಟುಕೊಂಡಿರುತ್ತಿದ್ದೆನು. ಎಲ್ಲ ರನ್ನೂ ಇಟ್ಟುಕೊಂಡುದು ವಿವೇಕದ ಕೆಲಸವಾಗಿದ್ದಿ ತೆಂದೂ ಹೇಳುವಹಾಗಿಲ್ಲ. ಇವುಗಳಲ್ಲಿ ಕೆಲವು ಸಂಬಂಧಗಳಿಂದ ನನಗೆ ದುಃಖಕರವಾದ ಅನುಭವವುಂಟಾಯಿತು. ಆದರೆ ಇವು ಭಾರತೀಯರು ಆಂಗ್ಲೇಯರು, ಇಬ್ಬರೊಡನೆಯೂ ಸಂಭವಿಸಿದುವು. ನಾನು ಈ ಅನುಭವಗಳಿಗಾಗಿ ಪಶ್ಚಾತ್ತಾಪಪಡುವದಿಲ್ಲ. ಈ ಅನುಭವಗಳುಂಟಾದರೂ ನನ್ನ ಮಿತ್ರರಿಗೆ ತೊಂದರೆಯನ್ನೂ ಕ್ಲೇಶ ವನ್ನೂ ನಾನು ಅನೇಕ ಸಲ ಉಂಟುಮಾಡಿದರೂ ನಾನು ನನ್ನ ಪದ್ಧತಿಯನ್ನು ಬಿಟ್ಟಿಲ್ಲ. ನನ್ನ ಮಿತ್ರರು ಇದನ್ನೆಲ್ಲಾ ಔದಾರ್ಯ ದಿಂದ ಸಹಿಸಿದ್ದಾರೆ. ನಾನು ಹೊಸ ಹೊಸ ಜನರೊಂದಿಗೆ ಸಂಪ ರ್ಕಕ್ಕೆ ಬಂದುದರಿಂದ ನನ್ನ ಮಿತ್ರರಿಗೆ ದುಃಖ ಉಂಟಾ ದಾಗಲೆಲ್ಲ ನಾನು ಅವರಲ್ಲಿ ತಪ್ಪು ಹಿಡಿಯಲು ಹಿಂತೆಗೆದಿಲ್ಲ. ತಮ್ಮಲ್ಲಿ ಕಾಣಬರುವ ಪರಮಾತ್ಮನನ್ನೇ ಇತರರಲ್ಲೂ ಕಾಣ ಬೇಕಾದ ಆಸ್ತಿಕರು ಎಲ್ಲರೊಡನೆಯೂ ವಿರಕ್ತಭಾವದಿಂದ ಜೀವಿಸಲು ಶಕ್ತರಾಗಿರಬೇಕೆಂದು ನಾನು ಅಭಿಪ್ರಾಯಪಡುತ್ತೇನೆ. ಮತ್ತು ಇಂತಹ ಅವಸರಗಳು ಅರಸದೆ ಪ್ರಾಪ್ತವಾದಾಗಲೆಲ್ಲ ಅವುಗಳಿಂದ ಓಡಿಹೋಗದೆ ಅವುಗಳನ್ನು ಸೇವಾಭಾವದಿಂದ ಉಪ ಯೋಗಿಸಿಕೊಂಡು ಆದರೂ ರಾಗದ್ವೇಷರಹಿತರಾಗಿ ಇರುವದ ರಿಂದಲೇ ಹಾಗೆ ಜೀವಿಸುವ ಶಕ್ತಿಯು ಹುಟ್ಟುತ್ತದೆ.

ಆದುದರಿಂದ ಬೋಅರ್ ಯುದ್ಧವು ಮೊದಲಾದಾಗ ನನ್ನ ಮನೆಯ ತುಂಬ ಜನರಿದ್ದರೂ ನಾನು ಜೋಹಾನ್ಸ್‌ಬರ್ಗಿನಿಂದ ಬಂದ ಆಂಗ್ಲೇಯರಿಬ್ಬರನ್ನು ನನ್ನ ಬಳಿ ಇಟ್ಟುಕೊಂಡೆನು. ಇಬ್ಬರೂ ಥಿಯಾಸಫಿಸ್ಟ್ ಪಂಗಡಕ್ಕೆ ಸೇರಿದವರಾಗಿದ್ದರು. ಇವರ

ಲ್ಲೊಬ್ಬರ ಹೆಸರು ಕಿಚಿನ್ ಎಂದು. ಇವರ ಪ್ರಸಂಗವು ಮುಂದೆ ಪುನಃ ಬರುವುದು. ಈ ಮಿತ್ರರುಗಳ ದೆಸೆಯಿಂದ ನನ್ನ ಹೆಂಡತಿಯು ಎಷ್ಟೋ ಸಲ ಕಣ್ಣೀರು ಸುರಿಸಿದ್ದಾಳೆ. ಇಂತಹ ಪ್ರಸಂಗಗಳೆಷ್ಟೋ ಆಕೆಗೆ ಒದಗಿದುದಕ್ಕೆ ದುರದೃಷ್ಟವಶಾತ್ ನಾನು ಕಾರಣನಾಗಿದ್ದೇನೆ. ಆಂಗ್ಲೇಯರನ್ನು ನನ್ನ ಕುಟುಂಬದವರಂತೆಯೇ ನನ್ನ ಮನೆಯಲ್ಲಿಟ್ಟುಕೊಂಡಿರುವದು ನನಗೆ ಇದೇ ಮೊದಲಾಗಿದ್ದಿತು. ಇಂಗ್ಲೆಂಡಿನಲ್ಲಿ ನಾನು ಆಂಗ್ಲೇಯರ ಮನೆಗಳಲ್ಲಿ ಇದ್ದುದೇನೋ ನಿಜ. ಆದರೆ ನಾನು ಅಲ್ಲಿ ಅವರ ಜೀವನಕ್ರಮವನ್ನೇ ಅನುಸರಿಸುತ್ತಿದ್ದುದರಿಂದ ಅಲ್ಲಿರುವದು ಭೋಜನಾಲಯದಲ್ಲಿರುವಂತೆಯೇ ಇದ್ದಿತು. ಆದರೆ ಇಲ್ಲಿಯ ಸ್ಥಿತಿಯು ಕೇವಲ ವಿಪರೀತವಾಗಿದ್ದಿತು. ಈ ಆಂಗ್ಲ ಮಿತ್ರರು ನನ್ನ ಮನೆಯವರಾದರು. ಅವರು ಅನೇಕ ವಿಷಯಗಳಲ್ಲ ಭಾರತೀಯ ಜೀವನಕ್ರಮವನ್ನನುಸರಿಸಿದರು. ಮನೆಯ ಹೊರಗಿನ ಆಡಳಿತವೆಲ್ಲಾ ಪಾಶ್ಚಾತ್ಯರೀತಿಯನ್ನನುಸರಿಸಿದ್ದಿತಾದರೂ ಒಳಗಿನ ಜೀವನವು ಬಹುಮಟ್ಟಿಗೆ ಭಾರತೀಯ ಸಂಪ್ರದಾಯದ ಪ್ರಕಾರ ನಡೆಯುತ್ತಿದ್ದಿತು. ಅವರನ್ನು ನನ್ನ ಮನೆಯವರಂತೆ ಇಟ್ಟುಕೊಳ್ಳಲು ನನಗೆ ಸ್ವಲ್ಪ ಕಷ್ಟತೋರಿಬಂದಿತೆಂಬುದೇನೋ ನನಗೆ ನೆನಪಿದೆ. ಆದರೆ ಅವರಿಗೆ ನನ್ನ ಮನೆಯವರಂತೆ ಇರಲು ಯಾವ ಕಷ್ಟವೂ ಕಾಣಲಿಲ್ಲವೆಂದು ನಾನು ಧೈರ್ಯವಾಗಿ ಹೇಳಬಲ್ಲೆನು. ಈ ಸಂಬಂಧಗಳು ಡರಬನಿಗಿಂತ ಜೋಹಾನ್ಸಬರ್ಗಿನಲ್ಲಿ ಇನ್ನೂ ಬೆಳೆದುವು.



೧೨

# ಐರೋಪ್ಯರೊಡನೆ ಸಂಬಂಧ (ಮುಂದುವರಿದುದು)

ಜೋಹಾನ್ಸ್‌ಬರ್ಗಿನಲ್ಲಿ ಒಂದು ಸಮಯದಲ್ಲಿ ನನ್ನ ಬಳಿ ನಾಲ್ಕು ಜನ ಭಾರತೀಯ ಗುಮಾಸ್ತರಿದ್ದರು. ಅವರು ಪ್ರಾಯಶಃ ನನ್ನ ಗುಮಾಸ್ತರಂತಿರುವದಕ್ಕಿಂತ ಹೆಚ್ಚಾಗಿ ಮಕ್ಕಳಂತಿದ್ದರೆಂದು ಹೇಳಬಹುದು. ಆದರೆ ಇಷ್ಟು ಮಂದಿ ಕೂಡ ನನ್ನ ಕೆಲಸಕ್ಕೆ ಸಾಕಾಗಲಿಲ್ಲ. ಕಯ್ಯಚ್ಚಿನ (ಟೈಪ್‌ರೈಟಿಂಗ್) ಸಹಾಯವಿಲ್ಲದೆ ಕೆಲಸವು ಜರುಗುತ್ತಿರಲಿಲ್ಲ. ಮತ್ತು ನಮ್ಮಲ್ಲಿ ಯಾರಿಗಾದರೂ ಇದರ ಜ್ಞಾನವು ತಕ್ಕಮಟ್ಟಿಗೆ ಇದ್ದಿತೆಂದರೆ ನನಗೊಬ್ಬನಿಗೆ ಮಾತ್ರ ಇದ್ದಿತು. ಅದನ್ನು ಈ ನಾಲ್ಕು ಜನರಲ್ಲಿ ಇಬ್ಬರಿಗೆ ಕಲಿಸಿದೆನು. ಆದರೆ ಅವರಿಗೆ ಇಂಗ್ಲಿಷ್ ಭಾಷೆಯು ಅಷ್ಟು ಚೆನ್ನಾಗಿ ಬರುತ್ತಿರಲಿಲ್ಲವಾದುದರಿಂದ ಅವರಿಗೆ ಕೈಛಾಪೆಯು ಎಂದೂ ಸರಿಹೋಗಲಿಲ್ಲ. ಇದಲ್ಲದೆ ಇವರಲ್ಲಿ ಒಬ್ಬನಿಗೆ ಲೆಕ್ಕಪತ್ರವಿಡುವದನ್ನು ಕಲಿಸಬೇಕೆಂದಿದ್ದೆನು. ನನಗೆ ಬೇಕಾದ ಯಾರನ್ನೂ ನೇಟಾಲಿನಿಂದ ಕರೆಸಿಕೊಳ್ಳುವ ಹಾಗಿರಲಿಲ್ಲ. ಏಕೆಂದರೆ ಅಪ್ಪಣೆ ಚೀಟಿಯಿಲ್ಲದೆ ಯಾರೂ ಟ್ರಾನ್ಸ್‌ವಾಲನ್ನು ಪ್ರವೇಶಿಸಲಾಗುತ್ತಿರಲಿಲ್ಲ. ಮತ್ತು ನನ್ನ ಸ್ವಂತ ಅನುಕೂಲಕ್ಕೋಸ್ಕರ ಪರವಾನೆ ಅಧಿಕಾರಿಯ ಅನುಗ್ರಹವನ್ನು ಬೇಡುವದಕ್ಕೆ ನಾನು ಸಿದ್ಧನಾಗಿರಲಿಲ್ಲ.

ನನಗೆ ದಿಕ್ಕುತೋಚದಂತಾಯಿತು. ನನ್ನ ವಕೀಲಿ ಕೆಲಸವನ್ನೂ ಸಾರ್ವಜನಿಕ ಕಾರ್ಯಗಳನ್ನೂ ನಾನು ಎಷ್ಟು ಪ್ರಯತ್ನಪಟ್ಟರೂ ನಿರ್ವಹಿಸಲಾಗುವದಿಲ್ಲವೆಂದು ತೋರುವಮಟ್ಟಿಗೆ ಈ ಕೆಲಸಗಳು ಹಿಂದುಳಿದು ರಾಶಿ ಬೀಳುತ್ತಾ ಬಂದುವು. ಐರೋಪ್ಯಗುಮಾಸ್ತೆಯನ್ನು ಇಟ್ಟುಕೊಳ್ಳುವದಕ್ಕೇನೋ ನನಗೆ ಮನಸ್ಸಿ

ದ್ದಿತು. ಆದರೆ ನನ್ನಂತಹ ಕಪ್ಪು ಮನುಷ್ಯನ ನೌಕರಿಗೆ ಬಿಳಿಯ ಗಂಡಸಾಗಲಿ ಹೆಂಗಸಾಗಲಿ ಬರುವರೆಂದು ನನಗೆ ನಂಬಿಕೆಯಿರಲಿಲ್ಲ. ಏನೇ ಆಗಲಿ ನಾನು ಪ್ರಯತ್ನಪಡಲು ನಿಶ್ಚಯಿಸಿದೆನು. ನನಗೆ ತಿಳಿದಿದ್ದ ಒಬ್ಬ ಟೈಪ್‌ರೈಟಿಂಗ್ ದಳ್ಳಾಳಿಯ ಬಳಿಗೆ ಹೋಗಿ ಷಾರ್ಟ್‌ಹ್ಯಾಂಡ್ ಮತ್ತು ಟೈಪ್‌ರೈಟಿಂಗ್ ತಿಳಿದಿರುವವರು ಯಾರಾದರೂ ಇದ್ದರೆ ಗೊತ್ತುಮಾಡಿಕೊಡಬೇಕಾಗಿ ಕೇಳಿದೆನು. ಇದನ್ನು ತಿಳಿದ ಹುಡುಗಿಯರು ದೊರಕುತ್ತಿದ್ದರು. ಇವರಲ್ಲಿ ಯಾರಾದರೂ ಒಬ್ಬರನ್ನು ಗೊತ್ತುಮಾಡಿಕೊಡಲು ಪ್ರಯತ್ನಪಡುವದಾಗಿ ಆ ದಳ್ಳಾಳಿಗಳು ಒಪ್ಪಿದರು. ಆಗ ತಾನೆ ಸ್ಕಾಟ್ಲೆಂಡಿನಿಂದ ಅಲ್ಲಿಗೆ ಬಂದಿದ್ದ ಮಿಸ್ ಡಿಕ್ ಎಂಬಾಕೆಯು ಆತನ ದೃಷ್ಟಿಗೆ ಬಿದ್ದಳು. ಎಲ್ಲಾದರೂ ಸರಿಯೆ ನ್ಯಾಯವಾಗಿ ಜೀವನ ಸಂಪಾದಿಸುವದಕ್ಕೆ ಆಕೆಗೆ ಅಭ್ಯಂತರವೇನೂ ಇರಲಿಲ್ಲ. ಮತ್ತು ಆಕೆಯು ಒಡನೆಯೇ ಕೆಲಸವನ್ನು ಸಂಪಾದಿಸಬೇಕಾಗಿದ್ದಿತು. ಆದುದರಿಂದ ಆ ದಳ್ಳಾಳಿಗಳು ಆಕೆಯನ್ನು ನನ್ನ ಬಳಿಗೆ ಕಳುಹಿಸಿಕೊಟ್ಟರು. ಆಕೆಯನ್ನು ನೋಡಿದೊಡನೆಯೇ ನನಗೆ ಆಕೆಯಲ್ಲಿ ಆದರವು ಹುಟ್ಟಿತು.

"ಭಾರತೀಯರ ಕೈಕೆಳಗೆ ಕೆಲಸಮಾಡಲು ನಿನಗೆ ಅಭ್ಯಂತರವಿಲ್ಲವೆ?" ಎಂದು ನಾನು ಕೇಳಿದೆನು.

"ಎಳ್ಳಷ್ಟೂ ಇಲ್ಲ." ಎಂದು ಆಕೆಯು ದೃಢವಾಗಿ ಉತ್ತರ ಕೊಟ್ಟಳು.

"ನೀನು ಎಷ್ಟು ಸಂಬಳವನ್ನು ನಿರೀಕ್ಷಿಸುತ್ತೀ?"

"೧೭॥ ಪೌಂಡ್ ಕೇಳಿದರೆ ತುಂಬ ಹೆಚ್ಚಾದೀತೆ?"

"ನನಗೆ ಬೇಕಾದಷ್ಟು ಕೆಲಸವು ನಿನ್ನಿಂದ ದೊರೆತರೆ ಅದೇನಿದಿಗೂ ಹೆಚ್ಚಲ್ಲ. ನಿನಗೆ ಯಾವಾಗ ಕೆಲಸಕ್ಕೆ ಸೇರಿಕೊಳ್ಳುವದಕ್ಕೆ ಆಗುತ್ತದೆ?"

"ಈ ಕ್ಷಣ, ನೀವು ಇಷ್ಟಪಟ್ಟರೆ."

ನನಗೆ ಬಹಳ ಸಂತೋಷವಾಯಿತು. ಒಡನೆಯೇ ಆಕೆ ಯೊಡನೆ ಕಾಗದ ಬರೆಸತೊಡಗಿದೆನು.

ಕೆಲವು ದಿನಗಳೊಳಗಾಗಿಯೇ ಆಕೆಯು ನನಗೆ ಗುಮಾಸ್ತೆ ಗಿಂತ ಹೆಚ್ಚಾಗಿ ಸದ್ಯ ಮಗಳೋ ತಂಗಿಯೋ ಎಂಬಂತಾದಳು. ಆಕೆಯ ಕೆಲಸದಲ್ಲಿ ತಪ್ಪು ಕಂಡುಹಿಡಿಯಲು ನನಗೆ ಸಾಮಾನ್ಯ ವಾಗಿ ಅವಕಾಶವೇ ಇರುತ್ತಿರಲಿಲ್ಲ. ಅನೇಕ ವೇಳೆ ಆಕೆಯ ಕಾರುಬಾರಿನಲ್ಲಿ ಸಾವಿರಾರು ಪೌಂಡು ಇರುತ್ತಿದ್ದಿತು. ಮತ್ತು ಲೆಕ್ಕದ ಪುಸ್ತಕಗಳೂ ಆಕೆಯ ವಶದಲ್ಲಿಯೇ ಇದ್ದುವು. ಆಕೆಯು ನನ್ನ ವಿಶ್ವಾಸವನ್ನು ಸಂಪೂರ್ಣವಾಗಿ ಸಂಪಾದಿಸಿದಳು. ಮತ್ತು ಇದಕ್ಕಿಂತ ಹೆಚ್ಚಿನ ವಿಷಯವೇನೆಂದರೆ ನನ್ನ ಹೃದಯಾಂತರದಲ್ಲಿ ರುವ ವಿಚಾರವನ್ನೆಲ್ಲಾ ಭಾವವನ್ನೆಲ್ಲಾ ನನ್ನಲ್ಲಿ ಭರವಸೆಯಿಂದ ಹೇಳಿಕೊಳ್ಳುತ್ತಿದ್ದಳು. ತನ್ನ ಗಂಡನನ್ನು ಕಟ್ಟಕಡೆಗೆ ಆರಿಸುವದ ರಲ್ಲಿ ಕೂಡ ಆಕೆಯು ನನ್ನ ಸಲಹೆಯನ್ನು ತೆಗೆದುಕೊಂಡಳು. ಆಕೆಯನ್ನು ಕನ್ಯಾದಾನ ಮಾಡುವ ಸೌಭಾಗ್ಯವು ನನಗೇ ಪ್ರಾಪ್ತವಾಯಿತು. ತನ್ನ ಮದುವೆಯಾದ ಮೇಲೆ ಆಕೆಯು ನನ್ನನ್ನು ಬಿಡಬೇಕಾಗಿ ಬಂದರೂ ಆಮೇಲೆ ಕೂಡ ನನ್ನ ಕೆಲಸದ ಹೊರೆಯು ಹೆಚ್ಚಾದಾಗ ನಾನು ಆಕೆಯನ್ನು ಕೇಳಿದರೆ ಆಕೆಯು ಕೆಲಸ ಮಾಡುವದಕ್ಕೆ ಎಂದೂ ಹಿಂತೆಗೆಯುತ್ತಿರಲಿಲ್ಲ.

ಆದರೆ ಈಗ ಆಕೆಯ ಸ್ಥಳದಲ್ಲಿ ಒಬ್ಬ ಖಾಯಂ ಷಾರ್ಟ್ ಹ್ಯಾಂಡ್ ಟೈಪಿಸ್ಟು ಬೇಕಾಯಿತು. ಅದೃಷ್ಟವಶಾತ್ ಇನ್ನೊ ಬ್ಬಳು ದೊರಕಿದಳು. ಈಕೆಯ ಹೆಸರು ಮಿಸ್ ಸ್ಲೆಸಿನ್ ಎಂದು. ಮಿ. ಕಲ್‌ಬಾಕರ ಮೂಲಕ ನನಗೆ ಈಕೆಯ ಪರಿಚಯವಾಯಿತು. ಈ ಕಲ್‌ಬಾಕರ ವಿಷಯವು ಇಷ್ಟರಲ್ಲಿಯೇ ವಾಠಕರಿಗೆ ಗೊತ್ತಾ ಗುವುದು. ಆಕೆಯು ಈಗ ಟ್ರಾನ್ಸ್‌ವಾಲಿನ ಪಾಠಶಾಲೆಯೊಂದ ರಲ್ಲಿ ಉಪಾಧ್ಯಾಯಿನಿಯಾಗಿದ್ದಾಳೆ. ನನ್ನ ಬಳಿಗೆ ಬಂದಾಗ ಆಕೆಗೆ

ಸುಮಾರು ೧೭ ವರ್ಷ. ಒಂದೊಂದು ಸಲ ಆಕೆಯ ವೈಪರೀತ್ಯಗಳಲ್ಲಿ ಕೆಲವನ್ನು ನನಗಾಗಲಿ ಕಲೀಗರಿಗಾಗಲಿ ಸಹಿಸುವದಕ್ಕಾಗುತ್ತಿರಲಿಲ್ಲ. ನೌಕರಿಗಿಂತ ಹೆಚ್ಚಾದ ಅನುಭವವನ್ನು ಸಂಪಾದಿಸಲೋಸುಗ ಆಕೆಯು ಬಂದಿದ್ದಳು. ವರ್ಣದ್ವೇಷವೆಂಬುದು ಆಕೆಯ ಸ್ವಭಾವದಲ್ಲಿಯೇ ಇರಲಿಲ್ಲ. ಆಕೆಗೆ ವಯಸ್ಸಾದವರು ಅಥವಾ ಅನುಭವಿಗಳು ಎಂಬ ಲಕ್ಷ್ಯವೇ ಇರಲಿಲ್ಲ. ಯಾರ ವಿಚಾರದಲ್ಲಿಯೇ ಆಗಲಿ ತನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ಅವರ ಮುಖಕ್ಕೇ ಹೇಳಿ ಅವರಿಗೆ ಅವಮಾನ ಮಾಡುವದಕ್ಕೆ ಕೂಡ ಹಿಂತೆಗೆಯುತ್ತಿರಲಿಲ್ಲ. ಆಕೆಯ ಈ ದುಡಕಿನಿಂದ ನನಗೆ ಎಷ್ಟೋ ತೊಡಕುಂಟಾಯಿತು. ಆದರೆ ಆಕೆಯ ಅಕೃತ್ರಿಮ ಸ್ವಭಾವದಿಂದ ಈ ತೊಡಕುಗಳು ಹುಟ್ಟಿದೊಡನೆಯೇ ಮಾಯವಾಗುತ್ತಿದ್ದುವು. ಆಕೆಗೆ ನನಗಿಂತ ಚೆನ್ನಾಗಿ ಇಂಗ್ಲಿಷ್ ಭಾಷೆಯಲ್ಲಿ ಬರೆಯುವದಕ್ಕೆ ಬರುವದೆಂದು ನಾನು ಎಣಿಸಿದ್ದುದರಿಂದಲೂ ಮತ್ತು ನನಗೆ ಆಕೆಯ ಕರ್ತವ್ಯನಿಷ್ಠೆಯಲ್ಲಿ ಪೂರ್ಣ ನಂಬಿಕೆಯಿದ್ದುದರಿಂದಲೂ ಆಕೆಯು ಕೈಛಾಪೆಮಾಡಿದ ಕಾಗದಗಳಿಗೆ ನಾನು ಎಷ್ಟೋ ಸಲ ಶೋಧಿಸದೆ ಸಹಿ ಹಾಕಿದ್ದೇನೆ.

ಆಕೆಯ ತ್ಯಾಗವು ಅಧಿಕವಾಗಿದ್ದಿತು. ಎಷ್ಟೋ ಕಾಲ ಆಕೆಯು ತಿಂಗಳಿಗೆ ೬ ಪೌಂಡಿಗಿಂತ ಹೆಚ್ಚಾಗಿ ತೆಗೆದುಕೊಳ್ಳುತ್ತಿರಲಿಲ್ಲ. ೧೦ ಪೌಂಡಿಗಿಂತ ಹೆಚ್ಚಾಗಿ ತೆಗೆದುಕೊಳ್ಳಲು ಕಡೆಯವರೆಗೂ ಒಪ್ಪಲೇ ಇಲ್ಲ. ಹೆಚ್ಚಿಗೆ ತೆಗೆದುಕೊಳ್ಳಬೇಕೆಂದು ನಾನು ಆಗ್ರಹಮಾಡಿದರೆ ಆಕೆಯು ನನ್ನನ್ನು ಗದರಿಸಿ "ನಾನೇನು ನಿಮ್ಮ ಬಳಿಗೆ ಬಂದಿರುವದು ಸಂಬಳ ತೆಗೆದುಕೊಳ್ಳುವದಕ್ಕಲ್ಲ. ನಿಮ್ಮೊಡನೆ ಕೆಲಸಮಾಡುವದಕ್ಕೆ ನನಗೆ ಇಷ್ಟ. ಮತ್ತು ನಿಮ್ಮ ಆದರ್ಶಗಳು ನನ್ನ ಮನಸ್ಸಿಗೆ ಒಪ್ಪುತ್ತವೆ. ಆದಕ್ಕಾಗಿಯೇ ನಾನು ಇಲ್ಲಿ ಇರುವದು." ಎಂದು ಹೇಳುತ್ತಿದ್ದಳು.

ಒಂದು ಸಲ ಆಕೆಗೆ ನನ್ನಿಂದ ೪೦ ಪೌಂಡು ತೆಗೆದುಕೊಳ್ಳುವ ಸಂದರ್ಭ ಪೊದಗಿತು. ಆದರೆ ಆಕೆಯು ಅದನ್ನು ಸಾಲವಾಗಿಯೇ

ತೆಗೆದುಕೊಳ್ಳುವೆನೆಂದು ಹಟ ಹಿಡಿದಳು. ಕಳೆದ ವರ್ಷ (೧೯೨೬) ಈ ಹಣವನ್ನು ಸಂಪೂರ್ಣವಾಗಿ ಹಿಂದಕ್ಕೆ ಕೊಟ್ಟಳು.

ತನ್ನ ತ್ಯಾಗವೃತ್ತಿಯಷ್ಟೇ ತೀವ್ರವಾದ ಧೈರ್ಯವೂ ಆಕೆಗಿದ್ದಿತು. ಸ್ಫಟಿಕದಂತೆ ಶುಭ್ರವಾದ ಸ್ವಭಾವವೂ ಕ್ಷತ್ರಿಯರನ್ನು ನಾಚಿಕೆಗೊಳಿಸುವ ಧೈರ್ಯವೂ ಇರುವ ಕೆಲವು ಸ್ತ್ರೀಯರ ಪರಿಚಯದ ಸೌಭಾಗ್ಯವು ನನಗುಂಟಾಗಿದೆ. ಈ ಅಲ್ಪ ಸಂಖ್ಯಾತವಾದ ಸ್ತ್ರೀಯರಲ್ಲಿ ಈಕೆಯೂ ಒಬ್ಬಳು. ಇಂದು ಆಕೆಯು ವಯಸ್ಸು ಬಂದ ಯುವತಿಯಾಗಿದ್ದಾಳೆ. ಆಕೆಯು ನನ್ನ ಬಳಿ ಇದ್ದಾಗ ನನಗೆ ತಿಳಿದಿದ್ದಷ್ಟುಮಟ್ಟಿಗೆ ಈಗ ಆಕೆಯ ಮನೋವೃತ್ತಿಯು ನನಗೆ ಗೊತ್ತಿಲ್ಲ. ಆದರೆ ಆಕೆಯೊಡನೆ ನನಗಿದ್ದ ಸಂಬಂಧವು ನನಗೆ ಸದಾ ಪವಿತ್ರ ಸ್ಮರಣೆಯಾಗಿರುತ್ತದೆ. ಆದುದರಿಂದ ಆಕೆಯ ವಿಚಾರವಾಗಿ ನನಗೆ ತಿಳಿದುದನ್ನು ಹೇಳದೆ ಇದ್ದರೆ ನಾನು ಸತ್ಯಕ್ಕೆ ದ್ರೋಹಮಾಡಿದಂತಾಗುತ್ತದೆ.

ನಮ್ಮ ಪಕ್ಷಕ್ಕೆ ಶ್ರಮಪಡುವದರಲ್ಲಿ ಆಕೆಗೆ ಹಗಲೂ ಗೊತ್ತಿರಲಿಲ್ಲ, ರಾತ್ರಿಯೂ ಗೊತ್ತಿರಲಿಲ್ಲ. ಅರ್ಧರಾತ್ರಿಯ ಕತ್ತಲಿನಲ್ಲಿ ಒಬ್ಬಳೇ ಕೆಲಸದ ಸಲುವಾಗಿ ಹೋಗುತ್ತಿದ್ದಳು. ಜೊತೆಗೆ ಯಾರನ್ನಾದರೂ ಕಳುಹಿಸುತ್ತೇನೆಂದರೆ ರೇಗಿಬಿಡುತ್ತಿದ್ದಳು. ಸಾವಿರಾರು ಮಂದಿ ದೃಢಕಾಯರಾದ ಭಾರತೀಯರು ಆಕೆಯನ್ನು ಮಾರ್ಗದರ್ಶಿಯಾಗಿ ಮಾನಿಸುತ್ತಿದ್ದರು. ಸತ್ಯಾಗ್ರಹದ ಕಾಲದಲ್ಲಿ ಪ್ರಾಯಶಃ ಎಲ್ಲಾ ಮುಖಂಡರೂ ಸೆರೆಯಲ್ಲಿದ್ದಾಗ ಆಕೆಯೊಬ್ಬಳೇ ಕದನವನ್ನು ನಡೆಸಿದಳು. ಸಾವಿರಾರು ಪೌಂಡುಗಳ ಜವಾಬ್ದಾರಿಯೂ ಅನೇಕ ಕಾಗದಪತ್ರಗಳಿಗೆ ಉತ್ತರ ಕೊಡುವ ಕೆಲಸವೂ "ಇಂಡಿಯನ್ ಒಪಿನಿಯನ್" ಪತ್ರಿಕೆಯನ್ನು ನಡೆಸುವ ಭಾರವೂ ಆಕೆಯ ಕೈಯಲ್ಲಿದ್ದಿತು. ಆದರೂ ಆಕೆಯು ಬೇಸರಪಡಲಿಲ್ಲ.

ಮಿಸ್ ಸ್ಲೆಸಿನಿನ ವಿಷಯದಲ್ಲಿ ಹೀಗೆಯೇ ಕೊನೆಯಿಲ್ಲದೆ ಬರೆದುಕೊಂಡು ಹೋಗಬಹುದು. ಆದರೆ ಗೋಖಲೆಯವರಿಗೆ ಆಕೆಯ ವಿಷಯದಲ್ಲಿದ್ದ ಅಭಿಪ್ರಾಯವನ್ನು ಕೊಟ್ಟು ಈ ಅಧ್ಯಾಯವನ್ನು ಮುಗಿಸುತ್ತೇನೆ. ಗೋಖಲೆಯವರಿಗೆ ನನ್ನ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಪ್ರತಿಯೊಬ್ಬರ ಪರಿಚಯವೂ ಇದ್ದಿತು. ಇವರಲ್ಲಿ ಅನೇಕರನ್ನು ನೋಡಿ ಅವರು ಸಂತೋಷಪಟ್ಟರು. ಆಗಾಗ ಅವರು ಈ ಜನರ ಯೋಗ್ಯತೆಯ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ಹೇಳುತ್ತಿದ್ದರು. ಅವರು ನನ್ನ ಜೊತೆಯಲ್ಲಿ ಕೆಲಸಮಾಡುತ್ತಿದ್ದ ಭಾರತೀಯ ಮತ್ತು ಐರೋಪ್ಯರಲ್ಲೆಲ್ಲಾ ಮಿಸ್ ಸ್ಲೆಸಿನ್‌ಗೆ ಅಗ್ರಸ್ಥಾನವನ್ನು ಕೊಟ್ಟರು. "ಮಿಸ್ ಸ್ಲೆಸಿನ್ ನಲ್ಲಿರುವಂತಹ ತ್ಯಾಗ, ಅಂತಹ ಪವಿತ್ರತೆ, ಅಂತಹ ಧೈರ್ಯ, ಅಂತಹ ಸಾಮರ್ಥ್ಯ, ಇವುಗಳನ್ನು ನಾನು ನೋಡಿರುವದು ಬಹಳ ಅಪೂರ್ವ. ನನ್ನ ದೃಷ್ಟಿಯಲ್ಲಿ ನಿಮ್ಮ ಜೊತೆಯವರಲ್ಲೆಲ್ಲಾ ಮಿಸ್ ಸ್ಲೆಸಿನ್ ಪ್ರಥಮಸ್ಥಾನಕ್ಕೆ ಅರ್ಹಳು." ಎಂದು ಹೇಳಿದರು.

———

# ೧೩

## ' ಇಂಡಿಯನ್ ಒಪಿನಿಯನ್ '

ಇತರ ಐರೋಪ್ಯರೊಡನೆ ನನ್ನ ಗಾಢವಾದ ಪರಿಚಯುವನ್ನು ತಿಳಿಸುವದಕ್ಕೆ ಮುಂಚೆ ಎರಡು ಮೂರು ಮುಖ್ಯವಾದ ಸಂಗತಿಗಳ ವಿಷಯುವಾಗಿ ಬರೆಯಬೇಕು. ಆದರೆ ಈ ಪರಿಚಯುಗಳಲ್ಲಿ ಒಂದನ್ನು ಒಡನೆಯೇ ತಿಳಿಸಬೇಕು. ಮಿಸ್ ಡಿಕ್ ಒಬ್ಬಳನ್ನೇ ಕೆಲಸಕ್ಕೆ ನೇಮಿಸಿದುದರಿಂದ ನನ್ನ ಕಾರ್ಯವು ಜರುಗುವಹಾಗಿರಲಿಲ್ಲ. ನನಗೆ ಇನ್ನೂ ಹೆಚ್ಚಿನ ಸಹಾಯುವು ಬೇಕಾಗಿದ್ದಿತು. ಹಿಂದಿನ ಅಧ್ಯಾಯುಗಳಲ್ಲಿ ನಾನು ಮಿ. ರಿಚ್ ಎಂಬುವರ ಹೆಸರನ್ನು ತಿಳಿಸಿದ್ದೇನೆ. ಅವರು ನನಗೆ ಚೆನ್ನಾಗಿ ಗೊತ್ತಿದ್ದರು. ಅವರು ಒಂದು ವರ್ತಕಸಮೂಹದ ಸಂಚಾಲಕರಾಗಿದ್ದರು. ಆ ಕೆಲಸವನ್ನು ಬಿಟ್ಟು ನನ್ನ ಕಚೇರಿಗೆ ಸೇರಿಕೊಳ್ಳಬೇಕೆಂದು ನಾನು ಸೂಚಿಸಲು ಅದಕ್ಕೆ ಅವರು ಒಪ್ಪಿ ನನ್ನ ಭಾರವನ್ನು ಬಹುಮಟ್ಟಿಗೆ ಇಳಿಸಿದರು.

ಸುಮಾರು ಈ ಸಮಯುದಲ್ಲಿ ಶ್ರೀ. ಮದನಜಿತರು "ಇಂಡಿಯನ್ ಒಪಿನಿಯನ್" ಎಂಬ ವೃತ್ತಪತ್ರಿಕೆಯನ್ನು ಹೊರಡಿಸುವ ವಿಚಾರವಾಗಿ ಸಲಹೆ ಕೇಳಲು ನನ್ನ ಬಳಿಗೆ ಬಂದರು. ಅವರು ಮುದ್ರಣಶಾಲೆಯೊಂದನ್ನು ಆಗಲೇ ನಡೆಸುತ್ತಿದ್ದರು. ನಾನು ಅವರ ಸೂಚನೆಗೆ ಒಪ್ಪಿದೆನು. ಪತ್ರಿಕೆಯು ೧೯೦೪ ರಲ್ಲಿ ಹೊರಟಿತು. ಶ್ರೀ. ಮನಸುಖಲಾಲ್ ನಾಜರರು ಅದರ ಮೊದಲನೆಯ ಸಂಪಾದಕರಾದರು. ಆದರೆ ಪತ್ರಿಕೆಯನ್ನು ನಡೆಸುವದರ ಹೆಚ್ಚಿನ ಭಾರವನ್ನೆಲ್ಲಾ ನಾನೇ ಹೊರಬೇಕಾಗಿದ್ದಿತು. ಏಕೆಂದರೆ ಹೆಚ್ಚಿನ ಕಾಲವೆಲ್ಲಾ ನಾನೇ ಆ ಪತ್ರಿಕೆಯನ್ನು ನಡೆಸಬೇಕಾಗಿ ಬಂದಿತು. ಶ್ರೀ. ಮನಸುಖಲಾಲರಿಗೆ ಅದನ್ನು ನಡೆಸಲಾಗುತ್ತಿರಲಿಲ್ಲವೆಂದಲ್ಲ. ಹಿಂದುಸ್ಥಾನದಲ್ಲಿ ಅವರು ವೃತ್ತಪತ್ರಿಕೆಗಳಿಗೆ ಬರೆಯುವ ಕೆಲಸ

ವನ್ನು ಬೇಕಾದಹಾಗೆ ಮಾಡಿದ್ದರು. ಆದರೆ ನಾನು ಅಲ್ಲಿ ಇರುವವರೆಗೆ ದಕ್ಷಿಣಾ ಆಫ್ರಿಕಕ್ಕೆ ಸಂಬಂಧಪಟ್ಟ ತೊಡಕಾದ ಪ್ರಶ್ನೆಗಳ ಮೇಲೆ ತಾವು ಬರೆಯಲು ಎಂದಿಗೂ ಹೊರಡುತ್ತಿರಲಿಲ್ಲ. ನನ್ನ ವಿವೇಚನಾಶಕ್ತಿಯಲ್ಲಿ ಅವರಿಗೆ ಸಂಪೂರ್ಣ ನಂಬಿಕೆಯಿದ್ದಿತು. ಆದುದರಿಂದ ಸಂಪಾದಕೀಯ ಸೂಚನೆಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಅವರು ನನ್ನ ಮೇಲೆ ಹೊರಿಸಿದರು. ಇಂದಿನವರೆಗೂ ಅದು ವಾರಪತ್ರಿಕೆಯಾಗಿಯೇ ಬಂದಿದೆ. ಪ್ರಾರಂಭದಲ್ಲಿ ಅದು ಗುಜರಾತೀ, ಹಿಂದೀ, ತಮಿಳು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಹೊರಡುತ್ತಿದ್ದಿತು. ಆದರೆ ತಮಿಳು ಮತ್ತು ಹಿಂದೀ ಭಾಗಗಳು ಅಲಂಕಾರಕ್ಕೆ ಮಾತ್ರ ಇದ್ದುವೆಂಬುದನ್ನು ನಾನು ಕಂಡೆನು. ನಮ್ಮ ಉದ್ದೇಶದಂತೆ ಅವುಗಳಿಂದ ಪ್ರಯೋಜನ ದೊರಕುತ್ತಿರಲಿಲ್ಲ. ಅವುಗಳನ್ನು ನಡೆಸುತ್ತಾ ಬರುವದರಲ್ಲಿ ವಂಚನೆ ಕೂಡ ಉಂಟೆಂದು ನನಗೆ ತೋರಿತು. ಆದುದರಿಂದ ಅವುಗಳನ್ನು ನಿಲ್ಲಿಸಿದೆನು.

ಈ ಪತ್ರಿಕೆಗಾಗಿ ನಾನು ಹಣವನ್ನು ಕೊಡಬೇಕಾಗುವದೆಂದು ನಾನು ತಿಳಿದುಕೊಂಡಿರಲಿಲ್ಲ. ಆದರೆ ನನ್ನಿಂದ ಹಣಸಹಾಯವಿಲ್ಲದೆ ಪತ್ರಿಕೆಯು ನಡೆಯಲಾರದೆಂದು ನನಗೆ ಅತ್ಯಲ್ಪಕಾಲದಲ್ಲಿಯೇ ಗೊತ್ತಾಯಿತು. ಭಾರತೀಯರು ಮತ್ತು ಐರೋಪ್ಯರು—ಇಬ್ಬರಿಗೂ ನಾನು ಹೆಸರಿಗೆ 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಸಂಪಾದಕನಲ್ಲದಿದ್ದರೂ ಅದು ನಡೆಯುವದಕ್ಕೆ ನಾನೇ ಜವಾಬ್ದಾರನೆಂದು ಗೊತ್ತಿದ್ದಿತು. ಈ ಪತ್ರಿಕೆಯನ್ನು ಹೊರಡಿಸದೆಯೇ ಇದ್ದಿದ್ದರೆ ಯಾವ ನಷ್ಟವೂ ಉಂಟಾಗುತ್ತಿರಲಿಲ್ಲ. ಆದರೆ ಒಂದು ಸಲ ಪ್ರಾರಂಭ ಮಾಡಿದ ಮೇಲೆ ಅದನ್ನು ನಿಲ್ಲಿಸುವದರಿಂದ ನಷ್ಟವೂ ಅಪಮಾನವೂ ಸಂಭವಿಸುತ್ತಿದ್ದಿತು. ಆದುದರಿಂದ ನಾನು ಅದಕ್ಕಾಗಿ ಹಣವನ್ನು ಚೆಲ್ಲುತ್ತಾ ಹೋದೆನು. ಕಟ್ಟಕಡೆಗೆ ಹೆಚ್ಚುಕಡಿಮೆ ನನ್ನ ಉಳಿತಾಯವೆಲ್ಲಾ ಇದಕ್ಕೇ ಹೋಗುತ್ತಿದ್ದಿತು. ತಿಂಗಳಿಗೆ ೭೫ ಪೌಂಡು ಕಳುಹಿಸುತ್ತಿದ್ದ ಕಾಲವು ಕೂಡ ನನಗೆ ಜ್ಞಾಪಕದಲ್ಲಿದೆ.

ಆದರೆ ಇಷ್ಟೆಲ್ಲಾ ವರ್ಷಗಳಾದ ಮೇಲೆ ಆ ಪತ್ರಿಕೆಯು ನಮ್ಮ ಜನರ ಸೇವೆಯನ್ನು ಚೆನ್ನಾಗಿ ಮಾಡಿದೆಯೆಂದು ನನಗೆ ತೋರುತ್ತದೆ. ಅದರಿಂದ ಹಣ ಗಳಿಸಬೇಕೆಂಬ ಉದ್ದೇಶವು ಯಾವಾಗಲೂ ಇರಲಿಲ್ಲ. ಅದು ನನ್ನ ಕೈಯಲ್ಲಿರುವವರೆಗೂ ಅದರ ವ್ಯತ್ಯಾಸಗಳು ನನ್ನ ಜೀವನದ ಮಾರ್ಪಾಟುಗಳನ್ನು ಸೂಚಿಸುತ್ತಿದ್ದುವು. ಇಂದು 'ಯಂಗ್ ಇಂಡಿಯಾ' ಮತ್ತು 'ನವಜೀವನ' ಪತ್ರಿಕೆಗಳು ಹೇಗೋ ಹಾಗೆ 'ಇಂಡಿಯನ್ ಒಪಿನಿಯನ್' ಪತ್ರಿಕೆಯು ಕೂಡ ಆಗ ನನ್ನ ಜೀವನದ ಕೆಲವಂಶಗಳಿಗೆ ಕನ್ನಡಿಯಂತಿದ್ದಿತು. ವಾರವಾರವೂ ಅದರೊಳಕ್ಕೆ ನನ್ನ ಅಂತರಂಗವನ್ನೆಲ್ಲಾ ಸುರಿಯುತ್ತಿದ್ದೆನು. ನನ್ನ ಬುದ್ಧಿಗೆ ಗೋಚರವಾದಂತೆ ಸತ್ಯಾಗ್ರಹವೆಂದರೇನು ಮತ್ತು ಅದನ್ನು ಆಚರಿಸುವದೆಂತು—ಇದನ್ನೆಲ್ಲಾ ವಿವರಿಸುತ್ತಿದ್ದೆನು. ಹತ್ತು ವರ್ಷದ ಕಾಲ ಎಂದರೆ ೧೯೧೪ ರ ವರೆಗೂ—ನಾನು ಸೆರೆಮನೆಯಲ್ಲಿ ಬಲತ್ಕಾರದ ವಿಶ್ರಾಂತಿಯನ್ನು ಹೊಂದುತ್ತಿದ್ದಾಗ ಹೊರತು—'ಇಂಡಿಯನ್ ಒಪಿನಿಯನ್' ಪತ್ರಿಕೆಯ ಒಂದು ಸಂಚಿಕೆಯಾಗಲಿ ನನ್ನ ಲೇಖನವಿಲ್ಲದೆ ಹೊರಡಲಿಲ್ಲವೆಂದು ಹೇಳಬಹುದು. ಈ ಲೇಖನಗಳಲ್ಲಿ ಯೋಚನೆಮಾಡದೆ ತೂಕ ಮಾಡದೆ ಬರೆದ ಒಂದು ಮಾತಾಗಲಿ ಮನಃಪೂರ್ವಕವಾದ ಅತಿಶಯೋಕ್ತಿಯೊಂದಾಗಲಿ ಅಥವಾ ಸುಮ್ಮನೆ ಸಂತೋಷಪಡಿಸಲೋಸುಗ ಬರೆದುದೇನೇ ಆಗಲಿ ನಾನು ನೆನಪಿಗೆ ತಂದುಕೊಳ್ಳಲಾರೆನು. ನನಗೆ ಈ ಪತ್ರಿಕೆಯು ಆತ್ಮಸಂಯಮಕ್ಕೆ ಸಾಧನವಾಗಿಯೂ ನನ್ನ ಮಿತ್ರರಿಗೆ ನನ್ನ ಮನೋವಿಚಾರವಾಹಿನಿಯಾಗಿಯೂ ಇದ್ದಿತು. ವಿಮರ್ಶಕರಿಗೆ ಇದರಲ್ಲಿ ಆಕ್ಷೇಪಿಸುವದಕ್ಕೆ ಅತ್ಯಲ್ಪ ಅವಕಾಶವಿರುತ್ತಿದ್ದಿತು. ಅಷ್ಟೇಕೆ, "ಇಂಡಿಯನ್ ಒಪಿನಿಯನಿ"ನ ರೀತಿಯು ವಿಮರ್ಶಕರು ತಮ್ಮ ಲೆಕ್ಕಣಿಯನ್ನು ವಿಚಾರವಿಲ್ಲದೆ ಓಡಿಸದಂತೆ ಬಿಗಿ ಹಿಡಿಯುವ ಹಾಗೆ ಮಾಡಿತೆಂದು ನನಗೆ ಗೊತ್ತು. ಈ ಪತ್ರಿಕೆಯಿಲ್ಲದೆ ಸತ್ಯಾಗ್ರಹವು ಬಹುಶಃ ಸಾಧ್ಯವಾಗುತ್ತಿರಲಿಲ್ಲ. ಸತ್ಯಾಗ್ರಹಯುದ್ಧದ ವಿಶ್ವಾಸಾರ್ಹವಾದ ವೃತ್ತಾಂತಕ್ಕೂ ದಕ್ಷಿಣ

ಆಫ್ರಿಕದಲ್ಲಿನ ಭಾರತೀಯರ ನಿಜವಾದ ಪರಿಸ್ಥಿತಿಯ ವಿವರಕ್ಕೂ ವಾಚಕರು ಈ ಪತ್ರಿಕೆಯನ್ನು ಇದಿರುನೋಡುತ್ತಿದ್ದರು. ನನಗೆ ಇದು ಮಾನವ ಸ್ವಭಾವದ ಬೇರೆ ಬೇರೆ ಮಾಟಗಳನ್ನೂ ವಿವಿಧ ಛಾಯೆಗಳನ್ನೂ ಅರಿತುಕೊಳ್ಳಲೊಂದು ಸಾಧನವಾಯಿತು. ನಾನು ಸಂಪಾದಕನಿಗೂ ವಾಚಕರಿಗೂ ಮಧ್ಯೆ ಗಾಢವಾದ ಹಾಗೂ ಸ್ಪಷ್ಟವಾದ ಸಂಬಂಧವನ್ನು ಬೆಳೆಸಬೇಕೆಂಬ ಧ್ಯೇಯವನ್ನು ಸದಾ ಇಟ್ಟುಕೊಂಡಿದ್ದೆನಾದುದರಿಂದ ವಾಚಕರ ಹೃದಯದಿಂದ ಹೊರ ಸೂಸುವ ಭಾವಗಳನ್ನೊಳಗೊಂಡ ಕಾಗದದ ಮಳೆಯು ನನ್ನ ಮೇಲೆ ಸುರಿಯುತ್ತಿದ್ದಿತು. ಈ ಪತ್ರಗಳು ಬರೆದವರ ಸ್ವಭಾವಕ್ಕನುಗುಣವಾಗಿ ಮಿತ್ರಭಾವದಿಂದೊಡಗೂಡಿಯೋ ತೀಕ್ಷ್ಣವಾಗಿಯೋ ಕಟುವಾಗಿಯೋ ಇರುತ್ತಿದ್ದುವು. ಈ ಕಾಗದಪತ್ರಗಳನ್ನೆಲ್ಲಾ ಓದಿ ಅರ್ಥಮಾಡಿಕೊಂಡು ಅರಗಿಸಿಕೊಂಡು ಅವುಗಳಿಗೆ ಉತ್ತರಕೊಡುವದು ನನಗೆ ಸೊಗಸಾದ ಶಿಕ್ಷಣವಾಯಿತು. ಈ ಮೂಲಕವಾಗಿ ನಮ್ಮ ಜನರು ಕಿವಿಗೆ ಕೇಳುವಂತೆ ಯೋಚನೆ ಮಾಡುತ್ತಿರುವರೋ ಎನ್ನುವಂತೆ ತೋರುತ್ತಿದ್ದಿತು. ಇದರಿಂದ ನನಗೆ ವೃತ್ತಪತ್ರಿಕೆಯ ಸಂಪಾದಕನ ಜವಾಬ್ದಾರಿಯು ಮುಂದಟ್ಟಾಯಿತು. ಇದರ ಮುಖಾಂತರ ನಮ್ಮ ಜನರ ಮೇಲೆ ನನಗೆ ದೊರೆತ ಹಿಡಿತದಿಂದ ಮುಂದಿನ ಸತ್ಯಾಗ್ರಹಯುದ್ಧವನ್ನು ನಡೆಸುವದು ಸಾಧ್ಯವಾಯಿತಲ್ಲದೆ ಅದು ಘನತೆಯಿಂದ ಶೋಭಿಸಿತು ಮತ್ತು ಅದನ್ನು ಇದಿರಿಸುವದಶಕ್ಯವಾಯಿತು.

ವೃತ್ತಪತ್ರಿಕೆಯನ್ನು ನಡೆಸುವದರ ಉದ್ದೇಶವು ಜನರ ಸೇವೆಯೊಂದೇ ಆಗಿರಬೇಕೆಂಬುದು ' ಇಂಡಿಯನ್ ಒಪಿನಿಯನ 'ನ್ನು ಪ್ರಾರಂಭ ಮಾಡಿದ ಮೊದಲನೆಯ ತಿಂಗಳಲ್ಲಿಯೇ ನನ್ನ ಗೋಚರಕ್ಕೆ ಬಂದಿತು. ವರ್ತಮಾನಪತ್ರವು ಒಂದು ಪ್ರಚಂಡ ಶಕ್ತಿಯಾಗಿದೆ. ಆದರೆ ತಡೆಯಿಲ್ಲದ ನೀರಿನ ಪ್ರವಾಹವು ಹಳ್ಳಿಹಳ್ಳಿಗಳನ್ನೇ ಮುಳುಗಿಸಿ ಬೆಳೆಯನ್ನೆಲ್ಲಾ ನಾಶಮಾಡುವಂತೆ ಹಿಡಿತವಿಲ್ಲದ ಲೆಕ್ಕಣಿ

ಯು ಕೂಡ ನಾಶಕ್ಕೆ ಸಾಧನವಾಗುತ್ತದೆ. ಈ ಹಿಡಿತವು ಹೊರಗಿನಿಂದ ಬಂದರೆ ಹಿಡಿತವಿಲ್ಲದುದಕ್ಕಿಂತ ಹೆಚ್ಚು ಕೇಡನ್ನುಂಟು ಮಾಡುತ್ತದೆ. ಈ ನಿಗ್ರಹವು ಒಳಗಿನಿಂದ ಬಂದಾಗ ಮಾತ್ರ ಸಾರ್ಥಕವಾಗಬಲ್ಲುದು. ಈ ವಿಚಾರಸರಣಿಯು ಸರಿಯಾಗಿದ್ದರೆ ಈ ಪರೀಕ್ಷೆಯಲ್ಲಿ ಪ್ರಪಂಚದ ಎಷ್ಟು ವೃತ್ತಪತ್ರಗಳು ತೇರ್ಗಡೆಯಾಗುತ್ತವೆ? ಆದರೆ ಅಪ್ರಯೋಜಕವಾದವುಗಳನ್ನು ನಿಲ್ಲಿಸುವರಾರು? ಇವು ಅಪ್ರಯೋಜಕಗಳೆಂದು ನಿರ್ಧರಿಸುವರಾರು? ಪ್ರಯೋಜನಕರವಾದವುಗಳೂ ಅಪ್ರಯೋಜನಕರವಾದವುಗಳೂ ಪಾಪಪುಣ್ಯಗಳಂತೆ ಒಟ್ಟಿಗೇ ನಡೆಯುಬೇಕು. ಮನುಷ್ಯನು ಇವುಗಳಲ್ಲಿ ತನಗೆ ಬೇಕಾದುದನ್ನು ಆರಿಸಿಕೊಳ್ಳಜೇಕು.

---

೧೪

## ಕುಲಗೇರಿಯೋ ಹೊಲೆಗೇರಿಯೋ?

ನಮ್ಮ ಸಮಾಜಕ್ಕೆ ಅತ್ಯುಪಯುಕ್ತವಾದ ಸೇವೆಯನ್ನು ಮಾಡುವ ಕೆಲವು ಪಂಗಡದ ಜನರನ್ನು ನಾವು (ಹಿಂದುಗಳು) ಅಸ್ಪೃಶ್ಯರೆಂದೆಣಿಸಿ ಅವರನ್ನು ಊರಿನ ಅಥವಾ ಹಳ್ಳಿಯ ಹೊರಕ್ಕೆ ಅಟ್ಟಿದ್ದೇವೆ. ಅವರು ವಾಸಿಸುವ ಸ್ಥಳಕ್ಕೆ 'ಹೊಲೆಗೇರಿ'ಯೆಂದು ಹೆಸರು. ಈ ಹೆಸರಿಗೇ ಅಪಖ್ಯಾತಿ ಬಂದಿದೆ. ಹೀಗೆಯೇ ಕ್ರಿಸ್ತಮತಪ್ರಧಾನವಾದ ಯುರೋಪಿನಲ್ಲಿ ಒಂದು ಕಾಲದಲ್ಲಿ ಯೆಹೂದ್ಯರು ಅಸ್ಪೃಶ್ಯರೆಂದೆಣಿಸಲ್ಪಡುತ್ತಿದ್ದರು. ಅವರಿಗೆ ನಿಯತವಾದ ನಿವಾಸಸ್ಥಾನಕ್ಕೆ 'ಘೆಟ್ಟೊ' ಎಂಬ ಅಮಂಗಳ ನಾಮವಿದ್ದಿತು. ಈರೀತಿಯಾಗಿಯೇ ನಾವು ಇಂದು ದಕ್ಷಿಣ ಆಫ್ರಿಕದ ಹೊಲೆಯರಾಗಿದ್ದೇವೆ. ಆಂಡ್ರೂಸರ ಮಹಾಪ್ರಯತ್ನವೂ ಶಾಸ್ತ್ರಿಯವರ ಇಂದ್ರಜಾಲವೂ ನಮ್ಮ ಸ್ಥಿತಿಯನ್ನು ಎಷ್ಟರ ಮಟ್ಟಿಗೆ ಉತ್ತಮಗೊಳಿಸುವುವೋ ನೋಡಬೇಕು.

ಪುರಾತನಕಾಲದ ಯೆಹೂದ್ಯರು ತಾವು ದೇವರು ಆರಿಸಿದ ಜನಾಂಗವೆಂದೂ ಇತರರು ಕೀಳ್ತರದವರೆಂದೂ ತಿಳಿದಿದ್ದರು. ಇದಕ್ಕೆ ಫಲವಾಗಿ ಅವರ ಸಂತಾನಕ್ಕೆ ವಿಚಿತ್ರವಾದ ಮತ್ತು ಅನ್ಯಾಯವಾದ ಶಿಕ್ಷೆಯು ಸಂಭವಿಸಿತು. ಹೆಚ್ಚು ಕಡಿಮೆ ಇದೇ ರೀತಿಯಲ್ಲಿಯೇ ಹಿಂದುಗಳು ತಾವೇ ಆರ್ಯರು ಅಥವಾ ಸಂಸ್ಕೃತರೆಂದೂ ತಮ್ಮ ಸಮಾಜಕ್ಕೆ ಸೇರದ ಇತರರು ಅನಾರ್ಯರು ಅಥವಾ ಅಸ್ಪೃಶ್ಯರೆಂದೂ ಎಣಿಸುತ್ತಾ ಬಂದಿದ್ದಾರೆ. ಇದರ ವಿಚಿತ್ರವಾದ ಮತ್ತು ಅನ್ಯಾಯವಾದ ಫಲವನ್ನು ದಕ್ಷಿಣ ಆಫ್ರಿಕದಲ್ಲಿರುವ ಹಿಂದುಗಳಲ್ಲದೆ, ಅವರ ಬಣ್ಣವೇ ಇವರಿಗೂ ಇರುವದರಿಂದ ಮುಸಲ್ಮಾನರೂ, ಪಾರಸಿಗಳೂ, ಅನುಭವಿಸುತ್ತಿದ್ದಾರೆ.

ಈ ಪ್ರಕರಣದ ವಿಷಯವಾದ 'ಕೂಲಿ ನಿವಾಸಸ್ಥಾನ' (ಲೊಕೇಷನ್) ಎಂಬ ಮಾತಿನ ಅರ್ಥವು ಪಾಠಕರಿಗೆ ಈಗ ತಕ್ಕಮಟ್ಟಿಗೆ ತಿಳಿದಿರಬೇಕು. ದಕ್ಷಿಣ ಆಫ್ರಿಕದಲ್ಲಿ ನಾವು 'ಕೂಲಿ'ಗಳೆಂಬ ಅಶುಭವಾದ ಅಡ್ಡಹೆಸರನ್ನು ಸಂಪಾದಿಸಿದ್ದೇವೆ. ಹಿಂದುಸ್ತಾನದಲ್ಲಿ 'ಕೂಲಿ' ಎಂಬ ಮಾತಿಗೆ ಹಣಕ್ಕಾಗಿ ಸಾಮಾನುಗಳನ್ನು ಹೊತ್ತುಕೊಂಡುಹೋಗುವವನೆಂದು ಮಾತ್ರ ಅರ್ಥ. ದಕ್ಷಿಣಆಫ್ರಿಕದಲ್ಲಿ ಇದು ತುಚ್ಛತೆಯನ್ನು ಸೂಚಿಸುತ್ತದೆ. ಇಲ್ಲಿ ನಮಗೆ ಹೊಲೆಯರೂ ಅಸ್ಪೃಶ್ಯರೂ ಹೇಗೋ ಅಲ್ಲಿ 'ಕೂಲಿ'ಗಳು ಹಾಗೆ. 'ಕೂಲಿ'ಗಳ ವಾಸಕ್ಕಾಗಿ ಏರ್ಪಟ್ಟಿರುವ ಸ್ಥಳಕ್ಕೆ 'ಕೂಲಿಗೇರಿ'ಯೆಂದು ಹೆಸರು. ಜೋಹಾನ್ಸ್‌ಬರ್ಗಿನಲ್ಲಿ ಇಂತಹ ಒಂದು 'ಲೊಕೇಷನ್' ಇದ್ದಿತು. ಆದರೆ ಇತರ ಸ್ಥಳಗಳಲ್ಲಿನ 'ಲೊಕೇಷನ್'ಗಳಂತೆ ಇಲ್ಲಿ ಭಾರತೀಯರಿಗೆ ಖಾಯಂ ಒಕ್ಕಲುತನದ ಹಕ್ಕು ಇರಲಿಲ್ಲ. ಅಲ್ಲಿನ ಭಾರತೀಯರು ತಮ್ಮ ಜಾಗಗಳನ್ನು ೯೯ ವರ್ಷದ ಪಟ್ಟೆಗೆ ತೆಗೆದುಕೊಂಡಿದ್ದರು. ಈ ಸ್ಥಳದಲ್ಲಿ ಭಾರತೀಯರು ಕಿಕ್ಕಿರಿದು ತುಂಬಿದ್ದರು. ಇವರ ಸಂಖ್ಯೆಯು ಹೆಚ್ಚಿದಂತೆಲ್ಲಾ ಈ ಸ್ಥಳದ ವಿಸ್ತೀರ್ಣವೇನೂ ಹೆಚ್ಚುತ್ತಿರಲಿಲ್ಲ. ಲೊಕೇಷನಿನ ಕಕ್ಕಸಗಳನ್ನು ನೆಪಮಾತ್ರಕ್ಕೆ ಶುಚಿಮಾಡಿಸುವದರ ಏರ್ಪಾಟನ್ನು ಬಿಟ್ಟು ಆ ಊರಿನ ಪೌರಸಭೆ(ಮ್ಯುನಿಸಿಪಾಲಿಟಿ)ಯು ಇನ್ನಾವ ನೈರ್ಮಲ್ಯ ಸೌಕರ್ಯಗಳನ್ನೂ ಒದಗಿಸಿಕೊಡಲಿಲ್ಲ. ಇನ್ನು ಒಳ್ಳೆಯ ರಸ್ತೆ, ರಾತ್ರಿಯ ಹೊತ್ತು ದೀಪ, ಈ ಏರ್ಪಾಟು ಎಲ್ಲಿಂದ ಬಂದೀತು? ಜನರ ಆರೋಗ್ಯಾಭಿವೃದ್ಧಿಯ ಕಡೆ ಅಲಕ್ಷ್ಯದಿಂದಿರುವಾಗ ಅವರ ಆರೋಗ್ಯರಕ್ಷಣೆಗೆ ಪೌರಸಭೆಯು ಏರ್ಪಾಟು ಮಾಡುವುದೆಂದು ನಿರೀಕ್ಷಿಸುವದು ಹೇಗೆ? ಪೌರಸಭೆಯ ಸಹಾಯ ಅಥವಾ ಮೇಲ್ವಿಚಾರಣೆಯಿಲ್ಲದೆ ನಿರ್ವಹಿಸುವಷ್ಟು ಅಲ್ಲಿದ್ದ ಭಾರತೀಯರಿಗೆ ನಗರನೈರ್ಮಲ್ಯದ ಮತ್ತು ಆರೋಗ್ಯರಕ್ಷಣೆಯ ತಿಳಿವು ಇರಲಿಲ್ಲ. ಅಲ್ಲಿ ಹೋಗಿದ್ದ ಭಾರತೀಯರೆಲ್ಲರೂ ರಾಬಿನ್‌ಸನ್ ಕ್ರೂಸೋವಿ

ನಂತಹ ಸ್ವಾವಲಂಬನಶಿರೋಮಣಿಗಳಾಗಿದ್ದರೆ ಅವರ ಕತೆಯೇ ಬೇರೆಯಾಗಿರುತ್ತಿದ್ದಿತು. ಆದರೆ ಇಂತಹ ಮಹಾಪುರುಷರು ಹೂಡಿದ ಸ್ವಾಸ್ಥ್ಯವೊಂದೂ ನಮಗೆ ಗೊತ್ತಿಲ್ಲ. ಸಾಮಾನ್ಯವಾಗಿ ಜನರು ಧನದ ಸಲುವಾಗಿಯಾಗಲಿ ಉದ್ಯೋಗದ ಸಲುವಾಗಿಯಾಗಲಿ ವಿದೇಶಕ್ಕೆ ಹೋಗುತ್ತಾರೆ. ದಕ್ಷಿಣ ಆಫ್ರಿಕಕ್ಕೆ ಹೋಗಿದ್ದ ಭಾರತೀಯರಲ್ಲಿ ಹೆಚ್ಚುಭಾಗ ತಿಳುವಳಿಕೆಯಿಲ್ಲದ, ನಿರ್ಗತಿಕ ರೈತರಾಗಿದ್ದರು. ಆದರಪೂರ್ವಕವಾದ ರಕ್ಷಣೆಯು ಎಷ್ಟು ದೊರಕುವುದೋ ಅಷ್ಟು ಅವರಿಗೆ ಆವಶ್ಯಕವಾಗಿದ್ದಿತು. ಬಹು ಸ್ವಲ್ಪ ಜನ ವ್ಯಾಪಾರಿಗಳೂ ಸುಶಿಕ್ಷಿತ ಭಾರತೀಯರೂ ಅವರನ್ನು ಹಿಂಬಾಲಿಸಿದ್ದರು.

ಪೌರಸಭೆಯ ಅಕ್ಷಮ್ಯವಾದ ತಾತ್ಸಾರವೂ ಅಲ್ಲಿ ನೆಲೆಸಿದ್ದ ಭಾರತೀಯರ ಅಜ್ಞಾನವೂ ಒಟ್ಟುಗೂಡಿ ಆ 'ಲೊಕೇಷನ'ನ್ನು ಕೇವಲ ಅಶುಚಿಯಾಗಿ ಮಾಡಿದುವು. ಪೌರಸಭೆಯು ಲೊಕೇಷನಿನ ಸ್ಥಿತಿಯನ್ನು ಉತ್ತಮಗೊಳಿಸುವದು ಹಾಗಿರಲಿ, ತನ್ನ ಅಶ್ರದ್ಧೆಯಿಂದಲೇ ಉಂಟಾದ ಕೊಳಕನ್ನು ನೆಪಮಾಡಿಕೊಂಡು 'ಲೊಕೇಷನ'ನ್ನು ನಾಶಮಾಡಬೇಕೆಂದು ಯೋಚಿಸಿ ಇದಕ್ಕಾಗಿ ಸ್ಥಳೀಯ ಕಾಯಿದೆ ಮಂಡಲದಿಂದ ಅಲ್ಲಿ ನೆಲೆಸಿದ್ದ ಭಾರತೀಯರನ್ನು ಅಲ್ಲಿಂದ ಓಡಿಸಲು ಅಪ್ಪಣೆ ಪಡೆಯಿತು. ನಾನು ಜೋಹಾನ್ಸ್‌ಬರ್ಗಿನಲ್ಲಿ ನೆಲೆಸಿದಾಗ ಅಲ್ಲಿನ ಪರಿಸ್ಥಿತಿಯು ಈ ರೀತಿಯಾಗಿದ್ದಿತು.

ತಮ್ಮ ಜಾಗದ ಮೇಲೆ ಈ ಭಾರತೀಯರಿಗೆ ಹಕ್ಕಿದ್ದುದರಿಂದ ಅವರಿಗೆ ನಷ್ಟಪೂರ್ತಿಯನ್ನು ಹೊಂದುವ ಅಧಿಕಾರವಿದ್ದಿತು. ಈ ನಷ್ಟಪೂರ್ತಿಯ ಮೊಕದ್ದಮೆಗಳ ತೀರ್ಮಾನಕ್ಕೋಸುಗ ಒಂದು ಪ್ರತ್ಯೇಕ ನ್ಯಾಯಸ್ಥಾನವು ಏರ್ಪಾಟಾಯಿತು. ಪೌರಸಭೆಯು ಕೊಡುವ ನಷ್ಟಪೂರ್ತಿಗೆ ಜಾಗದ ಪಟ್ಟೆದಾರನು ಒಪ್ಪಲು ಸಿದ್ಧ

ನಾಗಿಲ್ಲದಿದ್ದರೆ ಈ ನ್ಯಾಯಸ್ಥಾನಕ್ಕೆ ಅರ್ಜಿ ಹಾಕುವ ಅಧಿಕಾರವು ಅವನಿಗಿದ್ದಿತು. ಅದರ ತೀರ್ಮಾನದಂತೆ ಅವನಿಗೆ ಒದಗಬೇಕಾದ ಹಣವು ಪೌರಸಭೆಯು ಒಪ್ಪಿದುದಕ್ಕಿಂತ ಹೆಚ್ಚಾದರೆ ಪೌರಸಭೆಯೇ ಮೊಕದ್ದಮೆಯ ವೆಚ್ಚವನ್ನು ವಹಿಸಬೇಕಾಗುತ್ತಿದ್ದಿತು.

ಈ ಪಟ್ಟೇದಾರರಲ್ಲಿ ಹೆಚ್ಚು ಜನರೆಲ್ಲಾ ನನ್ನನ್ನೇ ತಮ್ಮ ವಕೀಲನನ್ನಾಗಿ ಗೊತ್ತುಮಾಡಿಕೊಂಡಿದ್ದರು. ಈ ಮೊಕದ್ದಮೆಗಳಿಂದ ಹಣ ಸಂಪಾದಿಸಬೇಕೆಂದು ನನಗೇನೂ ಇಚ್ಛೆಯಿರಲಿಲ್ಲವಾದುದರಿಂದ ನಾನು ಈ ಕಕ್ಷಿಗಾರರಿಗೆ '' ನೀವು ಗೆದ್ದರೆ ನ್ಯಾಯಸ್ಥಾನದವರು ಕೊಡುವ ಖರ್ಚು ಮತ್ತು ಪ್ರತಿಯೊಂದು ಪಟ್ಟೆಗೂ, ನೀವು ಗೆಲ್ಲಲಿ, ಸೋಲಲಿ, ೧೦ ಪೌಂಡು ರುಸುಮೂ ನನಗೆ ಸಾಕು. ನೀವು ನನಗೆ ಕೊಡುವ ಹಣದಲ್ಲಿ ಅರ್ಧವನ್ನು ಬಡವರಿಗೆ ವೈದ್ಯಶಾಲೆಯನ್ನು ಕಟ್ಟಿಸುವದಕ್ಕೇ ಆಗಲಿ ಅಥವಾ ಇನ್ನಾವದಾದರೂ ಬಡವರಿಗೆ ಉಪಯೋಗವುಳ್ಳ ಕೆಲಸಕ್ಕೇ ಆಗಲಿ ತೆಗೆದಿಡುತ್ತೇನೆ.'' ಎಂದು ಹೇಳಿದೆನು. ಇದರಿಂದ ಸಹಜವಾಗಿ ಅವರೆಲ್ಲರಿಗೂ ಸಂತೋಷವಾಯಿತು.

ಸುಮಾರು ೭೦ ಮೊಕದ್ದಮೆಗಳಲ್ಲಿ ಒಂದರಲ್ಲಿ ಮಾತ್ರ ಸೋಲಾಯಿತು. ಆದುದರಿಂದ ನನಗೆ ಬಂದ ರುಸುಮು ಒಟ್ಟಿನಲ್ಲಿ ಹೆಚ್ಚಾಗಿಯೇ ಇದ್ದಿತು. ಆದರೆ 'ಇಂಡಿಯನ್ ಒಪಿನಿಯನ್' ಪತ್ರಿಕೆಗೆ ಹಣದ ಆವಶ್ಯಕತೆಯು ಎಂದಿನಂತೆ ಇದ್ದೇ ಇದ್ದಿತು. ನನಗೆ ಜ್ಞಾಪಕವಿರುವಮಟ್ಟಿಗೆ ಅದು ೧,೬೦೦ ಪೌಂಡುಗಳನ್ನು ನುಂಗಿತು.

ನಾನು ಈ ಮೊಕದ್ದಮೆಗಳಿಗೆ ಶ್ರಮಪಟ್ಟು ಕೆಲಸ ಮಾಡಿದೆನು. ಕಕ್ಷಿಗಾರರು ಯಾವಾಗಲೂ ನನ್ನ ಸುತ್ತ ಮುತ್ತಿಕೊಂಡೇ ಇರುತ್ತಿದ್ದರು. ಇವರಲ್ಲಿ ಹೆಚ್ಚು ಭಾಗ ಬಿಹಾರ ಮತ್ತು ಅದರ ಹತ್ತಿರದ ಪ್ರದೇಶದಿಂದಲೂ

ದಕ್ಷಿಣ ಭಾರತದಿಂದಲೂ ಕರಾರುಕೂಲಿಗಾರರಾಗಿ ಬಂದು ಆಮೇಲೆ ಸ್ವಾತಂತ್ರ್ಯವನ್ನು ಗಳಿಸಿದವರಾಗಿದ್ದರು. ಇವರು ತಮಗೆ ಮಾತ್ರ ಅನ್ವಯಿಸುತ್ತಿದ್ದ ದುಃಖಗಳ ನಿವಾರಣೆಗೋಸ್ಕರ ಒಂದು ಸಂಘವನ್ನೇರ್ಪಡಿಸಿಕೊಂಡಿದ್ದರು. ಇದು ಸ್ವತಂತ್ರ ವ್ಯಾಪಾರಿಗಳ ಮಂಡಲಿಯಿಂದ ಬೇರೆಯಾಗಿದ್ದಿತು. ಇವರಲ್ಲಿ ಕೆಲವರು ಸರಳಸ್ವಭಾವದ ಉದಾರಮನಸ್ಸಿನ ಸುಚರಿತ್ರರಾದ ಮನುಷ್ಯರಾಗಿದ್ದರು. ಶ್ರೀ ಜಯರಾಮಸಿಂಹ ಮತ್ತು ಶ್ರೀ ಬದರಿ ಇವರೇ ಈ ಜನರ ಮುಂದಾಳುಗಳಾಗಿದ್ದರು. ಮೊದಲನೆಯವರು ಈ ಸಂಘದ ಅಧ್ಯಕ್ಷರು. ಎರಡನೆಯವರು ಅಧ್ಯಕ್ಷರಲ್ಲದಿದ್ದರೂ ಅವರಷ್ಟೇ ಯೋಗ್ಯರಾಗಿದ್ದರು. ಇಬ್ಬರೂ ಈಗ ಬದುಕಿಲ್ಲ. ಇಬ್ಬರಿಂದಲೂ ನನಗೆ ಅತ್ಯಂತ ಸಹಾಯವಾಯಿತು. ಶ್ರೀ ಬದರಿಯುವರಿಗೂ ನನಗೂ ನಿಕಟ ಸಂಬಂಧ ಬೆಳೆದು ಅವರು ಸತ್ಯಾಗ್ರಹದಲ್ಲಿ ಮುಖ್ಯ ಭಾಗವನ್ನು ವಹಿಸಿದರು. ಈ ಮತ್ತು ಇತರ ಮಿತ್ರರ ಮೂಲಕ ನನಗೆ ಅಲ್ಲಿ ನೆಲೆಸಿದ್ದ ಉತ್ತರ ಹಾಗೂ ದಕ್ಷಿಣ ಭಾರತದ ಅನೇಕ ಮಂದಿಯೊಡನೆ ಗಾಢವಾದ ಪರಿಚಯವುಂಟಾಯಿತು. ನಾನು ಅವರ ವಕೀಲನಾಗಿರುವದಕ್ಕಿಂತ ಹೆಚ್ಚಾಗಿ ಅವರ ಸಹೋದರನಾಗಿದ್ದು ಅವರ ಸ್ವಂತ ದುಃಖಗಳಲ್ಲಿಯೂ ಒಟ್ಟಾಗಿ ಒದಗಿದ ಸಂಕಟಗಳಲ್ಲಿಯೂ ಭಾಗಿಯಾದೆನು.

ಅಲ್ಲಿನ ಭಾರತೀಯರು ನನ್ನನ್ನು ಹೇಗೆ ಕರೆಯುತ್ತಿದ್ದರೆಂಬುದು ಕುತೂಹಲದ ವಿಷಯವಾಗಿರಬಹುದು. ಸೇಠ್ ಅಬ್ದುಲ್ಲಾರವರು ನನ್ನನ್ನು 'ಗಾಂಧೀ' ಎಂದು ಕರೆಯಲು ಒಪ್ಪಲಿಲ್ಲ. ಯಾರೂ ನನ್ನನ್ನು 'ಸಾಹೇಬ್' (ಸ್ವಾಮಿ) ಎಂದು ಕರೆದಾಗಲೀ ಎಣಿಸಿಯಾಗಲೀ ಅವಮಾನಪಡಿಸಲಿಲ್ಲ. ಅಬ್ದುಲ್ಲಾ ಸೇಠರು ಸೊಗಸಾದ ಒಂದು ಹೆಸರನ್ನು ಕಂಡುಹಿಡಿದರು— 'ಭಾಯೀ' (ಸಹೋದರ) ಎಂದು. ಇತರರೂ ಅವರನ್ನು

ಅನುಸರಿಸಿ ನಾನು ದಕ್ಷಿಣ ಆಫ್ರಿಕವನ್ನು ಬಿಡುವವರೆಗೂ ನನ್ನನ್ನು 'ಭಾಯಿಸಾ' ಎಂದು ಕರೆಯುತ್ತಿದ್ದರು. ಆದರೆ ಕರಾರುಕೂಲಿಯಿಂದ ಬಿಡುಗಡೆ ಹೊಂದಿದ್ದ ಭಾರತೀಯರು ನನ್ನನ್ನು 'ಭಾಯಿಸಾ' ಎಂದು ಕರೆದಾಗ ಅದರಲ್ಲಿ ಇನ್ನೂ ಹೆಚ್ಚಾದ ಮಾಧುರ್ಯವಿರುತ್ತಿದ್ದಿತು.

---

೧೫

# ಮಹಾಮಾರಿ—೧

ಪೌರಸಭೆಯು ಲೊಕೇಷನಿನ ಪೂರ್ಣ ಸ್ವಾತಂತ್ರ್ಯವನ್ನು ಪಡೆದೊಡನೆಯೇ ಭಾರತೀಯರನ್ನು ಅಲ್ಲಿಂದ ಹೊರಡಿಸಲಿಲ್ಲ. ಇವರನ್ನು ಓಡಿಸುವದಕ್ಕೆ ಮುಂಚೆ ಇವರಿಗೆ ಬೇರೆ ಅನುಕೂಲವಾದ ಜಾಗವನ್ನು ಒದಗಿಸಿಕೊಡಬೇಕಾಗಿದ್ದಿತು. ಪೌರಸಭೆಗೆ ಇದು ಸುಲಭಸಾಧ್ಯವಾಗಿರಲಿಲ್ಲವಾದುದರಿಂದ ಆ 'ಕೊಳೆಯ' ಲೋಕೇಷನಿನಲ್ಲಿಯೇ ಇರಲು ಭಾರತೀಯರಿಗೆ ಅವಕಾಶ ದೊರೆಯಿತು. ವ್ಯತ್ಯಾಸವೇನೆಂದರೆ ಅವರ ಸ್ಥಿತಿಯು ಮೊದಲಿಗಿಂತಲೂ ಕೀಳಾಯಿತು. ಮಾಲಿಕರಾಗಿದ್ದುದರ ಬದಲು ಈಗ ಅವರು ಪೌರಸಭೆಯ ಬಾಡಿಗೆದಾರರಾದರು. ಇದರ ಫಲವಾಗಿ ಇವರಿಗಿದ್ದ ಜಾಗವು ಎಂದಿಗಿಂತ ಕೊಳಕಾಯಿತು. ಇವರು ಮಾಲಿಕರಾಗಿದ್ದಾಗ ಕಾನೂನಿನ ಭಯಕ್ಕಾದರೂ ತಮ್ಮ ಜಾಗವನ್ನು ತಕ್ಕಮಟ್ಟಿಗೆ ಶುಚಿಯಾಗಿಟ್ಟುಕೊಂಡಿರಬೇಕಾಗಿದ್ದಿತು. ಆದರೆ ಪೌರಸಭೆಗೆ ಯಾರ ಭಯ? ಬಾಡಿಗೆದಾರರ ಸಂಖ್ಯೆಯು ಹೆಚ್ಚಿತು; ಅದರ ಜೊತೆಗೇ ಹೊಲಸೂ ಅವ್ಯವಸ್ಥೆಯೂ ಜಾಸ್ತಿಯಾದುವು.

ಭಾರತೀಯರು ಈ ಪರಿಸ್ಥಿತಿಯ ವಿಚಾರವಾಗಿ ಒದ್ದಾಡುತ್ತಿರುವಾಗ ಇದ್ದಕ್ಕಿದ್ದ ಹಾಗೆಯೇ ಮಹಾಮಾರಿಯು ಕಾಣಿಸಿಕೊಂಡಿತು. ಇದು ಶ್ವಾಸಕೋಶವನ್ನು ಕೆಡಿಸುವ ಪ್ಲೇಗಾಗಿದ್ದಿತು—ಗಂಟುಬೇನೆಗಿಂತಲೂ ಹೆಚ್ಚು ಭಯಂಕರವೂ ಪ್ರಾಣಹಾನಿಕರವೂ ಆದುದು.

ಸದ್ಭಾಗ್ಯವಶಾತ್ ಜೋಹಾನ್ಸ್‌ಬರ್ಗಿನ ಹತ್ತಿರ ಇದ್ದ ಚಿನ್ನದ ಗಣಿಗಳಲ್ಲೊಂದು ಈ ರೋಗಕ್ಕೆ ಕಾರಣವಾಗಿದ್ದಿತೇ ವಿನಾ

ಲೊಕೇಷನ್ ಕಾರಣವಾಗಿರಲಿಲ್ಲ. ಈ ಗಣಿಯ ಕೆಲಸಗಾರರಲ್ಲಿ ಹೆಚ್ಚುಮಂದಿ ನೀಗ್ರೋ ಜನರಾಗಿದ್ದರು. ಇವರು ಶುಚಿಯಾಗಿರುವದರ ಜವಾಬ್ದಾರಿಯು ಇವರ ಬಿಳಿಯ ಯಜಮಾನರ ಮೇಲೆಯೇ ಇದ್ದಿತು. ಈ ಗಣಿಯಲ್ಲಿ ಕೆಲವು ಮಂದಿ ಭಾರತೀಯರೂ ಕೆಲಸ ಮಾಡುತ್ತಿದ್ದರು. ಇವರಲ್ಲಿ ೨೩ ಜನರಿಗೆ ಇದ್ದಕ್ಕಿದ್ದ ಹಾಗೆಯೇ ಜಡ್ಡು ಸೋಂಕಿ ಒಂದು ದಿನ ಸಂಜೆ ಅವರು ಪ್ರಬಲಿಸಿದ ರೋಗದಿಂದ ನರಳುತ್ತಾ ಲೊಕೇಷನಿನಲ್ಲಿದ್ದ ತಮ್ಮ ಮನೆಗಳಿಗೆ ಬಂದರು. ಆಗ 'ಇಂಡಿಯನ್ ಒಪಿನಿಯನ್'ಗೆ ಚಂದಾದಾರರನ್ನು ಕೂಡಿಸುತ್ತಲೂ ಚಂದಾ ಹಣವನ್ನು ವಸೂಲುಮಾಡುತ್ತಲೂ ಓಡಾಡುತ್ತಿದ್ದ ಶ್ರೀ ಮದನಜಿತರು ಇದೇ ಹೊತ್ತಿನಲ್ಲಿ ಲೊಕೇಷನಿಗೆ ಬಂದಿದ್ದರು. ಅವರು ವಿಶೇಷ ನಿರ್ಭಯದ ಮನುಷ್ಯರಾಗಿದ್ದರು. ಉಗ್ರವ್ಯಾಧಿಗೆ ತುತ್ತಾಗಿದ್ದ ಈ ರೋಗಿಗಳನ್ನು ಕಂಡು ಅವರ ಹೃದಯವು ದುಃಖದಿಂದ ಕುದಿಯಿತು. ಅವರು ಸೀಸದ ಕಡ್ಡಿಯಲ್ಲಿ ಒಂದು ಚೀಟಿಯನ್ನು ಬರೆದು ನನಗೆ ಕಳುಹಿಸಿದರು. ಅದರ ಆಶಯವೇನೆಂದರೆ :—

"ಇಲ್ಲಿ ಇದ್ದಕ್ಕಿದ್ದಹಾಗೆಯೇ ಪ್ಲೇಗು ಪ್ರಾರಂಭವಾಗಿದೆ. ನೀವು ಇಲ್ಲಿಗೆ ಒಡನೆಯೇ ಬಂದು ಸತ್ವರವಾಗಿ ತಕ್ಕ ಏರ್ಪಾಟನ್ನು ಮಾಡಬೇಕು. ಇಲ್ಲದಿದ್ದರೆ ನಾವು ಭಯಂಕರ ಪರಿಣಾಮಕ್ಕೆ ಸಿದ್ಧರಾಗಿರಬೇಕಾಗುತ್ತದೆ. ತಕ್ಷಣವೇ ಬನ್ನಿ."

ಶ್ರೀ ಮದನಜಿತರು ಒಂದು ಖಾಲಿ ಮನೆಯ ಬೀಗವನ್ನು ಧೈರ್ಯದಿಂದ ಒಡೆದು ರೋಗಿಗಳನ್ನು ಅದರಲ್ಲಿ ಇಟ್ಟಿದ್ದರು. ನಾನು ಲೊಕೇಷನಿಗೆ ಬೈಸಿಕಲಿನ ಮೇಲೆ ಹೋಗಿ ಅಲ್ಲಿಂದ ಪೌರಸಭೆಯ ಗುಮಾಸ್ತೆಗೆ ನಾವು ಆ ಮನೆಯನ್ನು ವಶಕ್ಕೆ ತೆಗೆದುಕೊಂಡ ಸಂದರ್ಭವನ್ನು ತಿಳಿಸಿ ಕಾಗದವನ್ನು ಬರೆದೆನು.

ಜೋಹಾನ್ಸ್‌ಬರ್ಗಿನಲ್ಲಿ ವೈದ್ಯವೃತ್ತಿಯಲ್ಲಿದ್ದ ಡಾ. ವಿಲಿಯಮ್ ಗಾಡ್‌ಫ್ರೆಯರು ವರ್ತಮಾನವು ತಿಳಿದೊಡನೆಯೇ ನಮ್ಮ

ಸಹಾಯಕ್ಕೆ ಓಡಿಬಂದು ರೋಗಿಗಳ ದೇಹಸ್ಥಿತಿಯನ್ನು ಪರೀಕ್ಷೆ ಮಾಡುವದಷ್ಟೇ ಅಲ್ಲದೆ ಅವರ ಶುಶ್ರೂಷೆಯನ್ನೂ ಮಾಡ ತೊಡಗಿದರು. ಆದರೆ ಇಪ್ಪತ್ತುಮೂರು ಜನ ರೋಗಿಗಳನ್ನು ನೋಡಿಕೊಳ್ಳುವದು ನಮ್ಮ ಮೂರು ಜನರಿಂದ ಮಾತ್ರವೇ ಆಗು ವಂತಿರಲಿಲ್ಲ.

ನಿರ್ಮಲಹೃದಯವೊಂದಿದ್ದರೆ ಆಪತ್ತಿನ ಜೊತೆಗೆ ಅದನ್ನು ಇದಿರಿಸುವದಕ್ಕೆ ತಕ್ಕ ಜನರೂ ವ್ಯವಸ್ಥೆಯೂ ಒದಗುವುದೆಂದು ನನ್ನ ಅನುಭವಸಿದ್ಧವಾದ ಮತ. ಆ ಸಮಯದಲ್ಲಿ ನನ್ನ ಕಚೇರಿ ಯಲ್ಲಿ ನಾಲ್ಕು ಜನ ಭಾರತೀಯರಿದ್ದರು. ಶ್ರೀ ಕಲ್ಯಾಣ ದಾಸ್, ಮಾಣಿಕಲಾಲ್ ಮತ್ತು ಗುಣವಂತರಾಯ್ ದೇಶಾಯ್, ಇವರು ಮೂವರು. ಉಳಿದೊಬ್ಬರ ಹೆಸರು ನನ್ನ ನೆನಪಿಗೆ ಬರು ವದಿಲ್ಲ. ಕಲ್ಯಾಣದಾಸನನ್ನು ಅವರ ತಂದೆಯು ನನ್ನಲ್ಲಿ ಭರವಸೆ ಯಿಟ್ಟು ನನ್ನ ಬಳಿಗೆ ಕಳಿಸಿದ್ದರು. ಕಲ್ಯಾಣದಾಸನಿಗಿಂತ ಉಪಕಾರಶೀಲರಾದ ಮತ್ತು ಮಾತಿಲ್ಲದೆ ಆಜ್ಞೆಯನ್ನು ಪಾಲಿ ಸುವ ಮಂದಿಯನ್ನು ನಾನು ದಕ್ಷಿಣ ಆಫ್ರಿಕವಲ್ಲಿ ಕಂಡುದೇ ಅಪೂರ್ವ. ಅದೃಷ್ಟವಶಾತ್ ಅವನಿಗೆ ಆಗ ಇನ್ನೂ ಮದುವೆ ಯಾಗಿರಲಿಲ್ಲ. ಆದುದರಿಂದ ನಾನು ಅವನನ್ನು ಎಷ್ಟು ಅಪಾಯ ವಾದ ಕಾರ್ಯಗಳಿಗೇ ಆಗಲಿ ಕಳುಹಿಸಲು ಹಿಂತೆಗೆಯುತ್ತಿರಲಿಲ್ಲ. ಮಾಣಿಕಲಾಲನು ನನಗೆ ಜೋಹಾನ್ಸ್‌ಬರ್ಗಿನಲ್ಲಿ ದೊರಕಿದ್ದನು. ನನಗೆ ನೆನಪಿರುವಮಟ್ಟಿಗೆ ಅವನಿಗೂ ಮದುವೆಯಾಗಿರಲಿಲ್ಲ. ಈ ನಾಲ್ಕು ಜನರನ್ನೂ—ಅವರನ್ನು ನನ್ನ ಗುಮಾಸ್ತರೆನ್ನಿರಿ, ಜೊತೆ ಗಾರರೆನ್ನಿರಿ ಅಥವಾ ಮಕ್ಕಳೆನ್ನಿರಿ—ಆಹುತಿ ಕೊಡಲು ನಾನು ನಿಶ್ಚಯಿಸಿದೆನು. ಕಲ್ಯಾಣದಾಸನನ್ನು ಕೇಳುವ ಅಗತ್ಯವೇ ಇರಲಿಲ್ಲ. ಇತರರನ್ನು ಕೇಳಿದೊಡನೆಯೇ ಅವರು ತಮ್ಮ ಸಿದ್ಧತೆ ಯನ್ನು ವ್ಯಕ್ತಪಡಿಸಿದರು. "ನೀವು ಎಲ್ಲೋ ನಾವೂ ಅಲ್ಲೇ" ಎಂಬುದೇ ಅವರ ಸಂಕ್ಷೇಪವಾದ, ಅದರೂ ಮಧುರವಾದ, ಉತ್ತರವಾಗಿದ್ದಿತು.

ಎಂ. ರಿಚ್‌ರವರಿಗೆ ದೊಡ್ಡ ಸಂಸಾರವಿದ್ದಿತು. ಅವರೇನೋ ಅಪಾಯದ ಉದ್ಯಮದೊಳಕ್ಕೆ ಧುಮುಕಲು ಸಿದ್ಧರಾಗಿದ್ದರು. ಆದರೆ ನಾನು ಅವರನ್ನು ತಡೆದೆನು. ಅವರನ್ನು ಅಪಾಯಕ್ಕೆ ಗುರಿಮಾಡಲು ನನ್ನ ಮನಸ್ಸು ಒಡಂಬಡಲಿಲ್ಲ. ಆದುದರಿಂದ ಅವರು ಅಪಾಯರೇಖೆಯ ಹೊರಗಿನ ಕೆಲಸವನ್ನು ನೋಡಿಕೊಳ್ಳುತ್ತಿದ್ದರು.

ಅದು ಭಯಂಕರವಾದ ರಾತ್ರಿಯಾಗಿದ್ದಿತು—ಆ ಜಾಗರಣೆಯ ಶುಶ್ರೂಷೆಯ ರಾತ್ರಿ. ನಾನು ಇದಕ್ಕೆ ಹಿಂದೆ ಅನೇಕ ರೋಗಿಗಳ ಸೇವೆಯನ್ನು ಮಾಡಿದ್ದೆನು. ಆದರೆ ಪ್ಲೇಗಿನಿಂದ ನರಳುವ ರೋಗಿಗಳನ್ನು ಉಪಚರಿಸಿದುದು ಇದೇ ಮೊದಲಾಗಿದ್ದಿತು. ಡಾ. ಗಾಡ್‌ಫ್ರೆಯವರ ಧೈರ್ಯವು ನಮಗೂ ಹರಡಿತು. ರೋಗಿಗಳಿಗೆ ಅಷ್ಟೇನೂ ಶುಶ್ರೂಷೆ ಮಾಡಬೇಕಾಗಿರಲಿಲ್ಲ. ಅವರಿಗೆ ಹೊತ್ತು ಹೊತ್ತಿಗೆ ಔಷಧವನ್ನು ಕೊಡುವದು, ಅವರಿಗೆ ಬೇಕಾದುದನ್ನು ನೋಡಿಕೊಳ್ಳುವದು, ಅವರ ಶರೀರಗಳನ್ನೂ ಹಾಸಿಗೆಗಳನ್ನೂ ಶುಚಿಯಾಗಿಟ್ಟುಕೊಂಡಿರುವದು ಮತ್ತು ಅವರಿಗೆ ಧೈರ್ಯಹೇಳುವದು—ಇಷ್ಟೇ ನಾವು ಮಾಡಬೇಕಾಗಿದ್ದುದು. ಸ್ವಲ್ಪವೂ ಬೇಸರವಿಲ್ಲದೆ ನಿರ್ಭಯವಾಗಿ ಈ ಯುವಕರು ಮಾಡುತ್ತಿದ್ದ ಸೇವೆಯಿಂದ ನನಗೆ ಉಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಡಾ. ಗಾಡ್‌ಫ್ರೆಯವರ ಧೈರ್ಯವನ್ನು ತಿಳಿದುಕೊಳ್ಳಬಹುದಾಗಿದ್ದಿತು. ಹೆಚ್ಚಾದ ಅನುಭವವುಳ್ಳ ಶ್ರೀ ಮದನಜಿತರಂತಹ ಮನುಷ್ಯರ ಧೈರ್ಯವನ್ನು ಅರ್ಥಮಾಡಿಕೊಳ್ಳಬಹುದಾಗಿದ್ದಿತು. ಆದರೆ ಈ ಅರಿಯದ ತರುಣರ ಮನೋವೃತ್ತಿಗೇನೆನ್ನಬೇಕು ?

ನನಗೆ ನೆನಪಿರುವಮಟ್ಟಿಗೆ ಆ ರಾತ್ರಿಯನ್ನು ಒಂದು ಪ್ರಾಣವೂ ನಷ್ಟವಾಗದಂತೆ ಕಳೆದೆವು,

ಈ ಪ್ರಸಂಗವೆಲ್ಲಾ ಕರುಣಾಜನಕವಾಗಿರುವದಲ್ಲದೆ ಇದು ಎಷ್ಟು ಚಿತ್ತಾಕರ್ಷಕವಾಗಿಯೂ ಮತ್ತು ನನಗೆ ಧಾರ್ಮಿಕ ದೃಷ್ಟಿಯಿಂದ ಬೆಲೆಯುಳ್ಳದೂ ಆಗಿದೆಯೆಂದರೆ ಈ ವಿಷಯಕ್ಕೆ ಮುಂದಿನ ಎರಡು ಅಧ್ಯಾಯಗಳನ್ನಾದರೂ ಕೊಡಬೇಕು.



೧೬

# ಮಹಾಮಾರಿ—೨

ಖಾಲೀ ಮನೆಯನ್ನು ವಶಕ್ಕೆ ತೆಗೆದುಕೊಂಡು ರೋಗಿಗಳನ್ನು ನೋಡಿಕೊಂಡುದಕ್ಕಾಗಿ ನನಗೆ ಪೌರಸಭೆಯ ಗುಮಾಸ್ತೆಯು ಕೃತಜ್ಞತೆಯನ್ನು ವ್ಯಕ್ತಪಡಿಸಿ ಇದ್ದಕ್ಕಿದ್ದಹಾಗೆಯೇ ಒದಗಿದ ಇಂತಹ ಸಂದರ್ಭವನ್ನು ಒಡನೆಯೇ ಇದಿರುಗೊಳ್ಳಲು ಪೌರಸಭೆಯ ಕೈಯಲ್ಲಿ ಯಾವ ಸಾಧನವೂ ಇಲ್ಲವೆಂದೂ ಆದರೆ ಅದು ತನ್ನ ಕೈಯಲ್ಲಾದ ಸಹಾಯವನ್ನೆಲ್ಲಾ ಮಾಡುವುದೆಂದೂ ನಿಷ್ಕಪಟವಾಗಿ ಒಪ್ಪಿಕೊಂಡರು. ತನ್ನ ಕರ್ತವ್ಯವೇನೆಂದು ತಿಳಿದೊಡನೆಯೇ ಪೌರಸಭೆಯು ಕೆಲಸಕ್ಕೇಳಲು ತಡಮಾಡಲಿಲ್ಲ.

ಮರುದಿನ ಒಂದು ಗಡಂಗನ್ನು ನನ್ನ ವಶಕ್ಕೆ ಕೊಟ್ಟು ರೋಗಿಗಳನ್ನು ಅಲ್ಲಿಗೆ ಸಾಗಿಸಬೇಕೆಂದು ಸೂಚಿಸಿದರು. ಆದರೆ ಆ ಸ್ಥಳವನ್ನು ಶುಚಿಮಾಡುವ ಭಾರವನ್ನು ಪೌರಸಭೆಯು ಹೊತ್ತುಕೊಳ್ಳಲಿಲ್ಲ. ಆ ಕಟ್ಟಡವು ಒಪ್ಪವಿಲ್ಲದೆಯೂ ಕೊಳಕಾಗಿಯೂ ಇದ್ದಿತು. ನಾವೇ ಅದನ್ನು ಶುಚಿಮಾಡಿದೆವು. ಉದಾರಹೃದಯರಾದ ಭಾರತೀಯರ ಸಹಾಯದಿಂದ ಕೆಲವು ಹಾಸಿಗೆಗಳನ್ನೂ ಇತರ ಆವಶ್ಯಕವಾದ ಪದಾರ್ಥಗಳನ್ನೂ ಒಟ್ಟುಗೂಡಿಸಿ ತಾತ್ಕಾಲಿಕ ಕೆಲಸಕ್ಕೆ ಒಂದು ವೈದ್ಯಶಾಲೆಯನ್ನು ತೆಗೆದೆವು. ಪೌರಸಭೆಯವರು ಒಬ್ಬ ದಾದಿ (ನರ್ಸ್)ಯನ್ನು ಕಳುಹಿಸಿದರು. ಆಕೆಯು ಬ್ರಾಂದಿ ಮತ್ತು ಇತರ ರೋಗೋಪಚಾರವಸ್ತುಗಳನ್ನು ತೆಗೆದು ಕೊಂಡು ಬಂದಳು. ಡಾ. ಗಾಡ್‌ಫ್ರೆಯವರೇ ಇನ್ನೂ ಉಸ್ತುವಾರಿಯಲ್ಲಿದ್ದರು.

ದಾದಿಯು ದಯಾಹೃದಯುಳು. ಆಕೆಯು ಸಂತೋಷದಿಂದ ರೋಗಿಗಳ ಬಳಿಗೆ ಹೋಗಲು ಸಿದ್ಧಳಾಗಿದ್ದರೂ ಆಕೆಗೆ ಸೋಂಕು ತಗಲೀತೆಂಬ ಭಯದಿಂದ ನಾವು ಆಕೆಯನ್ನು ಸಾಮಾನ್ಯವಾಗಿ ಅವರ ಬಳಿಗೆ ಹೋಗಿ ಶುಶ್ರೂಷೆ ಮಾಡಲು ಬಿಡುತ್ತಿರಲಿಲ್ಲ.

ರೋಗಿಗಳಿಗೆ ಆಗಾಗ ಬ್ರಾಂದಿಯನ್ನು ಕೊಡಬೇಕೆಂದು ನಮಗೆ ಹೇಳಿದ್ದರು. ಸೋಂಕು ನಮಗೆ ತಗಲದಿರುವದಕ್ಕೆ ಆಕೆಯು ತೆಗೆದುಕೊಳ್ಳುವಂತೆಯೇ ನಾವು ಕೂಡ ಬ್ರಾಂದಿಯನ್ನು ತೆಗೆದು ಕೊಳ್ಳಬೇಕೆಂದು ದಾದಿಯು ಹೇಳುತ್ತಿದ್ದಳು. ಆದರೆ ನಾವೊ ಬ್ಬರೂ ಅದನ್ನು ಮುಟ್ಟುತ್ತಿರಲಿಲ್ಲ. ರೋಗಿಗಳಿಗೆ ಅದರಿಂದ ಪ್ರಯೋಜನವಾಗುವದರಲ್ಲಿ ಕೂಡ ನನಗೆ ನಂಬಿಕೆಯಿರಲಿಲ್ಲ. ಬ್ರಾಂದಿ ಇಲ್ಲದೆ ಇರಲು ಸಿದ್ಧರಾಗಿದ್ದ ಮೂರು ಜನ ರೋಗಿ ಗಳನ್ನು ಡಾ. ಗಾಡ್‌ಫ್ರೆಯುವರ ಅಪ್ಪಣೆ ಪಡೆದು ಮಣ್ಣಿನ ಚಿಕಿತ್ಸೆ ಯಲ್ಲಿಟ್ಟು ಅವರ ಎದೆಗೂ ತಲೆಗೂ ಮಣ್ಣಿನ ಪಟ್ಟಿಯನ್ನು ಹಾಕಿ ದೆನು. ಇವರಲ್ಲಿ ಇಬ್ಬರು ಉಳಿದುಕೊಂಡರು. ಇಪ್ಪತ್ತು ಜನ ಗಡಂಗಿನಲ್ಲಿರುವಾಗಲೇ ಸತ್ತುಹೋದರು.

ಈ ಮಧ್ಯೆ ಪೌರಸಭೆಯುವರು ಇನ್ನೂ ಇತರ ಏರ್ಪಾಟು ಗಳನ್ನು ನಡೆಸುತ್ತಿದ್ದರು. ಜೋಹಾನ್ಸ್‌ಬರ್ಗಿಗೆ ಏಳು ಮೈಲಿ ದೂರದಲ್ಲಿ ಸೋಂಕುಜಾಡ್ಯದ ಶುಶ್ರೂಷಾಭವನವೊಂದಿದ್ದಿತು. ಮರಣಕ್ಕೆ ತುತ್ತಾಗದ ಆ ಮೂರು ಜನ ರೋಗಿಗಳನ್ನು ಈ ಭವನದ ಹತ್ತಿರ ಥೇರೆಗಳಿಗೆ ಸಾಗಿಸಿದರು. ಹೊಸದಾಗಿ ಸೋಂಕು ತಗಲಿದವರನ್ನೂ ಅಲ್ಲಿಗೆ ಕಳುಹಿಸುವದಕ್ಕೆ ಏರ್ಪಾಟಾಯಿತು. ಹೀಗೆ ನಾವು ಈ ಕೆಲಸದಿಂದ ಬಿಡುಗಡೆ ಹೊಂದಿದೆವು. ಕೆಲವು ದಿವಸಗಳಲ್ಲಿಯೇ ಆ ಗುಣಶೀಲಳಾದ ದಾದಿಗೆ ಜಡ್ಡು ತಗಲಿ ಆಕೆಯು ಒಡನೆಯೇ ಸತ್ತುಹೋದಳೆಂದು ನಮಗೆ ತಿಳಿಯ ಬಂದಿತು. ಆ ಇಬ್ಬರು ರೋಗಿಗಳು ಉಳಿದುದೂ ನಮಗೆ ಸೋಂಕು ತಗಲದೆ ಇದ್ದುದೂ ಹೇಗೆ ಎಂದು ಹೇಳುವದು ಅಸಾಧ್ಯ. ಆದರೆ

ಈ ಅನುಭವದಿಂದ ಮಣ್ಣಿನ ಚಿಕಿತ್ಸೆಯಲ್ಲಿ ನನ್ನ ನಂಬಿಕೆಯು ಹೆಚ್ಚಿ ಬ್ರಾಂದಿಯು ಔಷಧರೂಪದಲ್ಲಿ ಪ್ರಯೋಜನಕಾರಿಯಲ್ಲ ವೆಂಬ ಅಭಿಪ್ರಾಯವು ಸ್ಥಿರಪಟ್ಟಿತು. ಈ ನಂಬಿಕೆಗಾಗಲಿ ಅಥವಾ ಈ ಅಪನಂಬಿಕೆಗಾಗಲಿ ಸಾಕಾದಷ್ಟು ಆಧಾರವಿಲ್ಲವೆಂದು ನನಗೆ ಗೊತ್ತು. ಆದರೆ ಆ ಸಮಯದಲ್ಲಿ ನನ್ನ ಮನಸ್ಸಿನ ಮೇಲೆ ಉಂಟಾದ ಪರಿಣಾಮವನ್ನು ತೊಲಗಿಸಲಾರೆನು. ಆ ಅಭಿಪ್ರಾಯವು ನನ್ನಲ್ಲಿ ಇಂದಿನವರೆಗೂ ಇದೆ. ಆದುದರಿಂದ ಈ ಪ್ರಸಂಗವನ್ನು ಇಲ್ಲಿ ತಿಳಿಸುವದು ಅವಶ್ಯಕವೆಂದೆಣಿಸಿದ್ದೇನೆ.

ಲೋಕೇಷನು ಪೌರಸಭೆಯ ವಶಕ್ಕೆ ಬಂದಮೇಲೆ ಅದರ ಅಲಕ್ಷ್ಯಕ್ಕೂ ಮತ್ತು ಪ್ಲೇಗು ಹರಡುವದಕ್ಕೂ ಪೌರಸಭೆಯ ಮೇಲೆಯೇ ಜವಾಬ್ದಾರಿಯನ್ನು ಹೊರಿಸಿ ಪ್ಲೇಗು ಪ್ರಾರಂಭ ವಾದೊಡನೆಯೇ ನಾನು ವೃತ್ತಪತ್ರಿಕೆಗಳಿಗೆ ಒಂದು ಕಾಗದವನ್ನು ಬರೆದೆನು. ಈ ಪತ್ರವು ನನಗೆ ಮಿ. ಹೆನ್ರಿ ಪೋಲಕರ ಸ್ನೇಹವನ್ನು ಸಂಪಾದಿಸಿತು. ದಿವಂ. ರೆವರೆಂಡ್ ಜೋಸಫ್ ಡೋಕರೊಡನೆ ನನ್ನ ಮೈತ್ರಿಗೆ ಇದೂ ಒಂದು ಕಾರಣವಾಗಿದ್ದಿತು.

ನಾನು ಊಟಕ್ಕೆ ಒಂದು ಶಾಕಾಹಾರ ಭೋಜನಾಲಯಕ್ಕೆ ಹೋಗುತ್ತಿದ್ದೆನೆಂದು ಹಿಂದಿನ ಒಂದು ಅಧ್ಯಾಯದಲ್ಲಿಯೇ ಹೇಳಿ ರುವೆನಷ್ಟೆ. ಅಲ್ಲಿ ನನಗೆ ಮಿ. ಆಲ್ಬರ್ಟ್ ವೆಸ್ಟರ ಪರಿಚಯ ವಾಯಿತು. ಅಲ್ಲಿ ಪ್ರತಿನಿತ್ಯವೂ ಸಂಜೆ ಒಟ್ಟುಗೂಡಿ ಊಟವಾದ ಮೇಲೆ ನಾವು ತಿರುಗಾಟಕ್ಕೆ ಹೊರಡುತ್ತಿದ್ದೆವು. ಮಿ. ವೆಸ್ಟರು ಒಂದು ಸಣ್ಣ ಛಾಪಾಖಾನೆಯ ಮಾಲಿಕರಾಗಿದ್ದರು. ಅವರು ಪ್ಲೇಗು ಪ್ರಾರಂಭವಾದ ವಿಚಾರವಾಗಿ ನಾನು ವೃತ್ತಪತ್ರಿಕೆಗಳಿಗೆ ಬರೆದಿದ್ದ ಕಾಗದವನ್ನು ಓದಿ ನನ್ನನ್ನು ಭೋಜನಾಲಯದಲ್ಲಿ ಕಾಣ ದಿರಲು ಗಾಬರಿಪಟ್ಟರು.

ಪ್ಲೇಗು ಪ್ರಾರಂಭವಾದಂದಿನಿಂದ ನಾನೂ ನನ್ನ ಜೊತೆ ಗಾರರೂ ನಮ್ಮ ಆಹಾರವನ್ನು ಕಡಿಮೆ ಮಾಡಿದ್ದೆವು. ಏಕೆಂದರೆ

ಸೋಂಕುಜಾಡ್ಯವಿರುವ ಕಾಲದಲ್ಲಿ ಅಲ್ಪಾಹಾರಿಯಾಗಿರುವ ನಿಯಮವನ್ನು ನಾನು ಎಷ್ಟೋ ದಿನದಿಂದ ಅನುಸರಿಸುತ್ತಿದ್ದೆನು. ಆದುದರಿಂದ ಈ ಸಮಯದಲ್ಲಿ ನಾನು ಸಂಜೆಯ ಊಟವನ್ನು ಬಿಟ್ಟುಬಿಟ್ಟೆನು. ಮಧ್ಯಾಹ್ನದ ಫಲಾಹಾರವನ್ನು ಕೂಡ ಇತರರು ಬರುವದಕ್ಕಿಂತ ಮುಂಚೆಯೇ ಮುಗಿಸಿಬಿಡುತ್ತಿದ್ದೆನು. ಭೋಜನಾಲಯದ ಯಜಮಾನರೊಡನೆ ನನಗೆ ಹೆಚ್ಚಾದ ಪರಿಚಯವಿದ್ದಿತು. ನಾನು ಪ್ಲೇಗಿನಿಂದ ನರಳುವ ರೋಗಿಗಳನ್ನು ಉಪಚರಿಸುತ್ತಿರುವೆನೆಂದೂ ಆದರಿಂದ ಸಾಧ್ಯವಾದಮಟ್ಟಿಗೆ ನನ್ನ ಮಿತ್ರರೊಡನೆ ಸಂಪರ್ಕವನ್ನು ಬಿಟ್ಟುಬಿಡಲೆಳಸುವೆನೆಂದೂ ಅವರಿಗೆ ಹೇಳಿದ್ದೆನು.

ಭೋಜನಾಲಯದಲ್ಲಿ ನಾನು ಒಂದೆರಡು ದಿನ ಕಾಣದೆ ಇರಲು ಒಂದು ದಿನ ಬೆಳಿಗ್ಗೆ ಅಷ್ಟುಹೊತ್ತಿಗೇ ವಿ. ವೆಸ್ಟರು ನಾನು ತಿರುಗಾಡುವದಕ್ಕೆ ಹೊರಡಲು ಅನುವಾಗುತ್ತಿರುವಷ್ಟರಲ್ಲಿಯೇ ಬಾಗಿಲನ್ನು ತಟ್ಟಿದರು. ನಾನು ಬಾಗಿಲನ್ನು ತೆರೆಯಲು ವಿ. ವೆಸ್ಟರು

"ನೀವು ನನಗೆ ಭೋಜನಾಲಯದಲ್ಲಿ ಕಾಣಬರಲಿಲ್ಲ. ನಿಮಗೇನಾಗಿಬಿಟ್ಟಿದೆಯೋ ಏನೋ ಎಂದು ನನಗೆ ಹೆದರಿಕೆಯಾಯಿತು. ಆದುದರಿಂದ ನೀವು ಬೆಳಿಗ್ಗೆ ಮನೆಯಲ್ಲಿರುವಾಗಲೇ ಬಂದು ನೋಡಿಕೊಂಡು ಹೋಗಬೇಕೆಂದು ನಿಶ್ಚಯಿಸಿದೆನು. ಇಗೋ ನೋಡಿ, ನೀವು ಹೇಳಿದಂತೆ ಮಾಡಲು ನಾನು ಇಲ್ಲಿದ್ದೇನೆ. ರೋಗಿಗಳಿಗೆ ಶುಶ್ರೂಷೆ ಮಾಡುವದರಲ್ಲಿ ನಿಮಗೆ ಸಹಾಯಮಾಡಲು ನಾನು ಸಿದ್ಧನಾಗಿದ್ದೇನೆ. ನನ್ನನ್ನೇ ಆಶ್ರಯಿಸಿರುವವರಾರೂ ಇಲ್ಲವೆಂದು ನಿಮಗೆ ಗೊತ್ತಿದೆ." ಎಂದು ಹೇಳಿದರು.

ನಾನು ಇದಕ್ಕಾಗಿ ನನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿ ಒಂದು ಕ್ಷಣವೂ ಯೋಚನೆ ಮಾಡದೆ ಅವರಿಗೆ "ನಾನು ನಿಮ್ಮನ್ನು

ರೋಗಿಗಳ ಉಪಚಾರಕ್ಕೆ ತೆಗೆದುಕೊಳ್ಳುವದಿಲ್ಲ. ಇನ್ನಾರಿಗೂ ಸೋಂಕು ತಗಲದಿದ್ದರೆ ನಮ್ಮ ಕೆಲಸವು ಒಂದೆರಡು ದಿವಸದಲ್ಲಿಯೇ ಮುಗಿಯುತ್ತದೆ. ಆದರೆ ಒಂದು ವಿಷಯವಿದೆ.'' ಎಂದು ಹೇಳಿದೆನು.

''ಅದೇನು?''

''ನೀವು ಡರಬನಿಗೆ ಹೋಗಿ 'ಇಂಡಿಯನ್ ಒಪಿನಿಯನ್' ಮುದ್ರಣಾಲಯವನ್ನು ನಡೆಸಲಾಗುತ್ತದೆಯೆ? ಮದನಜಿತರಿಗೆ ಇಲ್ಲೇ ಕೆಲಸವಿರುವ ಸಂಭವವಿದೆ. ಅಲ್ಲಿಗೆ ಯಾರಾದರೂ ಬೇಕು. ನೀವು ಹೋಗುವದಕ್ಕಾದರೆ ಆ ವಿಷಯವಾಗಿ ನನ್ನ ಚಿಂತೆಯು ತಪ್ಪೀತು.''

''ನನ್ನದೊಂದು ಮುದ್ರಣಾಲಯವಿದೆಯೆಂದು ನಿಮಗೆ ಗೊತ್ತಿದೆ. ಮುಕ್ಕಾಲು ಪಾಲು ನಾನು ಹೋಗುವೆನು. ಆದರೆ ನಾನು ಖಂಡಿತವಾದ ಉತ್ತರವನ್ನು ಸಂಜೆಗೆ ಹೇಳಲೋ? ನಾವು ಸಂಜೆ ತಿರುಗಾಡುವಾಗ ಈ ವಿಷಯವಾಗಿ ಮಾತನಾಡೋಣ.''

ನನಗೆ ಸಂತೋಷವಾಯಿತು. ಆ ದಿನ ಸಂಜೆ ಮಾತುಕತೆ ನಡೆಯಿತು. ಅವರಿಗೆ ಸಂಬಳವೇನೂ ದೊಡ್ಡ ವಿಷಯವಾಗಿರಲಿಲ್ಲ, ಏಕೆಂದರೆ ಹಣ ಗಳಿಸುವದು ಅವರ ಮುಖ್ಯ ಉದ್ದೇಶವಾಗಿರಲಿಲ್ಲ. ಆದರೂ ಅವರಿಗೆ ತಿಂಗಳಿಗೆ ೧೦ ಪೌಂಡು ಸಂಬಳವೆಂತಲೂ ಲಾಭವೇನಾದರೂ ದೊರೆತರೆ ಅದರಲ್ಲಿ ಒಂದು ಭಾಗವೆಂತಲೂ ನಿರ್ಧರವಾಯಿತು. ವಿ. ವೆಸ್ಟರು ತಮಗೆ ಬರಬೇಕಾದ ಬಾಕಿಯನ್ನು ವಸೂಲು ಮಾಡುವ ಭಾರವನ್ನು ನನಗೆ ವಹಿಸಿ ಮರುದಿನ ಸಂಜೆಯ ರೈಲಿನಲ್ಲೇ ಡರಬನಿಗೆ ಹೊರಟುಹೋದರು. ಅಂದಿನಿಂದ ನಾನು ದಕ್ಷಿಣ ಆಫ್ರಿಕವನ್ನು ಬಿಡುವವರೆಗೂ ಅವರು ನನ್ನ ಸುಖದುಃಖಗಳಲ್ಲಿ ಭಾಗಿಯಾಗಿದ್ದರು.

ಎು. ವೆಸ್ಟರು ಇಂಗ್ಲೆಂಡಿನ ಲಿಂಕನ್‌ಷೈರಿನಲ್ಲಿರುವ ಲೌತ್ ಎಂಬ ಊರಿನ ಒಂದು ರೈತ ಮನೆತನಕ್ಕೆ ಸೇರಿದವರು. ಅವರು ಶಾಲೆಯಲ್ಲಿ ಸಾಧಾರಣ ಶಿಕ್ಷಣವನ್ನು ಪಡೆದಿದ್ದರು. ಆದರೆ ಅನುಭವದ ಶಿಕ್ಷಣಾಲಯದಲ್ಲಿ ಸ್ವಾವಲಂಬನದ ಮೂಲಕ ಎಷ್ಟೋ ವಿಷಯವನ್ನು ಅವರು ಕಲಿತಿದ್ದರು. ಶುದ್ಧಮಾನಸರು, ಸ್ಥಿರಬುದ್ಧಿಯುಳ್ಳವರು, ದೈವಭಕ್ತಿಯುಳ್ಳವರು ಮತ್ತು ಕನಿಕರಶೀಲರಾದ ಆಂಗ್ಲೇಯರೆಂದೇ ಅವರು ನನಗೆ ಸದಾ ಕಂಡುಬಂದಿದ್ದಾರೆ.

ಮುಂದಿನ ಅಧ್ಯಾಯಗಳಲ್ಲಿ ಅವರ ಮತ್ತು ಅವರ ಕುಟುಂಬದ ವಿಷಯವು ಹೆಚ್ಚಾಗಿ ತಿಳಿಯಬರುವುದು.

---

೧೭

# ಲೊಕೇಷನಿನ ದಹನ

ನನಗೂ ನನ್ನ ಜೊತೆಗಾರರಿಗೂ ರೋಗಿಗಳ ಸೇವೆ ತಪ್ಪಿ ದರೂ ಪ್ಲೇಗಿನಿಂದ ಉಂಟಾದ ಇನ್ನೂ ಎಷ್ಟೋ ಕೆಲಸಗಳು ನಮ್ಮ ಮೈಮೇಲೆ ಇದ್ದುವು.

ಲೊಕೇಷನಿನ ವಿಚಾರವಾಗಿ ಪೌರಸಭೆಯ ತಾತ್ಸಾರ ವನ್ನು ತಿಳಿಸಿದ್ದೇನೆ. ಆದರೆ ಬಿಳಿಯ ಜನರ ಆರೋಗ್ಯರಕ್ಷ ಣೆಯ ವಿಚಾರವಾಗಿ ಮಾತ್ರ ಅದು ಬಹು ಎಚ್ಚರಿಕೆಯಿಂದಿದ್ದಿತು. ಈ ಉದ್ದೇಶಕ್ಕಾಗಿ ಅದು ಬೇಕಾದಷ್ಟು ಹಣವನ್ನು ವೆಚ್ಚಮಾಡಿ ದ್ದಿತು. ಈ ಪ್ಲೇಗನ್ನು ನಿರ್ಮೂಲ ಮಾಡುವದಕ್ಕಾಗಿ ಹಣ ವನ್ನು ನೀರಿನ ಹಾಗೆ ಚೆಲ್ಲಿತು. ಮಾಡಬಾರದ ಕಡೆ ಮಾಡಿಯೂ ಮಾಡಬೇಕಾದ ಕಡೆ ಮಾಡದೆಯೂ ಪೌರಸಭೆಯು ಭಾರತೀಯರ ವಿಷಯದಲ್ಲಿ ಅನೇಕ ಕಷ್ಟಗಳನ್ನು ಎಸಗಿತೆಂದು ನಾನು ತಿಳಿದಿ ದ್ದರೂ ಬಿಳಿಯ ಜನರ ಕ್ಷೇಮಚಿಂತನೆಯ ವಿಷಯದಲ್ಲಿ ಅದು ವಹಿಸಿದ ಶ್ರದ್ಧೆಗಾಗಿ ನಾನು ಅದನ್ನು ಹೊಗಳದೆ ಇರಲಾಗಲಿಲ್ಲ. ಮತ್ತು ಅದು ನಡೆಸುತ್ತಿದ್ದ ಈ ಸ್ತುತ್ಯವಾದ ಪ್ರಯತ್ನಗಳಲ್ಲಿ ನಾನು ನನ್ನ ಕೈಯ್ಯಲ್ಲಾದಷ್ಟು ಸಹಾಯ ಮಾಡಿದೆನು. ನಾನು ಹೀಗೆ ಸಹಾಯ ಮಾಡದಿದ್ದರೆ ಇದು ಪೌರಸಭೆಗೆ ಕಷ್ಟಸಾಧ್ಯ ವಾಗುತ್ತಿದ್ದಿತೆಂದೂ ಮತ್ತು ಅದು ಬಂದೂಕದ ಬಲಾತ್ಕಾರದಮೂ ಲಕ ಆದಷ್ಟು ಕೇಡನ್ನುಂಟುಮಾಡುವದಕ್ಕೆ ಹೇಸುತ್ತಿರಲಿಲ್ಲ ವೆಂದೂ ನನಗೆ ತೋರುತ್ತದೆ.

ಆದರೆ ಇದೊಂದೂ ನಡೆಯಲು ಅವಕಾಶವೇ ಇಲ್ಲದಂತಾ ಯಿತು. ಭಾರತೀಯರ ನಡತೆಯನ್ನು ನೋಡಿ ಪೌರಸಭೆಯವ ರಿಗೆ ಸಂತೋಷವಾಯಿತು. ಮತ್ತು ಇದರಿಂದ ಪ್ಲೇಗಿನ ಸಂಬಂ

ಧವಾದ ಮುಂದಿನ ಕೆಲಸಗಳು ಸರಳವಾದುವು. ನನಗೆ ಭಾರತೀಯರಲ್ಲಿದ್ದ ಪ್ರತಿಷ್ಠೆಯನ್ನೆಲ್ಲಾ ಅವರು ಪೌರಸಭೆಯು ಹೇಳಿದಂತೆ ನಡೆಯುವ ಹಾಗೆ ಮಾಡಲು ಉಪಯೋಗಿಸಿದೆನು. ಇದೆಲ್ಲವನ್ನೂ ಮಾಡುವದು ಭಾರತೀಯರಿಗೆ ಸುಲಭವಾಗಿರಲಿಲ್ಲ. ಆದರೆ ನನ್ನ ಸಲಹೆಯನ್ನು ಯಾರೂ ನಿರಾಕರಿಸಿದುದು ನನಗೆ ನೆನಪಿಲ್ಲ.

ಲೊಕೇಷನನ್ನು ಬಲವಾದ ಕಾವಲಿನಲ್ಲಿ ಇಟ್ಟು ಅಪ್ಪಣೆಯಿಲ್ಲದೆ ಒಳಕ್ಕೆ ಹೋಗುವದನ್ನೂ ಹೊರಕ್ಕೆ ಬರುವದನ್ನೂ ಅಸಾಧ್ಯ ಮಾಡಿದರು. ನನಗೂ ನನ್ನ ಜೊತೆಯವರಿಗೂ ಇಷ್ಟಬಂದಾಗ ಹೋಗಿಬರುವದಕ್ಕೆ ಅಪ್ಪಣೆ ಚೀಟಿಗಳನ್ನು ಕೊಟ್ಟರು. ಈ ಏರ್ಪಾಟಿನ ಉದ್ದೇಶವೇನೆಂದರೆ, ಲೊಕೇಷನಿನ ವಾಸಿಗಳೆಲ್ಲರೂ ಅದನ್ನು ಬಿಟ್ಟು ಜೋಹಾನ್ಸ್‌ಬರ್ಗಿಗೆ ಹದಿಮೂರು ಮೈಲಿ ದೂರದಲ್ಲಿದ್ದ ಮೈದಾನದಲ್ಲಿ ಢೇರೆಗಳನ್ನು ಹಾಕಿಕೊಂಡು ಇರುವಂತೆ ಮಾಡಿ ಆಮೇಲೆ ಲೋಕೇಷನಿಗೆ ಬೆಂಕಿ ಹಚ್ಚಬೇಕೆಂದು. ಆಹಾರದ ಜಿನಸಿ ಮತ್ತು ಇತರ ಆವಶ್ಯಕ ಪದಾರ್ಥಗಳನ್ನು ಸಾಗಿಸಿಕೊಂಡು ಢೇರೆಗಳಲ್ಲಿ ನೆಲೆಸುವದಕ್ಕೆ ಕೆಲವು ಕಾಲ ಹಿಡಿಯುತ್ತಿದ್ದುದರಿಂದ ಈ ಮಧ್ಯೆ ಪಹರೆಯವರನ್ನು ಇಡಬೇಕಾಗಿ ಬಂದಿತು.

ಜನರು ಬಹಳ ಗಾಬರಿಯಲ್ಲಿದ್ದರು. ಆದರೆ ನಾನು ಸದಾ ಅಲ್ಲಿಯೇ ಇರುತ್ತಿದ್ದುದರಿಂದ ಅವರಿಗೆ ಸ್ವಲ್ಪ ಭರವಸೆಯುಂಟಾಯಿತು. ಅನೇಕ ಬಡಜನರು ತಾವು ಉಳಿಸಿದ್ದ ಅಲ್ಪ ಸ್ವಲ್ಪ ಹಣವನ್ನು ಭೂಮಿಯೊಳಗೆ ಹೂತಿಡುತ್ತಿದ್ದರು. ಇದನ್ನೆಲ್ಲಾ ಅಗೆದು ತೆಗೆಯಬೇಕಾಯಿತು. ಅವರಿಗೆ ಯಾವ ಬ್ಯಾಂಕೂ ಇರಲಿಲ್ಲ. ಬ್ಯಾಂಕೆಂದರೇನೋ ಅವರಿಗೆ ತಿಳಿದಿರಲಿಲ್ಲ. ನಾನೇ ಅವರ ಬ್ಯಾಂಕಾದೆನು. ಹಣದ ಪ್ರವಾಹವು ನನ್ನ ಆಫೀಸಿಗೆ ಸುರಿಯಿತು. ಈ ಸಂದರ್ಭದಲ್ಲಿ ನಾನು ಪಟ್ಟ ಶ್ರಮಕ್ಕಾಗಿ ಇಂತಹ ಕಷ್ಟಕಾಲದಲ್ಲಿ ಅವರಿಂದ ಯಾವ ರುಸುಮನ್ನೂ ತೆಗೆದುಕೊಳ್ಳುವ ಹಾಗಿರಲಿಲ್ಲ. ಹಾಗೂ ಹೀಗೂ ಈ ಕೆಲಸವನ್ನು ಕೈಗೊಂಡು ಮುಗಿಸಿ

ದೆನು. ನನಗೆ ಅಲ್ಲಿನ ಬ್ಯಾಂಕಿನ ಮ್ಯಾನೇಜರರೊಡನೆ ಗಾಢ ಪರಿಚಯವಿದ್ದಿತು. ನಾನು ಈ ಹಣವನ್ನೆಲ್ಲಾ ಅವರಲ್ಲಿ ಇಡಬೇಕಾಗಿ ಬರುವದೆಂದು ಅವರಿಗೆ ತಿಳಿಸಿದೆನು. ತಾಮ್ರ ಮತ್ತು ಬೆಳ್ಳಿಯ ನಾಣ್ಯಗಳ ರಾಸಿಗಳನ್ನು ತೆಗೆದುಕೊಳ್ಳಲು ಬ್ಯಾಂಕುಗಳಿಗೆ ಇಷ್ಟವೇ ಇರಲಿಲ್ಲ. ಪ್ಲೇಗಿನ ಜಾಗಗಳಿಂದ ಬಂದ ಹಣವನ್ನು ಬ್ಯಾಂಕಿನ ಗುಮಾಸ್ತರು ತಾವು ಮುಟ್ಟುವದಿಲ್ಲವೆಂದು ಎಲ್ಲಿ ಹೇಳುವರೋ ಎಂಬ ಹೆದರಿಕೆ ಬೇರೆ. ಆದರೆ ಬ್ಯಾಂಕಿನ ಮ್ಯಾನೇಜರು ನನಗೆ ಎಲ್ಲಾ ವಿಷಯದಲ್ಲಿಯೂ ಅನುಕೂಲಮಾಡಿಕೊಟ್ಟರು. ಬ್ಯಾಂಕಿಗೆ ಕಳುಹಿಸುವದಕ್ಕೆ ಮುಂಚೆ ಹಣವನ್ನೆಲ್ಲಾ ಕ್ರಿಮಿನಾಶಕ ದ್ರಾವಕದಲ್ಲಿ ತೊಳೆಯಬೇಕೆಂದು ನಿಶ್ಚಯವಾಯಿತು. ನನಗೆ ನೆನಪಿರುವಷ್ಟು ಮಟ್ಟಿಗೆ ಈ ರೀತಿಯಾಗಿ ಸುಮಾರು ೬೦,೦೦೦ ಪೌಂಡ್ ಬ್ಯಾಂಕಿನಲ್ಲಿಡಲ್ಪಟ್ಟಿತು. ಹೆಚ್ಚು ಹಣವಿದ್ದವರನ್ನು ತಮ್ಮ ಹಣವನ್ನು ಗಟ್ಟಿ ಲೆಕ್ಕದಲ್ಲಿ (ನಿಯಮಿತವಾದ ಕಾಲಕ್ಕೆ ಮುಂಚೆ ಆ ಹಣವನ್ನು ಹಿಂದಕ್ಕೆ ತೆಗೆದುಕೊಳ್ಳದಂತೆ) ಇಡಬೇಕೆಂದು ಹೇಳಿದೆನು. ಅವರು ಈ ಸಲಹೆಗೆ ಒಪ್ಪಿದರು. ಇದರ ಫಲವಾಗಿ ಕೆಲವರಿಗೆ ತಮ್ಮ ಹಣವನ್ನು ಹೀಗೆ ಬ್ಯಾಂಕಿನಲ್ಲಿ ಇಡುವ ಅಭ್ಯಾಸವಾಯಿತು.

ಲೊಕೇಷನಿನ ನಿವಾಸಿಗಳು ಒಂದು ಪ್ರತ್ಯೇಕವಾದ ರೈಲು ಗಾಡಿಯಲ್ಲಿ ಜೋಹಾನ್ಸ್‌ಬರ್ಗಿನ ಬಳಿ ಇರುವ ಕ್ಲಿಪ್‌ಸ್ಪ್ರುಟ್ ಫಾರ್ಮ್ ಎಂಬ ಮೈದಾನಕ್ಕೆ ಒಯ್ಯಲ್ಪಟ್ಟರು. ಅಲ್ಲಿ ಪೌರಸಭೆಯು ಅವರಿಗೆ ತನ್ನ ಸ್ವಂತ ವೆಚ್ಚದಿಂದ ಆಹಾರದ ದಿನಸಿಗಳನ್ನು ಒದಗಿಸಿಕೊಟ್ಟಿತು. ಈ ಥೇರೆಗಳ ಊರು ಸಿಪಾಯಿಗಳ ಶಿಬಿರದಂತೆ ಕಾಣುತ್ತಿದ್ದಿತು. ಹೀಗೆ ಮೈದಾನದಲ್ಲಿ ವಾಸಿಸಿ ಅಭ್ಯಾಸವಿಲ್ಲದವರಿಗೆ ಅಲ್ಲಿಯ ಏರ್ಪಾಟನ್ನು ನೋಡಿ ಆಶ್ಚರ್ಯವೂ ದುಃಖವೂ ಉಂಟಾಯಿತು. ಆದರೆ ಅವರು ಯಾವ ಅನಾನುಕೂಲವನ್ನೂ ಸಹಿಸಬೇಕಾಗಿರಲಿಲ್ಲ. ನಾನು ದಿನಕ್ಕೊಂದು ಬಾರಿ ಬೈಸಿಕಲಿನ ಮೇಲೆ ಅವರ ಬಳಿಗೆ ಹೋಗುತ್ತಿದ್ದೆನು. ಅಲ್ಲಿಗೆ

ಹೋದ ೨೪ ಘಂಟೆಯೊಳಗಾಗಿ ಅವರು ತಮ್ಮ ಸಂಕಟವನ್ನೆಲ್ಲಾ ಮರೆತು ಆನಂದದಿಂದ ಜೀವಿಸತೊಡಗಿದರು. ನಾನು ಅವರ ಬಳಿಗೆ ಹೋದಾಗಲೆಲ್ಲಾ ಅವರು ಸಂಗೀತ ವಿನೋದಗಳಲ್ಲಿ ಖುಷಿಯಿಂದ ಕಾಲ ಕಳೆಯುತ್ತಿದ್ದುದನ್ನು ನೋಡುತ್ತಿದ್ದೆನು. ಮೂರು ವಾರದ ಮೈದಾನದ ವಾಸದಿಂದ ಅವರ ಆರೋಗ್ಯವು ಸ್ಪಷ್ಟವಾಗಿ ಉತ್ತಮಪಟ್ಟಿತು.

ನನಗೆ ನೆನಪಿರುವಮಟ್ಟಿಗೆ ಲೋಕೇಷನನ್ನು ಬಿಟ್ಟ ಮರು ದಿನವೇ ಅದಕ್ಕೆ ಬೆಂಕಿ ಹಚ್ಚಿದರು. ಆ ದಳ್ಳುರಿಯಿಂದ ಯಾವ ಪದಾರ್ಥವನ್ನು ಉಳಿಸಲೂ ಪೌರಸಭೆಯು ಎಳ್ಳಷ್ಟೂ ಇಷ್ಟವನ್ನು ತೋರಿಸಲಿಲ್ಲ. ಇದೇ ಕಾರಣಕ್ಕಾಗಿ ಪೌರಸಭೆಯು ಪೇಟೆಯಲ್ಲಿದ್ದ ತನ್ನ ಮರಮುಟ್ಟುಗಳನ್ನೆಲ್ಲಾ ಸುಟ್ಟುಹಾಕಿ ಹತ್ತು ಸಾವಿರ ಪೌಂಡಿನಷ್ಟು ನಷ್ಟವನ್ನು ಹೊತ್ತಿದ್ದಿತು. ಪೇಟೆಯಲ್ಲಿ ಕೆಲವು ಸತ್ತ ಇಲಿಗಳು ಸಿಕ್ಕಿದುದೇ ಇಂತಹ ನಷ್ಟಕರವಾದ ಕೆಲಸಕ್ಕೆ ಕಾರಣ.

ಪೌರಸಭೆಯೇನೋ ಹೆಚ್ಚಾದ ವೆಚ್ಚವನ್ನು ಹೊರಬೇಕಾಯಿತು. ಆದರೆ ಅದು ಪ್ಲೇಗಿನ ಹಾವಳಿಯನ್ನು ಪೂರ್ತಿಯಾಗಿ ತಡೆಯಿತು. ಪಟ್ಟಣವು ಪುನಃ ನಿರಾತಂಕವಾಗಿ ಉಸಿರಾಡತೊಡಗಿತು.



# ೧೮

## ಒಂದು ಪುಸ್ತಕದ ಮಾಯಾಪ್ರಭಾವ

ಪ್ಲೇಗಿನಿಂದ ಬಡಭಾರತೀಯರಿಗೆ ನನ್ನಲ್ಲಿದ್ದ ಗೌರವವು ಅಭಿವೃದ್ಧಿಹೊಂದಿ ನನ್ನ ಕೆಲಸವೂ ಜವಾಬ್ದಾರಿಯೂ ಹೆಚ್ಚಾದುವು. ಹೊಸದಾಗಿ ಐರೋಪ್ಯರೊಡನೆ ಉಂಟಾದ ಕೆಲವು ಸಂಬಂಧಗಳು ಎಷ್ಟು ಗಾಢವಾಗಿದ್ದುವೆಂದರೆ ಅವುಗಳಿಂದ ನನ್ನ ನೈತಿಕ ಜವಾಬ್ದಾರಿಯು ವಿಶೇಷವಾಗಿ ಬೆಳೆಯಿತು. ಮಿ. ವೆಸ್ಟರೊಡನೆ ಪರಿಚಯವಾದಂತೆಯೇ ಮಿ. ಪೋಲಕರ ಪರಿಚಯವೂ ನನಗೆ ಶಾಕಾಹಾರದ ಭೋಜನಾಲಯದಲ್ಲಿ ಉಂಟಾಯಿತು. ಒಂದು ದಿನ ಸಂಜೆ ನನ್ನಿಂದ ಸ್ವಲ್ಪ ದೂರವಿದ್ದ ಒಂದು ಮೇಜಿನಮೇಲೆ ಆಹಾರವನ್ನು ತೆಗೆದುಕೊಳ್ಳುತ್ತಿದ್ದ ಯುವಕರೊಬ್ಬರು ನನ್ನನ್ನು ನೋಡಬಯಸುವೆನೆಂದು ತಿಳಿಸಿ ತಮ್ಮ ಹೆಸರಿನ ಒಂದು ಚೀಟಿಯನ್ನು ನನಗೆ ಕಳುಹಿಸಿದರು. ನಾನು ಅವರಿಗೆ ನನ್ನ ಮೇಜಿನ ಬಳಿ ಬರಬೇಕೆಂದು ಹೇಳಲು ಅವರು ಬಂದರು.

ಅವರು "ನಾನು 'ಕ್ರಿಟಿಕ್' ವೃತ್ತಪತ್ರಿಕೆಯ ಉಪಸಂಪಾದಕನಾಗಿದ್ದೇನೆ. ಪ್ಲೇಗಿನ ವಿಷಯವಾಗಿ ನೀವು ವೃತ್ತಪತ್ರಗಳಿಗೆ ಬರೆದ ಪತ್ರವನ್ನು ಓದಲು ನನಗೆ ನಿಮ್ಮನ್ನು ನೋಡಬೇಕೆಂದು ತೀವ್ರವಾದ ಇಚ್ಛೆಯುಂಟಾಯಿತು. ನನಗೆ ಈ ಅವಕಾಶವು ಸಿಕ್ಕಿದುದು ಬಹಳ ಸಂತೋಷ." ಎಂದು ಹೇಳಿದನು.

ಮಿ. ಪೋಲಕರ ಸರಳಭಾವವು ನನ್ನನ್ನು ಆಕರ್ಷಿಸಿತು. ಆ ರಾತ್ರಿಯೇ ನಮಗೆ ಒಬ್ಬರಿಗೊಬ್ಬರ ತಿಳಿವು ಉಂಟಾಯಿತು. ಜೀವನದ ಮುಖ್ಯ ವಿಚಾರಗಳನ್ನು ಕುರಿತು ನಮ್ಮಿಬ್ಬರ ಅಭಿಪ್ರಾಯಗಳಿಗೂ ಬಹು ಸಾಮ್ಯವಿದ್ದಂತೆ ತೋರಿತು. ಅವರಿಗೆ ಸರಳ ಜೀವನ

ವನ್ನು ಕಂಡರೆ ಇಷ್ಟ. ಅವರ ಬುದ್ಧಿಯು ಒಪ್ಪಿದುದನ್ನು ಕಾರ್ಯತಃ ನಡೆಸುವ ಒಂದು ವಿಶೇಷವಾದ ಶಕ್ತಿಯು ಅವರಲ್ಲಿ ಇದ್ದಿತು. ತಮ್ಮ ಜೀವನದಲ್ಲಿ ಅವರು ನಡೆಸಿದ ಕೆಲವು ಪರಿವರ್ತನೆಗಳು ಎಷ್ಟು ಸಂಪೂರ್ಣವಾಗಿದ್ದುವೋ ಅಷ್ಟೇ ಸತ್ವರವಾಗಿದ್ದುವು.

"ಇಂಡಿಯನ್ ಒಪಿನಿಯನ್"ನ ವೆಚ್ಚವು ದಿನದಿನವೂ ಏರುತ್ತಿದ್ದಿತು. ಮಿ. ವೆಸ್ಟರಿಂದ ಬಂದ ಮೊಟ್ಟಮೊದಲ ವರದಿಯೇ ಗಾಬರಿಪಡಿಸತಕ್ಕುದಾಗಿದ್ದಿತು.

ಅವರು "ನೀವು ಹೇಳಿದಹಾಗೆ ಈ ಕಾರ್ಯದಿಂದ ಲಾಭವೇನೂ ಬರುವಹಾಗಿಲ್ಲ. ನಷ್ಟವಾದರೂ ಆಗಬಹುದೆಂದು ಶಂಕಿಸಲು ಕೂಡ ಅವಕಾಶವಿದೆ. ಲೆಕ್ಕದ ಪುಸ್ತಕಗಳು ಕ್ರಮವಾಗಿಲ್ಲ. ವಸೂಲು ಮಾಡಬೇಕಾದ ಬಾಕಿ ಬೇಕಾದಹಾಗೆ ಇದೆ. ಆದರೆ ಇದರ ತಲೆಬುಡವನ್ನೇ ಕಂಡುಹಿಡಿಯುವಹಾಗಿಲ್ಲ, ಎಷ್ಟೋ ಬದಲಾವಣೆಗಳನ್ನು ಮಾಡಬೇಕಾಗಿ ಬರುತ್ತದೆ. ಆದರೆ ಇದೆಲ್ಲದರಿಂದ ನೀವು ಧೈರ್ಯಗುಂದಬೇಕಾದುದಿಲ್ಲ. ನನಗೆ ಸಾಧ್ಯವಾದಮಟ್ಟಿಗೆ ಸರಿಪಡಿಸಲು ಪ್ರಯತ್ನಿಸುತ್ತೇನೆ. ಲಾಭ ಬರಲಿ, ಬರದಿರಲಿ, ನಾನೇನೋ ಇಲ್ಲೇ ಇರುತ್ತೇನೆ." ಎಂದು ಬರೆದರು.

ಲಾಭವಿಲ್ಲವೆಂದು ತಿಳಿದೊಡನೆಯೇ ಮಿ. ವೆಸ್ಟರು ಬಿಟ್ಟು ಬಿಡಬಹುದಾಗಿದ್ದಿತು. ಹಾಗೆ ಮಾಡಿದರೆ ನಾನು ಅವರನ್ನು ನಿಂದಿಸುವಹಾಗೂ ಇರಲಿಲ್ಲ. ಅಷ್ಟೇಕೆ, ಸರಿಯಾಗಿ ವಿಚಾರಮಾಡದೆ ಈ ಕಾರ್ಯದಿಂದ ಲಾಭ ಬರುವುದೆಂದು ಅವರಿಗೆ ತಿಳಿಯಗೊಟ್ಟುದಕ್ಕಾಗಿ ಅವರೇ ನನ್ನಮೇಲೆ ತಪ್ಪು ಹೊರಿಸಬಹುದಾಗಿದ್ದಿತು. ಆದರೆ ಅವರು ಒಂದು ಸಲವೂ ನನ್ನಮೇಲೆ ದೋಷಾರೋಪಣೆ ಮಾಡಲಿಲ್ಲ. ಆದರೆ ಅಲ್ಲಿನ ವಿದ್ಯಮಾನವು ತಿಳಿದಮೇಲೆ ಮಿ. ವೆಸ್ಟರು ನಾನು ಆಧಾರವಿಲ್ಲದೆ ವಿಷಯಗಳನ್ನು ನಂಬತಕ್ಕವನೆಂದು ತಿಳಿದುಕೊಂಡಿರಬೇಕೆಂದು ನನಗೆ ತೋರುತ್ತದೆ. ಶ್ರೀ ಮದನ

ಜಿತರ ಅಂದಾಜಿಗೆ ಒಪ್ಪಿ ಅದನ್ನು ಸರಿಯಾಗಿ ವಿಮರ್ಶಿಸದೆ ಮಿ. ವೆಸ್ಟರಿಗೆ ಅದರಿಂದ ಲಾಭ ಬರಬಹುದೆಂದು ಹೇಳಿದ್ದೆನು.

ಸಾರ್ವಜನಿಕ ಕಾರ್ಯವನ್ನು ನಡೆಸುವವರು ಸುಮ್ಮನೆ ಭರವಸೆಯಿಂದ ವಿಷಯಗಳನ್ನು ನಂಬಬಾರದೆಂದೂ ತಾವೇ ವಿಮರ್ಶಿಸಿ ನಿಜವಾದುದೆಂದು ತಿಳಿಯದ ಸಂಗತಿಗಳನ್ನು ಹೇಳಬಾರದೆಂದೂ ನನಗೆ ಈಗ ಮಂದಟ್ಟಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಸತ್ಯೋಪಾಸಕರು ಅತ್ಯಂತ ಎಚ್ಚರಿಕೆಯಿಂದಿರಬೇಕು. ನಾವು ಆಧಾರವುಳ್ಳದೆಂದು ಸಂಪೂರ್ಣವಾಗಿ ನಿರ್ಧರಿಸದೆ ಇರುವ ವಿಷಯವನ್ನು ಇತರರು ನಂಬುವಂತೆ ಮಾಡಿದರೆ ಸತ್ಯಕ್ಕೆ ಭಂಗವುಂಟಾಗುತ್ತದೆ. ಇದು ನನಗೆ ತಿಳಿದಿದ್ದರೂ ನಾನು ವಿಚಾರವಿಲ್ಲದೆ ನಂಬುವ ಅಭ್ಯಾಸವನ್ನು ಸಂಪೂರ್ಣವಾಗಿ ಬಿಟ್ಟಿಲ್ಲವೆಂದು ಹೇಳಲು ನನಗೆ ದುಃಖವಾಗುತ್ತದೆ. ನನ್ನ ಕೈಯಲ್ಲಾಗುವದಕ್ಕಿಂತ ಹೆಚ್ಚಾದ ಕೆಲಸಗಳನ್ನು ಮಾಡಬೇಕೆಂಬ ಲೋಭವೇ ಈ ದೋಷಕ್ಕೆ ಕಾರಣ. ಈ ಲೋಭದಿಂದ ನನಗೆ ಉಂಟಾಗುವದಕ್ಕಿಂತ ಹೆಚ್ಚಾಗಿ ನನ್ನ ಜೊತೆಯಲ್ಲಿ ಕೆಲಸ ಮಾಡುವವರಿಗೆ ಕ್ಲೇಶವುಂಟಾಗಿದೆ.

ಮಿ. ವೆಸ್ಟರ ಪತ್ರವು ತಲಪಿದಮೇಲೆ ನಾನು ನೇಟಾಲಿಗೆ ಹೊರಟೆನು. ಪೋಲಕರಿಗೆ ನನಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ತಿಳಿಸಿದ್ದೆನು. ಅವರು ನನ್ನನ್ನು ಬೀಳ್ಕೊಡುವದಕ್ಕೆ ಸ್ಟೇಷನಿಗೆ ಬಂದಿದ್ದರು. ಪ್ರಯಾಣಮಾಡುವಾಗ ಓದುವದಕ್ಕೆಂದು ನನಗೆ ಒಂದು ಪುಸ್ತಕವನ್ನು ಕೊಟ್ಟು ಅದು ಖಂಡಿತವಾಗಿ ನನ್ನ ಒಪ್ಪಿಗೆಗೆ ಬರುವದೆಂದು ಹೇಳಿದರು. ರಸ್ಕಿನರ "ಅಂಟು ದಿಸ್ ಲಾಸ್ಟ್" ಎಂಬುದೇ ಆ ಪುಸ್ತಕ.

ಒಂದು ಸಲ ಓದತೊಡಗಿದಮೇಲೆ ಆ ಪುಸ್ತಕವನ್ನು ಕೆಳಗಿಡುವದಕ್ಕೇ ಆಗಲಿಲ್ಲ. ಅದು ನನ್ನ ಮನಸಸ್ಸು ಹಿಡಿಯಿತು. ಜೋಹಾನ್ಸಬರ್ಗಿನಿಂದ ನೇಟಾಲಿಗೆ ೨೪ ಘಂಟೆಯ ಪ್ರಯಾಣ. ರೈಲ್‌ಗಾಡಿಯು ಡರಬನನ್ನು ಸಂಜೆ ಸೇರಿತು. ಆ ರಾತ್ರಿ ನನಗೆ

ನಿದ್ದೆ ಬರಲೇ ಇಲ್ಲ. ಆ ಪುಸ್ತಕಕ್ಕೆ ಅನುಗುಣವಾಗಿ ನನ್ನ ಜೀವನ ವನ್ನು ಮಾರ್ಪಡಿಸಬೇಕೆಂದು ನಿಶ್ಚಯಿಸಿದೆನು.

ರಸ್ಕಿನನು ಬರೆದ ಒಂದು ಪುಸ್ತಕವನ್ನೂ ನಾನು ಇದಕ್ಕೆ ಮುಂಚೆ ಓದಿರಲಿಲ್ಲ. ನನ್ನ ವಿದ್ಯಾಭ್ಯಾಸದ ಕಾಲದಲ್ಲಿ ನಾನು ಪಠ್ಯ ಪುಸ್ತಕಗಳನ್ನು ಹೊರತು ಇನ್ನಾವದನ್ನೂ ಓದಲಿಲ್ಲವೆಂದು ಹೇಳಬಹುದು. ಜೀವನಸಂಗ್ರಾಮದಲ್ಲಿ ತೊಡಗಿದಮೇಲಂತೂ ನನಗೆ ಓದಲು ಹೊತ್ತೇ ದೊರಕುತ್ತಿರಲಿಲ್ಲ. ಆದುದರಿಂದ ನನ್ನ ಪುಸ್ತಕಜ್ಞಾನವು ಹೆಚ್ಚಾಗಿದೆಯೆಂದು ಹೇಳಲಾರೆನು. ಈ ಬಲ ವಂತದ ಅನವಕಾಶದಿಂದ ನನಗೇನೂ ಹೆಚ್ಚು ನಷ್ಟವಾಯಿತೆಂದು ನನಗೆ ತೋರುವದಿಲ್ಲ. ಹಾಗೆ ನೋಡಿದರೆ ನಿಯತವಾದ ಓದಿನಿಂದ ನಾನು ಓದಿದುದನ್ನು ತಕ್ಕಮಟ್ಟಿಗೆ ಜೀರ್ಣಿಸಿಕೊಳ್ಳಲು ಸಾಧ್ಯ ವಾಗಿದೆಯೆಂದು ಹೇಳಬಹುದು. ಈ ಪುಸ್ತಕಗಳಲ್ಲೆಲ್ಲಾ ನನ್ನ ಜೀವನದಲ್ಲಿ ಒಡನೆಯೇ ಕಾರ್ಯತಃ ಸುಧಾರಣೆಗೆ ಕಾರಣ ವಾದುದು ಈ 'ಅಂಟು ದಿಸ್ ಲಾಸ್ಟ್' ಎಂಬುದೊಂದೇ. ಆಮೇಲೆ ನಾನು ಇದನ್ನು 'ಸರ್ವೋದಯ' (ಎಲ್ಲರ ಕ್ಷೇಮ) ಎಂದು ಹೆಸರು ಕೊಟ್ಟು ಗುಜರಾತೀ ಭಾಷೆಗೆ ತರ್ಜುಮೆ ಮಾಡಿದೆನು.

ರಸ್ಕಿನನ ಈ ಗ್ರಂಥರತ್ನವು ನನ್ನ ಅಂತಃಕರಣದಲ್ಲಿ ಮಾಡಿದ್ದ ಅನೇಕ ಭಾವಗಳನ್ನು ಪ್ರತಿಬಿಂಬಿಸಿದಂತೆ ನನಗೆ ಕಂಡುಬಂದಿ ತೆಂದೂ ಅದರಿಂದಲೇ ಈ ಪುಸ್ತಕವು ನನ್ನ ಮನಸ್ಸಿನಲ್ಲಿ ಸಾಮ್ರಾಜ್ಯ ವನ್ನು ಹೂಡಿ ನನ್ನ ಜೀವನದ ಪರಿವರ್ತನಕ್ಕೆ ಕಾರಣವಾಯಿ ತೆಂದೂ ನನ್ನ ನಂಬಿಕೆ. ಮಾನವಾಂತಃಕರಣದಲ್ಲಿ ಮಲಗಿರುವ ಸದ್ಭಾವಗಳನ್ನು ಎಚ್ಚರಿಸುವವನೇ ಕವಿಯೆನಿಸಿಕೊಳ್ಳುವನು. ಎಲ್ಲರ ಮನಸ್ಸಿನ ಮೇಲೂ ಕವಿಗಳ ಪ್ರಭಾವವು ಒಂದೇ ಆಗಿರುವ ದಿಲ್ಲ. ಏಕೆಂದರೆ ಎಲ್ಲರೂ ಒಂದೇ ಪರಿಮಾಣಾ ಕರ್ಮಪರಿ ಪಾಕಕ್ಕೆ ಬಂದಿರುವದಿಲ್ಲ.

'ಸರ್ವೋದಯ'ದ ಸಿದ್ಧಾಂತಗಳನ್ನು ನಾನು ಹೀಗೆಂದು ತಿಳಿದುಕೊಂಡೆನು :—

(೧) ಎಲ್ಲರ ಒಳಿತೇ ತನ್ನ ಒಳಿತು.

(೨) ವಕೀಲನ ಕೆಲಸಕ್ಕೂ ನಾಯಿಂದನ ಕೆಲಸಕ್ಕೂ ಇರುವ ಬೆಲೆ ಒಂದೇ. ಏಕೆಂದರೆ ಶ್ರಮಪಟ್ಟು ಜೀವನವನ್ನು ಸಂಪಾದಿಸಲು ಎಲ್ಲರಿಗೂ ಸಮನಾದ ಅಧಿಕಾರವಿದೆ.

(೩) ಶ್ರಮದ ಜೀವನವೇ, ಎಂದರೆ ಹೊಲ ಉಳುವವರ, ಕೈಕಸಬುಗಾರರ ಜೀವನವೇ, ಯೋಗ್ಯವಾದ ಜೀವನ.

ಇವುಗಳಲ್ಲಿ ಮೊದಲನೆಯದು ನನಗೆ ಗೊತ್ತಿದ್ದಿತು. ಎರಡನೆಯದನ್ನು ನಾನು ಮಸಕುಮಸಕಾಗಿ ಅರಿತಿದ್ದೆನು. ಮೂರನೆಯದು ನನ್ನ ಮನಸ್ಸಿಗೆ ಬಂದೇ ಇರಲಿಲ್ಲ. ಎರಡನೆಯದೂ ಮೂರನೆಯದೂ ಮೊದಲನೆಯದರಲ್ಲಿಯೇ ಅಡಕವಾಗಿದೆಯೆಂಬುದನ್ನು 'ಸರ್ವೋದಯ'ವು ಹಗಲ ಬೆಳಕಿನಂತೆ ಸ್ಪಷ್ಟಪಡಿಸಿತು. ಬೆಳಕು ಹರಿಯುತ್ತಲೇ ಎದ್ದು ಈ ತತ್ವಗಳನ್ನು ಆಚರಣೆಗೆ ತರಲು ಅನುವಾದೆನು.

---

೧೯

# ಫೀನಿಕ್ಸಿನ ಆಶ್ರಮ

ಮಿ. ವೆಸ್ಟರೊಡನೆ ಈ ವಿಷಯವನ್ನೆಲ್ಲಾ ಮಾತನಾಡಿ 'ಸರ್ವೋದಯ'ದಿಂದ ನನ್ನ ಮನಸ್ಸಿನ ಮೇಲೆ ಉಂಟಾದ ಪ್ರಭಾವ ವನ್ನು ವರ್ಣಿಸಿ 'ಇಂಡಿಯನ್ ಒಪೀನಿಯನ್' ಪತ್ರಿಕೆಯನ್ನು ಊರಿನಿಂದ ದೂರವಾಗಿರುವ ಒಂದು ಜಮೀನಿಗೆ ಸಾಗಿಸಬೇಕೆಂದೂ ಅಲ್ಲಿ ಎಲ್ಲರೂ ತಮ್ಮ ಜೀವನಕ್ಕಾಗುವಷ್ಟು ಸಂಬಳವನ್ನು ಮಾತ್ರ ತೆಗೆದುಕೊಂಡು ಹೊಲದ ಕೆಲಸವನ್ನು ಮಾಡಿ ಉಳಿದ ಹೊತ್ತಿನಲ್ಲಿ ಮುದ್ರಣಾಲಯದ ಕೆಲಸವನ್ನು ನೋಡಿಕೊಳ್ಳಬೇಕೆಂದೂ ಸೂಚಿ ಸಿದೆನು. ಮಿ. ವೆಸ್ಟರು ಈ ಸಲಹೆಗೆ ಒಪ್ಪಿದರು. ಪ್ರತಿಯೊಬ್ಬ ರಿಗೂ ವರ್ಣಭೇದ ದೇಶಭೇದವಿಲ್ಲದೆ ತಿಂಗಳಿಗೆ ೩ ಪೌಂಡು ಸಂಬಳ ಕೊಡಬೇಕೆಂದು ನಿಶ್ಚಯವಾಯಿತು.

ಮುದ್ರಣಾಲಯದಲ್ಲಿದ್ದ ಹತ್ತು ಹನ್ನೆರಡು ಕೆಲಸಗಾರರೂ ಊರಿಗೆ ದೂರವಾಗಿರುವ ಹೊಲದಲ್ಲಿ ಹೋಗಿ ನೆಲೆಸಿ ಜೀವನ ಕ್ಕಾಗುವಷ್ಟು ಮಾತ್ರ ಸಂಬಳದಮೇಲೆ ಇರಲು ಒಪ್ಪುವದು ಸಂದೇಹಾಸ್ಪದವಾದ ಮಾತಾಗಿದ್ದಿತು. ಆದುದರಿಂದ ಈ ಏರ್ಪಾ ಟಿಗೆ ಒಪ್ಪಿಗೆಯಿಲ್ಲದಿದ್ದವರು ಅವರಿಗೆ ಆಗ ಬರುತ್ತಿದ್ದ ಸಂಬಳವನ್ನೇ ತೆಗೆದುಕೊಳ್ಳಬೇಕೆಂದೂ ಮತ್ತು ಆಶ್ರಮಕ್ಕೆ ಬಂದು ಸೇರುವ ದನ್ನು ಧ್ಯೇಯವಾಗಿಟ್ಟುಕೊಂಡು ಅದಕ್ಕೆ ಪ್ರಯತ್ನಪಡಬೇಕೆಂದೂ ನಾವು ಸೂಚಿಸಿದೆವು.

ಅಲ್ಲಿ ಕೆಲಸಮಾಡುತ್ತಿದ್ದವರೊಡನೆ ನಾನು ಈ ಏರ್ಪಾಟಿನ ವಿಷಯವಾಗಿ ಮಾತನಾಡಿದೆನು. ಇದು ಶ್ರೀ ಮದನಜಿತರ ಒಪ್ಪಿ ಗೆಗೆ ಬರಲಿಲ್ಲ. ಅವರು ನನ್ನ ಸಲಹೆಯನ್ನು ಅವಿವೇಕವಾದುದೆಂದೂ ತಾವು ತಮ್ಮ ಸರ್ವಸ್ವವನ್ನೇ ಕೊಟ್ಟು ನಡೆಸುತ್ತಿದ್ದ ಕಾರ್ಯವು

ಇದರಿಂದ ಮಣ್ಣುಪಾಲಾಗುವುದೆಂದೂ ಕೆಲಸಗಾರರು ಓಡಿ ಹೋಗುವರೆಂದೂ 'ಇಂಡಿಯನ್ ಒಪಿನಿಯನ್' ಪತ್ರಿಕೆಯು ನಿಂತು ಹೋಗಿ ಛಾಪಾಖಾನೆಯನ್ನು ಮುಚ್ಚಬೇಕಾಗುವುದೆಂದೂ ಅಭಿಪ್ರಾಯಪಟ್ಟರು.

ಮುದ್ರಣಾಲಯದಲ್ಲಿ ಕೆಲಸಮಾಡುತ್ತಿದ್ದವರಲ್ಲಿ ನನ್ನ ದಾಯಾದರಾದ ಛಗನಲಾಲ್ ಗಾಂಧಿಯವರೂ ಒಬ್ಬರಾಗಿದ್ದರು. ನಾನು ವೆಸ್ಟರೊಡನೆ ಈ ವಿಷಯವನ್ನು ಪ್ರಸ್ತಾಪಮಾಡಿದಾಗಲೇ ಇವರೊಡನೆಯೂ ಮಾಡಿದ್ದೆನು. ಅವರಿಗೆ ಹೆಂಡತಿಮಕ್ಕಳಿದ್ದರು. ಆದರೆ ಅವರು ಬಾಲ್ಯದಿಂದ ನನ್ನ ಕೈಯಲ್ಲಿ ಶಿಕ್ಷಣವನ್ನು ಹೊಂದಿ ನನ್ನ ಬಳಿ ಕೆಲಸಮಾಡಲು ತಾವೇ ಒಪ್ಪಿ ಬಂದಿದ್ದರು. ನನ್ನಲ್ಲಿ ಅವರಿಗೆ ಸಂಪೂರ್ಣವಾದ ನಂಬಿಕೆಯಿದ್ದಿತು. ಆದರಿಂದ ಅವರು ಯಾವ ಚರ್ಚೆಯೂ ಇಲ್ಲದೆ ನನ್ನ ಸಲಹೆಗೆ ಒಪ್ಪಿದರು. ಅಂದಿನಿಂದ ಅವರು ನನ್ನ ಜೊತೆಯಲ್ಲಿಯೇ ಇದ್ದಾರೆ. ಯಂತ್ರವನ್ನು ನಡೆಸುತ್ತಿದ್ದ ಗೋವಿಂದಸ್ವಾಮಿ ಎಂಬಾತನೂ ನನ್ನ ಸಲಹೆಗೆ ಒಪ್ಪಿದನು. ಉಳಿದವರು ಈ ಏರ್ಪಾಟಿಗೆ ಸೇರದಿದ್ದರೂ ನಾನು ಮುದ್ರಣಾಲಯವನ್ನು ಎಲ್ಲಿಗೆ ಸಾಗಿಸಿದರೆ ಅಲ್ಲಿಗೆ ಹೋಗಲು ಒಪ್ಪಿದರು.

ಕೆಲಸಗಾರರೊಂದಿಗೆ ಈ ವ್ಯವಸ್ಥೆಯನ್ನು ಮಾಡಲು ನನಗೆ ಎರಡು ದಿನಕ್ಕಿಂತ ಹೆಚ್ಚಾಗಿ ಹಿಡಿದಂತೆ ಕಾಣೆನು. ಇದಾದೊಡನೆಯೇ ನಾನು ಡರಬನಿನ ಸುತ್ತಮುತ್ತಲಿರುವ ಯಾವದಾದರೂ ರೈಲ್ವೇಸ್ಟೇಷನಿನ ಸಮೀಪದಲ್ಲಿರುವ ಒಂದು ಜಮೀನು ಬೇಕೆಂದು ಪತ್ರಿಕೆಗಳಲ್ಲಿ ಜಾಹಿರಾತನ್ನು ಪ್ರಕಟಿಸಿದೆನು. 'ಫೀನಿಕ್ಸ್' ಎಂಬ ಜಮೀನು ಮಾರಾಟಕ್ಕಿರುವದಾಗಿ ತಿಳಿಯಬರಲು ಮಿ. ವೆಸ್ಟರೂ ನಾನೂ ಅದನ್ನು ನೋಡಿಕೊಂಡು ಬರುವದಕ್ಕೆ ಹೋದೆವು. ಒಂದು ವಾರದೊಳಗಾಗಿ ೨೦ ಎಕರೆಯನ್ನು ಕೊಂಡುಕೊಂಡೆವು. ಅಲ್ಲಿ ಒಂದು ಪುಟ್ಟ ಸುಂದರವಾದ ಊಟೆಯೂ ಕೆಲವು ಕಿತ್ತಳೆಯ

ಮತ್ತು ಮಾವಿನ ಗಿಡಗಳೂ ಇದ್ದುವು. ಇದರ ಮಗ್ಗುಲಲ್ಲಿ ೮೦ ಎಕರೆಯ ಜಮೀನೊಂದಿದ್ದಿತು. ಅದರಲ್ಲಿ ಇನ್ನೂ ಹೆಚ್ಚು ಹಣ್ಣಿನ ಮರಗಳೂ ಒಂದು ಜೀರ್ಣವಾದ ಗುಡಿಸಲೂ ಇದ್ದುವು. ಇದನ್ನೂ ನಾವು ಕೊಂಡುಕೊಂಡೆವು. ಎರಡರಿಂದ ಒಟ್ಟು ನಮಗೆ ಒಂದು ಸಾವಿರ ಪೌಂಡು ತಗಲಿತು.

ನನ್ನ ಇಂತಹ ಸಾಹಸಗಳಿಗೆ ದಿವಂ. ಮಿ. ರುಸ್ತುಂಜಿಯವರು ನನಗೆ ಯಾವಾಗಲೂ ಸಹಾಯ ಮಾಡುತ್ತಿದ್ದರು. ಈ ಏರ್ಪಾಟು ಅವರಿಗೆ ರುಚಿಸಿತು. ಒಂದು ದೊಡ್ಡ ಗಡಂಗಿನಲ್ಲಿ ಉಪಯೋಗಿಸಿದ ಉಬ್ಬುತಗ್ಗಿನ ತಗಡುಗಳನ್ನೂ ಕಟ್ಟಡಕ್ಕೆ ಬೇಕಾದ ಇತರ ಸಾಮಾನುಗಳನ್ನೂ ಅವರು ನಮಗೆ ಕೊಡಲು ನಾವು ಕೆಲಸವನ್ನು ಆರಂಭಿಸಿದೆವು. ಬೋಅರ್ ಯುದ್ಧದಲ್ಲಿ ನನ್ನ ಜೊತೆಯಲ್ಲಿ ಕೆಲಸ ಮಾಡಿದ್ದ ಕೆಲವು ಭಾರತೀಯ ಬಡಗಿಗಳೂ ಕಲ್ಲು ಕೆಲಸದವರೂ ಛಾಪಾಖಾನೆಗೆ ಒಂದು ಗುಡಿಸಲನ್ನು ಕಟ್ಟಲು ನನಗೆ ಸಹಾಯ ಮಾಡಿದರು. ೭೫ ಅಡಿ ಉದ್ದ ೫೦ ಅಡಿ ಅಗಲದ ಈ ಕಟ್ಟಡವು ಸುಮಾರು ಒಂದು ತಿಂಗಳಲ್ಲಿಯೇ ಸಿದ್ಧವಾಯಿತು. ಮಿ. ವೆಸ್ಟರೂ ಇತರರೂ ತಮಗೆ ಉಂಟಾಗ ಬಹುದಾದ ಅಪಾಯವನ್ನು ಲಕ್ಷಿಸದೆ ಬಡಗಿ ಮತ್ತು ಕಲ್ಲು ಕೆಲಸ ದವರೊಂದಿಗೆ ನಿಂತರು. ಆ ಜಾಗದಲ್ಲಿ ಮುಂಚೆ ಯಾರೂ ವಾಸಮಾಡುತ್ತಿರಲಿಲ್ಲ. ಅದರ ತುಂಬ ಹುಲ್ಲು ಹುಲುಸಾಗಿ ಬೆಳೆದು ಬೇಕಾದಷ್ಟು ಹಾವುಗಳು ಸೇರಿಕೊಂಡಿದ್ದುದರಿಂದ ಅಲ್ಲಿ ವಾಸಿಸುವದು ಅಪಾಯಕರವೆಂಬುದು ಸ್ಪಷ್ಟವಾಗಿದ್ದಿತು. ಮೊಟ್ಟ ಮೊದಲು ಎಲ್ಲರೂ ಡೇರೆ ಹಾಕಿಕೊಂಡು ವಾಸಮಾಡುತ್ತಿದ್ದರು. ಮುಖ್ಯ ಕಟ್ಟಡವು ಒಂದು ತಿಂಗಳಲ್ಲಿ ತಯಾರಾಯಿತು. ನಮ್ಮ ಸಾಮಾನಿನಲ್ಲಿ ಹೆಚ್ಚು ಭಾಗವನ್ನು ನಾವು ಸುಮಾರು ಒಂದು ವಾರದೊಳಗಾಗಿ ಸಾಗಿಸಿದೆವು. ಆ ಜಾಗವು ಡರಬನಿನಿಂದ ೧೪ ಮೈಲಿ ಮತ್ತು ಫೀನಿಕ್ಸ್ ಸ್ಟೇಷನಿನಿಂದ ೨॥ ಮೈಲಿ ದೂರ ವಿದ್ದಿತು.

'ಇಂಡಿಯನ್ ಒಪಿನಿಯನ್'ನ ಒಂದು ಸಂಚಿಕೆಯನ್ನು ಮಾತ್ರ ಹೊರಗೆ 'ಮರ್ಕ್ಯುರಿ' ಮುದ್ರಣಾಲಯದಲ್ಲಿ ಅಚ್ಚು ಹಾಕಿಸಬೇಕಾಯಿತು.

ಹಿಂದುಸ್ತಾನದಿಂದ ಇಲ್ಲಿ ತಮ್ಮ ಅದೃಷ್ಟಪರೀಕ್ಷೆಯನ್ನು ಮಾಡಲು ನನ್ನೊಡನೆ ಬಂದು ಯಾವದಾದರೊಂದು ಕಸಬಿನಲ್ಲಿದ್ದ ನನ್ನ ಬಂಧುಗಳನ್ನೂ ಸ್ನೇಹಿತರನ್ನೂ ಈಗ ಒಪ್ಪಿಸಿ ಫೀನಿಕ್ಸ ಆಶ್ರಮಕ್ಕೆ ಸೆಳೆಯಲು ಪ್ರಯತ್ನಪಟ್ಟೆನು. ಅವರು ಧನವನ್ನು ಗಳಿಸಲೋಸುಗ ಬಂದಿದ್ದರಾದುದರಿಂದ ಅವರನ್ನು ಒಪ್ಪಿಸುವದು ಕಷ್ಟದ ಕೆಲಸವಾಗಿದ್ದಿತು. ಆದರೂ ಕೆಲವರು ಸಮ್ಮತಿಸಿದರು. ಇವರಲ್ಲಿ ಮಗನಲಾಲ ಗಾಂಧಿಯವರ ಹೆಸರೊಂದನ್ನು ಮಾತ್ರ ಆರಿಸಿ ಹೇಳಬಲ್ಲೆನು. ಉಳಿದವರು ಪುನಃ ತಮ್ಮ ತಮ್ಮ ಕಸಬಿಗೆ ಹೊರಟುಹೋದರು. ಮಗನಲಾಲ ಗಾಂಧಿಯವರು ತಮ್ಮ ಕಸಬನ್ನು ಒಟ್ಟಿಗೇ ಬಿಟ್ಟು ನನ್ನ ಸುಖದುಃಖಗಳಲ್ಲಿ ತಾವೂ ಭಾಗಿಯಾದರು. ತಮ್ಮ ಬುದ್ಧಿಬಲ, ತ್ಯಾಗ ಮತ್ತು ಭಕ್ತಿ ಇವುಗಳ ದೆಸೆಯಿಂದ ಅವರು ನನ್ನ ನೈತಿಕ ಪ್ರಯೋಗಗಳಲ್ಲಿ ಮೊಟ್ಟ ಮೊದಲು ಭಾಗಿಗಳಾದ ಜನರಲ್ಲಿ ಮೊದಲನೆಯವರಾಗಿದ್ದಾರೆ. ಮತ್ತು ಇವರಲ್ಲಿ ಸ್ವಯಂಶಿಕ್ಷಿತ ಕೈಕಸಬುಗಾರರಾಗಿ ಅವರ ಸ್ಥಾನವು ಅದ್ವಿತೀಯವಾಗಿದೆ.

ಹೀಗೆ ಫೀನಿಕ್ಸ ಆಶ್ರಮವು ೧೯೦೪ರಲ್ಲಿ ಸ್ಥಾಪಿತವಾಯಿತು. ಅನೇಕ ಅಡಚಣೆಗಳೊದಗಿದರೂ 'ಇಂಡಿಯನ್ ಒಪಿನಿಯನ್' ಪತ್ರಿಕೆಯು ಇಂದಿನ ವರೆಗೂ ಅಲ್ಲಿಂದಲೇ ಪ್ರಕಟವಾಗುತ್ತಿದೆ.

ಆದರೆ ಮೊಟ್ಟಮೊದಲು ಒದಗಿದ ತೊಡಕುಗಳು, ಮಾಡಿದ ವ್ಯತ್ಯಾಸಗಳು, ಹುಟ್ಟಿದ ಆಸೆಗಳು, ಉಂಟಾದ ಆಶಾಭಂಗಗಳು, ಇವೆಲ್ಲಕ್ಕೂ ಬೇರೊಂದು ಅಧ್ಯಾಯ ಬೇಕು.

೨೦

# ಮೊದಲನೆಯ ರಾತ್ರಿ

ಫೀನಿಕ್ಸಿನಿಂದ 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಮೊದಲನೆಯ ಅಂಕವನ್ನು ಹೊರಡಿಸುವದು ಸುಲಭದ ಕೆಲಸವಾಗಲಿಲ್ಲ. ನಾನು ಎರಡು ವಿಷಯಗಳ ವಿಚಾರವಾಗಿ ಮುಂದಾಲೋಚನೆ ಮಾಡಿರದಿದ್ದರೆ ಮೊದಲನೆಯ ಅಂಕವನ್ನು ನಿಲ್ಲಿಸಿಬಿಡಬೇಕಾಗುತ್ತಿದ್ದಿತು. ಅಥವಾ ಅದರ ಪ್ರಕಟಣೆಯು ತಡವಾಗುತ್ತಿದ್ದಿತು. ಮುದ್ರಣಾಲಯವನ್ನು ನಡೆಸಲು ಯಂತ್ರವನ್ನಿಟ್ಟುಕೊಳ್ಳಲು ನನಗೇನೋ ಇಷ್ಟವಿರಲಿಲ್ಲ. ಕೈಯಿಂದಲೇ ಬೇಸಾಯವನ್ನು ಮಾಡುವ ಸ್ಥಳದಲ್ಲಿ ಈ ಕೆಲಸವನ್ನೂ ಕೈಯಿಂದಲೇ ಮಾಡುವದು ಅಲ್ಲಿನ ವಾತಾವರಣಕ್ಕೆ ಹೆಚ್ಚು ಸಮಂಜಸವಾಗಿರುವದೆಂದು ನಾನು ಆಲೋಚಿಸುತ್ತಿದ್ದೆನು. ಆದರೆ ಈ ಏರ್ಪಾಟು ಸಾಧ್ಯವಾಗಿ ತೋರಲಿಲ್ಲವಾದುದರಿಂದ ನಾವು ಎಣ್ಣೆಯಿಂದ ನಡೆಯುವ ಯಂತ್ರವೊಂದನ್ನು ಹೂಡಿದೆವು. ಆದರೆ ಯಂತ್ರವು ಒಂದು ವೇಳೆ ನಿಂತುಹೋದರೆ ಕೆಲಸ ನಡೆಸಲೋಸುಗ ಇನ್ನೇನಾದರೂ ವ್ಯವಸ್ಥೆಯಿರಬೇಕೆಂದು ವೆಸ್ಟರಿಗೆ ಸೂಚಿಸಿದ್ದೆವು. ಅದೇ ಪ್ರಕಾರ ಅವರು ಕೈಯಿಂದ ನಡೆಸುವ ಚಕ್ರವೊಂದನ್ನು ತರಿಸಿಟ್ಟಿದ್ದರು. ಪತ್ರಿಕೆಯ ಆಕಾರವು ದೈನಿಕ ಪತ್ರಿಕೆಯ ಆಕಾರದಂತೆ (ಹೆಚ್ಚು ಉದ್ದವಾಗಿಯೂ ಅಗಲವಾಗಿಯೂ) ಇದ್ದಿತು. ಫೀನಿಕ್ಸ್‌ನಂತಹ ಹಳ್ಳಿಗಾಡಿಗೆ ಇದು ತಕ್ಕುದಲ್ಲವೆಂದು ಯೋಚಿಸಿ ಸಮಯವೊದಗಿದಾಗ ಪ್ರತಿಗಳನ್ನು ಕಾಲಿನಿಂದೊತ್ತುವ ಯಂತ್ರದಿಂದ ತಯಾರು ಮಾಡಲು ಸಾಧ್ಯವಾಗುವಂತೆ ಪತ್ರಿಕೆಯ ಆಕಾರವು ಫೂಲ್ಸ್‌ಕ್ಯಾಪ್ ಕಾಗದದ ಪರಿಮಾಣಕ್ಕೆ ಇಳಿಸಲ್ಪಟ್ಟಿತು. ಮೊದಲು ಮೊದಲು ಪತ್ರಿಕೆಯ ಪ್ರಕಟಣೆಯ ದಿನಕ್ಕೆ ಮುಂಚೆ ನಾವೆಲ್ಲರೂ ಬಹಳ ಹೊತ್ತು ಎದ್ದಿರಬೇಕಾಗಿದ್ದಿತು. ಪ್ರತಿಯೊಬ್ಬರೂ, ಹುಡುಗರಾಗಲಿ,

ಮುದುಕರಾಗಲಿ, ಹಾಳೆಗಳನ್ನು ಮಡಿಸುವದರಲ್ಲಿ ಸಹಾಯ ಮಾಡಬೇಕಾಗಿದ್ದಿತು. ನಾವು ನಮ್ಮ ಕೆಲಸವನ್ನು ಸಾಮಾನ್ಯವಾಗಿ ರಾತ್ರಿ ಹತ್ತು ಹನ್ನೆರಡು ಘಂಟೆಯ ಹೊತ್ತಿಗೆ ಮುಗಿಸುತ್ತಿದ್ದೆವು. ಆದರೆ ಮೊದಲನೆಯ ರಾತ್ರಿಯನ್ನು ಮರೆಯುವಂತಿಲ್ಲ. ಅಚ್ಚಿನ ಹಾಳೆಗಳನ್ನೇನೋ ಯಂತ್ರದಲ್ಲಿ ಕಟ್ಟಿದುದಾಯಿತು. ಆದರೆ ಎಂಜಿನ್ ಕೆಲಸ ಮಾಡಲಿಲ್ಲ. ಎಂಜಿನನ್ನು ಹೂಡಿ ಅದರ ಕೆಲಸವನ್ನು ಪ್ರಾರಂಭಿಸುವದಕ್ಕಾಗಿ ಡರಬನಿನಿಂದ ಒಬ್ಬ ಎಂಜಿನಿಯರನ್ನು ಕರೆಸಿದ್ದೆವು. ಅವರೂ ವೆಸ್ಟರೂ ತಮ್ಮ ಕೈಯಲ್ಲಾದಷ್ಟು ಪ್ರಯತ್ನಪಟ್ಟರು. ಆದರೂ ಪ್ರಯೋಜನವಾಗಲಿಲ್ಲ. ಪ್ರತಿಯೊಬ್ಬರೂ ಚಿಂತಾಪರರಾದರು. ಕಡೆಗೆ ವೆಸ್ಟರು ನಿರಾಶರಾಗಿ ಕಣ್ಣೀರು ಹಾಕಿಕೊಂಡು ನನ್ನ ಬಳಿಗೆ ಬಂದು, "ಎಂಜಿನ್ ಕೆಲಸ ಮಾಡುವದಿಲ್ಲ. ನಾವು ಪತ್ರಿಕೆಯನ್ನು ಹೊತ್ತಿಗೆ ಸರಿಯಾಗಿ ಹೊರಡಿಸಲಾರೆವು." ಎಂದು ಹೇಳಿದರು.

"ಇಲ್ಲಿನ ಸ್ಥಿತಿಯುಂ ಹಾಗಿದ್ದರೆ ನಾವೇನೂ ಮಾಡುವಹಾಗಿಲ್ಲ. ಆದರೆ ಇದಕ್ಕಾಗಿ ಕಣ್ಣೀರು ಸುರಿಸುವದರಿಂದ ಪ್ರಯೋಜನವೇನೂ ಇಲ್ಲ. ಮನುಷ್ಯಪ್ರಯತ್ನಕ್ಕೆ ಇನ್ನೇನೇನು ಸಾಧ್ಯವೋ ಅದೆಲ್ಲವನ್ನೂ ಮಾಡೋಣ. ಕೈಯಲ್ಲಿ ತಿರುಗಿಸುವ ಚಕ್ರದ ವಿಷಯ ಏನು ಹೇಳುತ್ತೀರಿ?" ಎಂದು ಅವರಿಗೆ ಸಮಾಧಾನ ಹೇಳಿದೆನು.

"ಅದನ್ನು ತಿರುಗಿಸಲು ಜನರೆಲ್ಲಿದ್ದಾರೆ? ಅದು ನಮ್ಮಷ್ಟು ಜನರ ಕೈಯಲ್ಲಿ ಆಗುವದಿಲ್ಲ. ಇದನ್ನು ತಿರುಗಿಸುವದಕ್ಕೆ ಸರದಿಗೆ ನಾಲ್ಕು ಜನರು ಬೇಕು. ನಮ್ಮ ಆಳುಗಳೆಲ್ಲಾ ಆಯಾಸಪಟ್ಟಿದ್ದಾರೆ."

ಕಟ್ಟಡದ ಕೆಲಸವು ಇನ್ನೂ ಮುಗಿದಿರಲಿಲ್ಲವಾದದುರಿಂದ ಬಡಗಿಗಳು ಇನ್ನೂ ನಮ್ಮ ಬಳಿಯಲ್ಲಿಯೇ ಇದ್ದರು. ಅವರು ಮುದ್ರಣಾಶಾಲೆಯಲ್ಲಿ ಮಲಗಿಕೊಂಡಿದ್ದರು. ನಾನು ಅವರ ಕಡೆ ತೋರಿಸಿ :

"ನಾವು ಈ ಬಡಗಿಗಳನ್ನು ಉಪಯೋಗಿಸಿಕೊಳ್ಳಲಾರೆವೇಕೆ? ಮತ್ತು ನಾವು ರಾತ್ರಿಯೆಲ್ಲಾ ಕೆಲಸಮಾಡಬಹುದು. ನಮಗೆ ಈ ದಾರಿಯು ಇನ್ನೂ ಉಳಿದಿದೆಯೆಂದು ನನಗೆ ತೋರುತ್ತದೆ." ಎಂದೆನು.

"ನನಗೆ ಬಡಗಿಗಳನ್ನು ಎಬ್ಬಿಸಲು ಧೈರ್ಯವಿಲ್ಲ. ನಮ್ಮ ಆಳುಗಳಂತು ಬಹಳ ಆಯಾಸಗೊಂಡಿದ್ದಾರೆ." ಎಂದು ವೆಸ್ಟರು ಹೇಳಿದರು.

"ಅವರನ್ನು ಒಪ್ಪಿಸುವದು ನನ್ನ ಕೆಲಸ." ಎಂದು ನಾನು ಹೇಳಿದೆನು.

"ಹಾಗಾದರೆ ನಾವು ಕೆಲಸವನ್ನು ಮುಗಿಸಿದರೂ ಮುಗಿಸ ಬಹುದು." ಎಂದು ವೆಸ್ಟರು ಹೇಳಿದರು.

ನಾನು ಬಡಗಿಗಳನ್ನು ಎಬ್ಬಿಸಿ ಅವರ ಸಹಾಯವನ್ನು ಕೇಳಿದೆನು. ಅವರನ್ನೇನೂ ಬಲವಂತ ಮಾಡಬೇಕಾಗಿರಲಿಲ್ಲ. ಅವರು "ಸಮಯ ಬಿದ್ದಾಗ ನಾವು ಸಹಾಯಕ್ಕೆ ಒದಗದಿದ್ದರೆ ನಾವಿದ್ದು ಪ್ರಯೋಜನವೇನು? ನೀವೆಲ್ಲಾ ವಿಶ್ರಮಿಸಿರಿ. ನಾವು ಚಕ್ರವನ್ನು ತಿರಿಗಿಸುವೆವು. ನಮಗೆ ಆ ಕೆಲಸವು ಸುಲಭ." ಎಂದರು. ನಮ್ಮ ಆಳುಗಳಂತು ಸಿದ್ಧವಾಗಿಯೇ ಇದ್ದರು.

ವೆಸ್ಟರಿಗೆ ಬಹಳ ಹರ್ಷವಾಯಿತು. ನಾವು ಕೆಲಸದಲ್ಲಿ ತೊಡಗುತ್ತಲೂ ಅವರು ಕೀರ್ತನೆಯನ್ನು ಹಾಡತೊಡಗಿದರು. ನಾನು ಬಡಗಿಗಳೊಡನೆ ಕೆಲಸಕ್ಕೆ ಕೈಹಾಕಿದೆನು. ಉಳಿದವರೆಲ್ಲಾ ಸರದಿಯ ಮೇಲೆ ಸೇರಿದರು. ಈ ರೀತಿಯಾಗಿ ಬೆಳಿಗ್ಗೆ ೭ ಘಂಟೆಯವರೆಗೆ ಕೆಲಸ ಮಾಡಿದೆವು. ಮಾಡಬೇಕಾದುದು ಇನ್ನೂ ಬೇಕಾದಷ್ಟು ಇದ್ದಿತು. ಆದುದರಿಂದ ನಾನು ವೆಸ್ಟರಿಗೆ ಎಂಜಿನಿಯರನ್ನು ಎದ್ದು ಎಂಜಿನನ್ನು ನಡೆಸಲು ಪ್ರಯತ್ನಿಸಬೇಕೆಂದು ಈಗ ಅವರಿಗೆ ಹೇಳಬಹುದೆಂದೂ ಅವರ ಪ್ರಯತ್ನವು ಸಫಲವಾ

ದರೆ ನಮ್ಮ ಕೆಲಸವು ಹೊತ್ತಿಗೆ ಸರಿಯಾಗಿ ಮುಗಿಯಬಹುದೆಂದೂ ಸೂಚಿಸಿದೆನು. ವೆಸ್ಟರು ಅವರನ್ನೆಬ್ಬಿಸಿದರು. ಅವರು ಒಡನೆಯೇ ಎಂಜಿನಿನ ಕೊಠಡಿಗೆ ಹೋದರು. ಇದೇನಿದು ಸೋಜಿಗ! ಅವರು ಪ್ರಾರಂಭಿಸುತ್ತಲೇ ಎಂಜಿನು ನಡೆಯುತೊಡಗಿತು. ಛಾಪಾಖಾನೆ ಯೆಲ್ಲಾ ಕೋಲಾಹಲದಿಂದ ತುಂಬಿಹೋಯಿತು.

"ಇದು ಹೇಗೆ? ನಿನ್ನೆ ರಾತ್ರಿ ನಾವು ಪಟ್ಟ ಕಷ್ಟವೆಲ್ಲಾ ಪ್ರಯೋಜನಕ್ಕೆ ಬಾರದೆ ಈ ದಿನ ಬೆಳಿಗ್ಗೆ ಮಾತ್ರ ಅದರಲ್ಲಿ ಏನೂ ಕುಂದಿರದಿದ್ದಂತೆ ನಡೆಯ ತೊಡಗಿದೆ?" ಎಂದು ನಾನು ಕೇಳಿ ದೆನು.

ವೆಸ್ಟರೋ ಎಂಜನಿಯರೋ (ಯಾರೆಂಬುದು ನನಗೆ ನೆನ ಪಿಲ್ಲ.) "ಅದೇಕೆಂದು ಹೇಳುವದು ಕಷ್ಟ. ಯಂತ್ರಗಳು ಕೂಡ ಅವುಗಳಿಗೂ ನಮ್ಮಂತೆಯೇ ವಿಶ್ರಾಂತಿ ಬೇಕೋ ಏನೋ ಎನ್ನುವ ಹಾಗೆ ಒಂದೊಂದು ವೇಳೆ ವರ್ತಿಸುತ್ತವೆ." ಎಂದು ಹೇಳಿದರು.

ನನ್ನ ದೃಷ್ಟಿಯಲ್ಲಿ ಎಂಜಿನ್ ನಿಂತುಹೋದುದು ನಮ್ಮೆಲ್ಲ ರನ್ನೂ ಒರೆಗಲ್ಲಿಗೆ ಹಾಕಿ ಪರೀಕ್ಷಿಸಿತು. ಹೊತ್ತಿಗೆ ಸರಿಯಾಗಿ ಎಂಜಿನು ನಡೆದುದು ನಮ್ಮ ಶ್ರದ್ಧಾಪೂರ್ವಕವಾದ ಶ್ರಮದ ಫಲ ವೆಂದು ನಾನು ಎಣಿಸಿದೆನು.

ಪತ್ರಿಕೆಯ ಪ್ರತಿಗಳನ್ನು ಹೊತ್ತಿಗೆ ಸರಿಯಾಗಿ ಕಳಿಸಿದುದಾ ಯಿತು. ಎಲ್ಲರೂ ಸುಖಮಾನಸರಾದೆವು.

ಮೊಟ್ಟಮೊದಲಿನಲ್ಲಿ ಹೀಗೆ ಹಟಮಾಡಿ ಕೆಲಸ ಮಾಡಿದುದು ಮುಂದೆ ಪತ್ರಿಕೆಯ ಕೆಲಸವು ನಿಯಮಾನುಸಾರವಾಗಿ ನಡೆಯುವ ದಕ್ಕೆ ಅಸ್ತಿಭಾರ ಹಾಕಿತಲ್ಲದೆ ಫೀನಿಕ್ಸಿನಲ್ಲಿ ಸ್ವಾವಲಂಬನದ ವಾತಾ ವರಣವನ್ನು ಸೃಷ್ಟಿಸಿತು. ಮುಂದೆ ನಾವು ಮನಃಪೂರ್ವಕ ವಾಗಿ ಎಂಜಿನಿನ ಉಪಯೋಗವನ್ನು ಬಿಟ್ಟುಬಿಟ್ಟು ಕೈಯಿಂದಲೇ ಕೆಲಸವನ್ನು ನಡೆಸುವ ಕಾಲವೂ ಬಂದಿತು. ನನ್ನ ಮನಸ್ಸಿಗೆ ಅದೇ ಫೀನಿಕ್ಸ್ ಆಶ್ರಮವು ನೈತಿಕ ಶಿಖರವನ್ನೇರಿದ ಕಾಲ.

೨೧

# ಪೋಲಕರು ನಮ್ಮ ಗುಂಪಿಗೆ ಸೇರಿದುದು

ಫೀನಿಕ್ಸ್ ಆಶ್ರಮವನ್ನು ನಾನು ಸ್ಥಾಪಿಸಿದರೂ ಅಲ್ಲಿ ನಾನು ಆಗಾಗ ಸ್ವಲ್ಪ ಕಾಲ ಮಾತ್ರ ನಿಲ್ಲಲು ಸಾಧ್ಯವಾಯಿತೆಂಬುವದು ನನಗೆ ಸದಾ ದುಃಖಕರವಾದ ವಿಷಯವಾಗಿದೆ. ಬರಬರುತ್ತಾ ವಕೀಲಿ ಕೆಲಸವನ್ನು ಬಿಟ್ಟು ಫೀನಿಕ್ಸಿಗೆ ಹೋಗಿ ಅಲ್ಲಿ ಕೈಕೆಲಸ ದಿಂದ ಜೀವನವನ್ನು ಸಂಪಾದಿಸಿ ಆ ಆಶ್ರಮದ ಸಫಲತೆಯಲ್ಲಿ ಸೇವೆಯ ಆನಂದವನ್ನು ಪಡೆಯುವದು ಮೊದಲು ನನ್ನ ಅಭಿಲಾಷೆ ಯಾಗಿದ್ದಿತು. ಆದರೆ ಇದು ದೇವರ ಇಚ್ಛೆಯಲ್ಲಿರಲಿಲ್ಲ. ಮನು ಷ್ಯನು ನೆನೆಯುವದೊಂದಾದರೆ ದೇವರು ಮಾಡುವದು ಇನ್ನೊಂ ದೆಂಬುದು ಎಷ್ಟೋ ಸಲ ನನ್ನ ಅನುಭವಕ್ಕೆ ಬಂದಿದೆ. ಆದರೆ ಸತ್ಯದ ಉಪಾಸನೆಯೇ ಎಲ್ಲಿ ಅಂತಿಮಧ್ಯೇಯವಾಗಿರುತ್ತದೆಯೋ ಅಲ್ಲಿ ನಮ್ಮ ಏರ್ಪಾಟುಗಳು ಎಷ್ಟೇ ಅಸಫಲವಾಗಲಿ ಪರಿಣಾಮವು ಎಂದೂ ಅಶುಭವಾಗುವದಿಲ್ಲ ಮತ್ತು ಅನೇಕವೇಳೆ ನಿರೀಕ್ಷಿಸಿದುದ ಕ್ಕಿಂತ ಉತ್ತಮವಾಗಿಯೇ ಇರುತ್ತದೆ ಎಂಬುದು ಕೂಡ ನನ್ನ ಗೋಚರಕ್ಕೆ ಬಂದಿರುತ್ತದೆ. ಫೀನಿಕ್ಸ್ ಆಶ್ರಮವು ಅನಿರೀಕ್ಷಿತ ವಾಗಿ ಹೊಂದಿದ ರೂಪವೂ ಮತ್ತು ಇತರ ಅನಿರೀಕ್ಷಿತ ಘಟನೆ ಗಳೂ ನಮ್ಮ ಆಸೆಯನ್ನು ವಿಫಲಗೊಳಿಸಿದ್ದುವೆಂದು ಹೇಳುವದು ಕಷ್ಟ ವಾದರೂ ಅಶುಭವಾಗಿರಲಿಲ್ಲವೆಂದು ಖಂಡಿತವಾಗಿ ಹೇಳಬಹುದು.

ಕೈಕೆಲಸದಿಂದಲೇ ನಮ್ಮಲ್ಲಿ ಪ್ರತಿಯೊಬ್ಬರೂ ಜೀವನ ಸಂಪಾದಿಸುವದನ್ನು ಸಾಧ್ಯಮಾಡಲೋಸುಗ ಛಾಪಾಖಾನೆಯ ಸುತ್ತಲಿದ್ದ ಜಮಿನನ್ನು ಒಬ್ಬೊಬ್ಬರಿಗೆ ಮೂರು ಮೂರು ಎಕರೆ ಯಂತೆ ವಿಭಾಗಿಸಿದೆವು. ಇವುಗಳಲ್ಲಿ ಒಂದು ನನ್ನ ಪಾಲಿಗೆ ಬಿದ್ದಿತು. ಇವೆಲ್ಲವುಗಳ ಮೇಲೆ ನಮ್ಮ ಇಷ್ಟಕ್ಕೆ ವಿರೋಧವಾಗಿಯೇ ತಗಡಿನ

ಮನೆಗಳನ್ನು ಕಟ್ಟಿದೆವು. ಸಾಧಾರಣ ರೈತರಿಗೆ ತಕ್ಕಹಾಗೆ ಹುಲ್ಲು ಹೊದಿಸಿದ ಮಣ್ಣಿನ ಮನೆಗಳನ್ನೋ ಅಥವಾ ಸಣ್ಣ ಇಟ್ಟಿಗೆಯ ಮನೆಗಳನ್ನೋ ಕಟ್ಟಬೇಕೆಂದು ನಮ್ಮ ಇಷ್ಟವಿದ್ದಿತು. ಆದರೆ ಅದು ಸಾಧ್ಯವಾಗಲಿಲ್ಲ. ಅದಕ್ಕೆ ಖರ್ಚು ಹೆಚ್ಚಾಗುತ್ತಿದ್ದಿತು, ಹೊತ್ತೂ ಬಹಳ ಹಿಡಿಯುತ್ತಿದ್ದಿತು. ನಾವೆಲ್ಲರೂ ಆದಷ್ಟು ಜಾಗ್ರತೆಯಾಗಿ ನೆಲೆಸುವದಕ್ಕೆ ಆತುರರಾಗಿದ್ದೆವು.

ಇನ್ನೂ ಮನಸುಖಲಾಲ ನಾಜರರೇ ಪತ್ರಿಕೆಯ ಸಂಪಾದಕರಾಗಿದ್ದರು. ಅವರು ಈ ಹೊಸ ಏರ್ಪಾಟಿಗೆ ಸೇರದೆ ಡರಬನಿನಲ್ಲಿಯೇ ವಾಸವಾಗಿದ್ದರು. ಡರಬನಿನಲ್ಲಿ 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಕಚೇರಿಯ ಶಾಖೆಯೊಂದಿದ್ದಿತು.

ನಾವು ಅಕ್ಷರ ಜೋಡಿಸುವವರನ್ನು ಸಂಬಳ ಕೊಟ್ಟು ಇಟ್ಟು ಕೊಂಡಿದ್ದರೂ ಈ ಆಶ್ರಮದಲ್ಲಿ ನೆಲೆಸಿರುವ ನಮ್ಮಲ್ಲಿ ಪ್ರತಿಯೊಬ್ಬರೂ ಅಕ್ಷರದ ಮೊಳೆ ಜೋಡಿಸುವದನ್ನು ಕಲಿತುಕೊಳ್ಳಬೇಕೆಂದು ನಮ್ಮ ಅಭಿಪ್ರಾಯವಾಗಿದ್ದಿತು. ಅಚ್ಚಿನ ಕಾರ್ಖಾನೆಯಲ್ಲಿ ಜರುಗುವ ಕೆಲಸಗಳಲ್ಲೆಲ್ಲಾ ಇದು ಅತ್ಯಂತ ಸುಲಭವಾದುದಾದರೂ ಅಲ್ಲಿ ಇದಕ್ಕಿಂತಲೂ ಬೇಸರದ ಕೆಲಸವಿನ್ನೊಂದಿಲ್ಲ. ನಮ್ಮ ಅಭಿಪ್ರಾಯದ ಪ್ರಕಾರ ಆಗಲೇ ಈ ಕೆಲಸ ತಿಳಿಯದೆ ಇದ್ದವರು ಇದನ್ನು ಕಲಿತುಕೊಂಡರು. ಕಡೆಯವರೆಗೂ ನಾನು ಈ ಕೆಲಸದಲ್ಲಿ ದಡ್ಡನಾಗಿಯೇ ಉಳಿದೆನು. ಮಗನಲಾಲ ಗಾಂಧಿಯವರು ನಮ್ಮೆಲ್ಲರನ್ನೂ ಹಿಂದೆ ಹಾಕಿದರು. ಅವರು ಹಿಂದೆ ಎಂದೂ ಛಾಪಾಖಾನೆಯಲ್ಲಿ ಕೆಲಸ ಮಾಡಿರಲಿಲ್ಲವಾದರೂ ಅಕ್ಷರ ಜೋಡಿಸುವದರಲ್ಲಿ ಅತಿ ಕುಶಲರಾಗಿ ಆ ಕೆಲಸವನ್ನು ಹೆಚ್ಚು ವೇಗದಿಂದ ಮಾಡಬಲ್ಲವರಾದುದಲ್ಲದೆ ಮುದ್ರಣಾಲಯಕ್ಕೆ ಸಂಬಂಧಪಟ್ಟ ಇತರ ಕಾರ್ಯಗಳಲ್ಲೆಲ್ಲಾ ಜಾಗ್ರತೆಯಾಗಿ ದಕ್ಷತೆಯನ್ನು ಪಡೆದು ನನಗೆ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟುಮಾಡಿದರು. ಅವರಿಗೆ ತಮ್ಮ ಯೋಗ್ಯತೆಯ ಅರಿವೇ ಇರಲಿಲ್ಲವೆಂದು ನನಗೆ ಸದಾ ತೋರಿಬಂದಿದೆ.

ಕಟ್ಟಡಗಳೆಲ್ಲಾ ಸಿದ್ಧವಾಗಿ ನಾವು ನೆಲೆಸಿದೆವೋ ಇಲ್ಲವೋ ಎನ್ನುವಷ್ಟರಲ್ಲಿಯೇ ನಾನು ಹೊಸದಾಗಿ ಹೂಡಿದ ಗೂಡನ್ನು ಬಿಟ್ಟು ಜೋಹಾನ್ಸ್‌ಬರ್ಗಿಗೆ ಹೋಗಬೇಕಾಗಿ ಬಂದಿತು. ನಾನು ಅಲ್ಲಿಯ ಕೆಲಸವನ್ನು ಎಷ್ಟು ದಿನವಾದರೂ ನೋಡಿಕೊಳ್ಳದೆ ಬಿಟ್ಟಿರುವ ಸ್ಥಿತಿಯಲ್ಲಿರಲಿಲ್ಲ.

ಜೋಹಾನ್ಸ್‌ಬರ್ಗಿಗೆ ಹಿಂತಿರುಗಿದ ಮೇಲೆ ಪೋಲಕರಿಗೂ ನಾನು ನಡೆಸಿದ್ದ ಮಹತ್ವದ ಪರಿವರ್ತನದ ವಿಚಾರವನ್ನು ತಿಳಿಸಿದೆನು. ತಾವು ನನಗೆ ಎರವಾಗಿ ಕೊಟ್ಟಿದ್ದ ಪುಸ್ತಕವು ಹೀಗೆ ಫಲಿಸಿರುವುದೆಂದು ತಿಳಿಯಲು ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ.

"ಈ ಹೊಸ ಸಾಹಸದಲ್ಲಿ ನಾನೂ ಭಾಗಿಯಾಗಲು ಸಾಧ್ಯವಿಲ್ಲವೆ?" ಎಂದು ಅವರು ಕೇಳಿದರು.

"ನಿಮಗೆ ಇಷ್ಟ ತೋರಿದರೆ ನೀವು ಧಾರಾಳವಾಗಿ ಆಶ್ರಮಕ್ಕೆ ಸೇರಬಹುದು." ಎಂದು ನಾನು ಹೇಳಿದೆನು.

"ನೀವು ನನ್ನನ್ನು ಸೇರಿಸುವದಾದರೆ ನಾನು ಸಿದ್ಧನಾಗಿಯೇ ಇದ್ದೇನೆ."

ಅವರ ಮನೋನಿಶ್ಚಯವು ನನ್ನನ್ನು ಮರುಳುಗೊಳಿಸಿತು. 'ಕ್ರಿಟಿಕ್' ಪತ್ರಿಕೆಯ ಕೆಲಸದಿಂದ ತಮ್ಮನ್ನು ವಿಮುಕ್ತರನ್ನಾಗಿ ಮಾಡಬೇಕೆಂದು ಅವರು ತಮ್ಮ ಮುಖ್ಯಸ್ಥರಿಗೆ ಒಂದು ತಿಂಗಳ ತಿಳಿವಳಿಕೆ (ನೋಟೀಸ್) ಕೊಟ್ಟು ಯಥಾಕಾಲಕ್ಕೆ ಫೀನಿಕ್ಸನ್ನು ತಲಪಿದರು. ಅವರು ಜನರೊಡನೆ ಸೇರುವ ಸ್ವಭಾವದವರಾದುದರಿಂದ ಎಲ್ಲರ ಮನಸ್ಸನ್ನೂ ಒಲಿಸಿ ಶೀಘ್ರದಲ್ಲಿಯೇ ನಮ್ಮ ಕುಟುಂಬದಲ್ಲೊಬ್ಬರಂತಾದರು. ಸರಳತೆಯು ಅವರಿಗೆ ಎಷ್ಟರ ಮಟ್ಟಿಗೆ ನೈಜವಾಗಿದ್ದಿತೆಂದರೆ ಅವರಿಗೆ ಫೀನಿಕ್ಸಿನ ಜೀವನವು ವಿಚಿತ್ರವಾಗಿಯಾಗಲಿ ಕಷ್ಟಕರವಾಗಿಯಾಗಲಿ ತೋರುವದರ ಬದಲು ಮೀನಿಗೆ ಸಮುದ್ರವು ಒಂಟುವಂತೆ ಒಂಟಿತು. ಆದರೆ ನಾನು

ಅವರನ್ನು ಅಲ್ಲಿ ಬಹಳ ದಿನ ಇಟ್ಟುಕೊಳ್ಳಲಾಗಲಿಲ್ಲ. ಎಂ. ರಿಚರು ತಮ್ಮ ವಕೀಲಿ ಅಭ್ಯಾಸವನ್ನು ವಿಲಾಯತಿಯಲ್ಲಿ ಪೂರ್ತಿಗೊಳಿಸುವ ದಾಗಿ ನಿಶ್ಚಯಿಸಿದರು. ನಾನು ಒಬ್ಬನೇ ನನ್ನ ವಕೀಲಿ ಕೆಲಸ ವನ್ನು ನಿರ್ವಹಿಸುವಂತಿರಲಿಲ್ಲ. ಆದುದರಿಂದ ನಾನು ಪೋಲಕರಿಗೆ ಅವರು ನನ್ನ ಕಚೇರಿಗೆ ಸೇರಿಕೊಳ್ಳಬೇಕೆಂದೂ ಅವರು ವಕೀಲರಾಗ ಬೇಕೆಂದೂ ಸೂಚಿಸಿದೆನು. ಕಟ್ಟಕಡೆಗೆ ನಾವಿಬ್ಬರೂ ವಕೀಲಿ ಯನ್ನು ಬಿಟ್ಟು ಫೀನಿಕ್ಸಿನಲ್ಲಿ ನೆಲೆಸುವೆವೆಂದು ತಿಳಿದುಕೊಂಡಿದ್ದೆನು. ಆದರೆ ಇದು ನಡೆಯಬೇಕೆಂದು ದೈವೇಚ್ಛೆಯಿರಲಿಲ್ಲ. ಪೋಲಕ ರದು ಎಷ್ಟು ನಂಬಿಕೆಯ ಸ್ವಭಾವವೆಂದರೆ ಅವರು ಒಬ್ಬ ಮಿತ್ರನಲ್ಲಿ ವಿಶ್ವಾಸವನ್ನಿಟ್ಟಮೇಲೆ ಅವನೊಡನೆ ಚರ್ಚಿಸುವದರ ಬದಲು ಅವನ ಅಭಿಪ್ರಾಯವನ್ನು ಅನುಮೋದಿಸಲು ಪ್ರಯತ್ನಪಡುತ್ತಿದ್ದರು. ಅವರು ನನಗೆ ಹೀಗೆ ಬರೆದರು :—

" ಇಲ್ಲಿನ ಜೀವನವು ನನ್ನ ಮನಸ್ಸಿಗೆ ಒಪ್ಪುತ್ತದೆ. ಇಲ್ಲಿ ನಾನು ಅತ್ಯಂತ ಸುಖಿಯಾಗಿದ್ದೇನೆ. ಈ ಆಶ್ರಮವನ್ನು ಅಭಿವೃದ್ಧಿ ಗೊಳಿಸುವ ಆಸೆಯೂ ನನಗಿದೆ. ಆದರೂ ನಾನು ಆಶ್ರಮವನ್ನು ಬಿಟ್ಟು ನಿಮ್ಮ ಕಚೇರಿಗೆ ಸೇರಿ ವಕೀಲನಾಗುವದರಿಂದ ನಮ್ಮ ಧ್ಯೇಯಗಳನ್ನು ಇನ್ನೂ ಶೀಘ್ರವಾಗಿ ಸಫಲಗೊಳಿಸಬಹುದೆಂದು ನೀವು ಯೋಚಿಸುವದಾದರೆ ನಾನು ನಿಮ್ಮ ಸೂಚನೆಯಂತೆ ನಡೆ ಯಲು ಸಿದ್ಧನಾಗಿದ್ದೇನೆ. "

ನನಗೆ ಈ ಪತ್ರದ ಅಭಿಪ್ರಾಯದಿಂದ ಬಹು ಸಂತೋಷವಾ ಯಿತು. ಪೋಲಕರು ಫೀನಿಕ್ಸನ್ನು ಬಿಟ್ಟು ಜೋಹಾನ್ಸಬರ್ಗಿಗೆ ಬಂದು ವಕೀಲರಾದರು.

ಅಲ್ಲಿಯ ವಕೀಲಿ ಪರೀಕ್ಷೆಗೆ ಸಿದ್ಧರಾಗಲು ನಾನು ಒಬ್ಬ ಥಿಯಾಸಫಿಸ್ಟರಾದ ಸ್ಕಾಟ್ಲಂಡ್ ದೇಶಸ್ಥರಿಗೆ ಸಹಾಯ ಮಾಡುತ್ತಿ ದ್ದೆನು. ನನ್ನ ಸಲಹೆಯಮೇರೆಗೆ ಪೋಲಕರನ್ನು ಅನುಸರಿಸಿ ಅವ

ರೂ ಸುಮಾರು ಈ ಸಮಯದಲ್ಲಿಯೇ ನನ್ನ ಕಚೇರಿಗೆ ಸಹಾಯಕ ರಾಗಿ ಸೇರಿದರು. ಅವರ ಹೆಸರು ಎ. ಮೆಕಿನ್ಟೈರ್.

ಫೀನಿಕ್ಸ್ ಆಶ್ರಮದ ಧ್ಯೇಯಗಳನ್ನು ಶೀಘ್ರವಾಗಿ ಸಫಲ ಗೊಳಿಸಬೇಕೆಂಬ ಸದುದ್ದೇಶದಿಂದ ಹೇಗೆ ನಾನು ಅದಕ್ಕೆ ಇದಿ ರಾದ ಪ್ರವಾಹದಲ್ಲಿಯೇ ಹೆಚ್ಚು ಹೆಚ್ಚು ದೂರ ಕೊಚ್ಚಿಕೊಂಡು ಹೋಗುತ್ತಿರುವಂತೆ ಕಾಣುತ್ತಿದ್ದಿತು. ದೇವರ ಇಚ್ಛೆಯು ಬೇರೆ ವಿಧವಾಗಿ ಇರದೆ ಹೋಗಿದ್ದರೆ ಸರಳ ಜೀವನದ ಹೆಸರಿನಲ್ಲಿ ಹರಡಿದ ಬಲೆಯಲ್ಲಿ ನಾನು ಬಂದಿಯಾಗಿಬಿಡುತ್ತಿದ್ದೆನು.

ಯಾರೊಬ್ಬರ ಕಲ್ಪನೆಗೂ ನಿರೀಕ್ಷಣೆಗೂ ವಿರೋಧವಾಗಿ ನಾನೂ ನನ್ನ ಧ್ಯೇಯಗಳೂ ಹೇಗೆ ಪಾರಾದೆವೆಂಬುದನ್ನು ವರ್ಣಿ ಸಲು ಇನ್ನೂ ಕೆಲವು ಅಧ್ಯಾಯಗಳು ಬೇಕು.



೨೨

# ದೇವರ ರಕ್ಷಣೆಗೊಳಗಾದವರು

ಈಗ ನಾನು ಹಿಂದುಸ್ತಾನಕ್ಕೆ ಶೀಘ್ರದಲ್ಲಿಯೇ ಹಿಂತಿರುಗುವ ಆಸೆಯನ್ನು ಬಿಟ್ಟುಬಿಟ್ಟಿದ್ದೆನು. ಒಂದು ವರ್ಷದೊಳಗಾಗಿ ವಾಪಸು ಬರುವೆನೆಂದು ನಾನು ನನ್ನ ಹೆಂಡತಿಗೆ ಮಾತು ಕೊಟ್ಟಿದ್ದೆನು. ವರ್ಷವೇನೋ ಮುಗಿಯಿತು; ಆದರೆ ಹಿಂದಿರುಗುವ ಆಸೆಯು ದೂರವಾಯಿತು. ಆದುದರಿಂದ ನಾನು ನನ್ನ ಹೆಂಡತಿ ಮಕ್ಕಳನ್ನು ಕರೆಸಿಕೊಳ್ಳಬೇಕೆಂದು ನಿಶ್ಚಯಿಸಿದೆನು. ಅವರನ್ನು ದಕ್ಷಿಣ ಆಫ್ರಿಕಕ್ಕೆ ಒಯ್ಯುತ್ತಿದ್ದ ಜಹಜಿನಲ್ಲಿ ನನ್ನ ಮೂರನೆಯ ಮಗನಾದ ರಾಮದಾಸನು ಜಹಜಿನ ಮುಖ್ಯಾಧಿಕಾರಿಯೊಡನೆ ಆಟವಾಡುತ್ತಿರುವಾಗ ಕೈ ಮುರಿದುಕೊಂಡನು. ಮುಖ್ಯಾಧಿಕಾರಿಯು ಅವನನ್ನು ಚೆನ್ನಾಗಿ ನೋಡಿಕೊಂಡು ಜಹಜಿನ ವೈದ್ಯರಿಂದ ಅವನಿಗೆ ಚಿಕಿತ್ಸೆ ಮಾಡಿಸಿದರು. ಆದುದರಿಂದ ರಾಮದಾಸನು ಜಹಜಿನಿಂದಿಳಿದಾಗ ಅವನ ಕೈಯು ಪಟ್ಟಿಯಲ್ಲಿ ತೂಗಕಟ್ಟಿದ್ದಿತು. ನಾವು ಮನೆಯನ್ನು ತಲಪಿದೊಡನೆಯೇ ಯಾರಾದರೂ ಯೋಗ್ಯ ವೈದ್ಯರ ಕೈಯಲ್ಲಿ ಗಾಯಕ್ಕೆ ಚಿಕಿತ್ಸೆ ಮಾಡಿಸಬೇಕೆಂದು ಜಹಜಿನ ವೈದ್ಯರು ಹೇಳಿದ್ದರು. ಆದರೆ ನನ್ನ ಮಣ್ಣಿನ ಚಿಕಿತ್ಸೆಯ ಪ್ರಯೋಗಗಳಲ್ಲಿ ನನಗೆ ಪೂರ್ಣ ವಿಶ್ವಾಸವಿದ್ದುದು ಈ ಸಮಯದಲ್ಲಿಯೇ. ನನ್ನಕುಂಟು ವೈದ್ಯದಲ್ಲಿ ನಂಬಿಕೆಯಿಟ್ಟಿದ್ದ ಕೆಲವು ಕಕ್ಷಿಗಾರರು ಕೂಡ ಮಣ್ಣು ಮತ್ತು ನೀರಿನ ಚಿಕಿತ್ಸೆಯನ್ನು ಮಾಡಿ ನೋಡುವಂತೆ ಪ್ರೇರಿಸಲು ನಾನು ಶಕ್ತನಾಗಿದ್ದೆನು.

ಹಾಗಾದರೆ ನಾನು ರಾಮದಾಸನ ವಿಷಯದಲ್ಲಿ ಮಾಡಬೇಕಾದುದೇನು? ಅವನಿಗೆ ಆಗ ತಾನೆ ಎಂಟು ವರ್ಷ. "ನಿನ್ನ ಗಾಯಕ್ಕೆ ನಾನು ಚಿಕಿತ್ಸೆ ಮಾಡುವದು ನಿನಗೆ ಹಿತವೋ?" ಎಂದು

ನಾನು ಅವನನ್ನು ಕೇಳಲು ಅವನು ಮುಗುಳುನಗೆಯಿಂದ ನಗು ತ್ತಾ ಅದಕ್ಕೆ ಒಪ್ಪಿದನು. ಆ ವಯಸ್ಸಿನಲ್ಲಿ ಅವನಿಗೆ ತನಗೆ ಅತ್ಯಂತ ಹಿತವಾದುದಾವುದೆಂಬುದನ್ನು ನಿಶ್ಚಯಿಸುವದೇನೋ ಸಾಧ್ಯವಾ ಗಿರಲಿಲ್ಲ. ಆದರೆ ಅವನಿಗೆ ಕುಂಟು ವೈದ್ಯಕ್ಕೂ ಯೋಗ್ಯಚಿಕಿತ್ಸೆ ಗೂ ಇರುವ ವ್ಯತ್ಯಾಸವು ಚೆನ್ನಾಗಿ ಗೊತ್ತಿದ್ದಿತು. ನಾನು ಮನೆ ಯಲ್ಲಿಯೇ ಮದ್ದು ಮಾಡುವ ಅಭ್ಯಾಸವು ಅವನಿಗೆ ತಿಳಿದಿದ್ದಿತು. ನನ್ನ ಚಿಕಿತ್ಸೆಗೆ ಒಪ್ಪುವಷ್ಟು ನಂಬಿಕೆಯು ಅವನಿಗಿದ್ದಿತು. ಹೆದ ರುತ್ತಾ ನಡುಗುತ್ತಾ ನಾನು ಪಟ್ಟಿಯನ್ನು ಬಿಚ್ಚಿ ಗಾಯವನ್ನು ತೊಳೆದು ಶುಚಿಯಾದ ಮಣ್ಣಿನ ಸರಿಯನ್ನು ಹಾಕಿ ಪುನಃ ಪಟ್ಟಿ ಯನ್ನು ಕಟ್ಟಿದೆನು. ಹೀಗೆಯೇ ಒಂದು ತಿಂಗಳು ಪ್ರತಿದಿನವೂ ಚಿಕಿತ್ಸೆ ಮಾಡಲು ಗಾಯವು ಸಂಪೂರ್ಣವಾಗಿ ಮಾಯಿತು. ಗಾ ಯವು ಒಂದೇ ಸಮನಾಗಿ ಗುಣವಾಗುತ್ತಾ ಬಂದಿತಲ್ಲದೆ ಸಾಧಾ ರಣ ಚಿಕಿತ್ಸೆಯಿಂದ ಎಷ್ಟು ಕಾಲದಲ್ಲಿ ಅದು ಗುಣವಾಗುವುದೆಂದು ಜಹಜಿನ ವೈದ್ಯರು ಹೇಳಿದ್ದರೋ ಅದಿಕ್ಕಿಂತ ಹೆಚ್ಚು ಕಾಲ ಹಿಡಿಯ ಲಿಲ್ಲ.

ಈ ಮತ್ತು ಇತರ ಪ್ರಯೋಗಗಳು ನನಗೆ ಮನೆಮದ್ದುಗ ಳಲ್ಲಿದ್ದ ವಿಶ್ವಾಸವನ್ನು ಹೆಚ್ಚಿಸಿದುವು. ನಾನು ಇನ್ನೂ ಹೆಚ್ಚಾದ ಧೈರ್ಯದಿಂದ ಈ ಪ್ರಯೋಗಗಳನ್ನು ನಡೆಸತೊಡಗಿದೆನು. ಗಾಯ, ಜ್ವರ, ಅಜೀರ್ಣ, ಕಾಮಾಲೆ ಮತ್ತು ಇತರ ರೋಗಗಳಿಗೆ ಮಣ್ಣು ನೀರು ಮತ್ತು ಉಪವಾಸದ ಚಿಕಿತ್ಸೆಯನ್ನು ಮಾಡಿದೆನು. ಈ ಪ್ರಯೋಗಗಳು ಬಹುಮಟ್ಟಿಗೆ ಸಫಲವಾದುವು. ಹೀಗೆ ನಾನು ಪ್ರಯೋಗಕ್ಷೇತ್ರವನ್ನು ವಿಸ್ತರಿಸಿದೆನು. ಆದರೆ ಈಗ ನನಗೆ ಇವು ಗಳಲ್ಲಿ ದಕ್ಷಿಣ ಆಫ್ರಿಕದಲ್ಲಿದ್ದಷ್ಟು ದೃಢ ನಂಬಿಕೆಯಿಲ್ಲ. ಈ ಪ್ರಯೋಗಗಳಲ್ಲಿ ಸ್ಪಷ್ಟವಾಗಿ ಅಪಾಯಗಳಿವೆ ಎಂದು ಕೂಡ ಈಗ ಅನುಭವದಿಂದ ಗೊತ್ತಾಗಿದೆ.

ಆದುದರಿಂದ ಇಲ್ಲಿ ಈ ಪ್ರಯೋಗಗಳ ವಿಚಾರವನ್ನು ಹೇಳಿರು ವದು ಅವುಗಳ ಸಫಲತೆಯನ್ನು ತೋರಿಸುವದಕ್ಕಲ್ಲ. ಯಾವ

ಪ್ರಯೋಗವೂ ಸರ್ವಾಂಶ ಸಫಲತೆಯನ್ನು ಪಡೆಯಿತೆಂದು ನಾನು ಹೇಳುವಹಾಗಿಲ್ಲ. ವೈದ್ಯಶಾಸ್ತ್ರಜ್ಞರು ಕೂಡ ತಮ್ಮ ಪ್ರಯೋಗಗಳ ವಿಷಯವಾಗಿ ಹಾಗೆ ಹೇಳಲಾಗುವದಿಲ್ಲ. ಹೊಸ ಪ್ರಯೋಗಗಳನ್ನು ಮಾಡಲೆಳಸುವವರು ಅವನ್ನು ಮೊಟ್ಟಮೊದಲು ತಮ್ಮ ಮೇಲೆಯೇ ಮಾಡಿಕೊಳ್ಳಬೇಕೆಂದು ತಿಳಿಸುವದಷ್ಟೇ ನನ್ನ ಉದ್ದೇಶ. ಇದರಿಂದ ಸತ್ಯಾನ್ವೇಷನವು ಇನ್ನೂ ಶೀಘ್ರವಾಗಿ ಆಗುತ್ತದೆ. ಶುದ್ಧ ಮನಸ್ಸಿನಿಂದ ಪ್ರಯೋಗ ನಡೆಸುವವನನ್ನು ದೇವರು ಯಾವಾಗಲೂ ರಕ್ಷಿಸುತ್ತಾನೆ.

ಐರೋಪ್ಯರೊಡನೆ ನಿಕಟಸಂಪರ್ಕವನ್ನು ಬೆಳೆಸುವದರಲ್ಲಿನ ಅಪಾಯಗಳು ಪ್ರಕೃತಿ ಚಿಕಿತ್ಸೆಯಲ್ಲಿನ ಅಪಾಯಗಳಷ್ಟೇ ಅಧಿಕವಾಗಿದ್ದುವು. ಅವು ಬೇರೆ ವಿಧದವೆಂಬುದೊಂದೇ ವ್ಯತ್ಯಾಸ. ಆದರೆ ಈ ಸಂಬಂಧಗಳನ್ನು ಬೆಳೆಸುವದರಲ್ಲಿ ನಾನು ಅಪಾಯಗಳ ಯೋಚನೆಯನ್ನು ಕೂಡ ಮಾಡಲಿಲ್ಲ.

ನಾನು ಪೋಲಕರನ್ನು ನನ್ನೊಡನೆ ವಾಸಿಸಲು ಕರೆದೆನು. ನಾವು ಖಾಸಾ ಅಣ್ಣತಮ್ಮಂದಿರಂತೆ ವಾಸಿಸತೊಡಗಿದೆವು. ಅವರಿಗೂ ಅವರನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದಾಕೆಗೂ ವಿವಾಹವು ನಿಶ್ಚಯವಾಗಿ ಕೆಲವು ವರ್ಷಗಳಾಗಿದ್ದರೂ ಅವರು ಮದುವೆಗಾಗಿ ಸುಸಮಯವನ್ನು ಕಾಯುತ್ತಿದ್ದರು. ಸಂಸಾರವನ್ನು ಹೂಡುವದಕ್ಕೆ ಮುಂಚೆ ಸ್ವಲ್ಪ ಹಣವನ್ನು ಶೇಖರಿಸಬೇಕೆಂದು ಪೋಲಕರ ಇಷ್ಟವಿದ್ದಂತೆ ನನಗೆ ನೆನಪಿದೆ. ಅವರಿಗೆ ನನಗಿಂತ ಚೆನ್ನಾಗಿ ರಸ್ಕಿನರ ತತ್ವಗಳು ಮುಂದಟ್ಟಾಗಿದ್ದರೂ ಅವರು ಅವುಗಳನ್ನು ಒಡನೆಯೇ ಅವಲಂಬಿಸುವದಕ್ಕೆ ಅವರ ಪಾಶ್ಚಾತ್ಯ ವಾತಾವರಣವು ಅಡಚಣೆಯಾಗಿದ್ದಿತು. ಆದರೆ ನಾನು ಅವರೊಂದಿಗೆ ಹೀಗೆ ವಾದಿಸಿದೆನು :—"ನಿಮ್ಮಂತೆ ಹೃದಯದಲ್ಲಿ ಒಬ್ಬರನ್ನು ಒಬ್ಬರು ವರಿಸಿದಮೇಲೆ ಕೇವಲ ಹಣದ ಅನಾನುಕೂಲದಿಂದ ಮದುವೆಯನ್ನು ಮುಂದಕ್ಕೆ ಹಾಕುವದು ಉಚಿತವಲ್ಲ. ದಾರಿದ್ರ್ಯವೇ

ಅಡಚಣೆಯಾದರೆ ಬಡವರು ಮದುವೆ ಮಾಡಿಕೊಳ್ಳಲಾಗುವದೇ ಇಲ್ಲ. ಇದಲ್ಲದೆ ಈಗ ನೀವು ನನ್ನೊಡನೆ ಇರುವದರಿಂದ ಮನೆಯ ವೆಚ್ಚದ ಯೋಚನೆಗೇ ಅವಕಾಶವಿಲ್ಲ. ಆದಷ್ಟು ಜಾಗ್ರತೆ ನೀವು ಮದುವೆ ಮಾಡಿಕೊಳ್ಳಬೇಕೆಂದು ನನಗೆ ತೋರುತ್ತದೆ." ನಾನು ಹಿಂದೆಯೇ ಹೇಳಿರುವಂತೆ ಪೋಲಕರೊಡನೆ ನಾನು ಎರಡು ಸಲ ವಾದಿಸಬೇಕಾಗುತ್ತಲೇ ಇರಲಿಲ್ಲ. ನಾನು ಹೇಳಿದುದರ ಔಚಿತ್ಯ ವನ್ನು ಮನ್ನಿಸಿ ಅವರು ಒಡನೆಯೇ ಆಗ ವಿಲಾಯತಿಯಲ್ಲಿದ್ದ ಶ್ರೀಮತೀ ಪೋಲಕ (ತಾವುಮದುವೆಯಾಗಬೇಕೆಂದಿದ್ದಾಕೆ)ರೊಡನೆ ಕಾಗದ ಪತ್ರ ಬೆಳೆಸಿದರು. ಆಕೆಯೂ ಈ ಸೂಚನೆಯನ್ನು ಸಂತೋಷ ದಿಂದ ಅಂಗೀಕರಿಸಿ ಕೆಲವು ತಿಂಗಳಲ್ಲಿಯೇ ಜೋಹಾನ್ಸಬರ್ಗಿಗೆ ಬಂದರು. ಮದುವೆಗಾಗಿ ಹೆಚ್ಚು ವೆಚ್ಚಮಾಡುವ ಉದ್ದೇಶವೇ ಇರಲಿಲ್ಲ. ಅದಕ್ಕಾಗಿ ಪ್ರತ್ಯೇಕವಾದ ಉಡುಪು ಕೂಡ ಅಗತ್ಯ ವೆಂದು ಎಣಿಸಲ್ಪಡಲಿಲ್ಲ. ಅವರ ವಿವಾಹಕ್ಕೆ ಧರ್ಮವಿಧಿಯ ಮುದ್ರೆಯೂ ಬೇಕಾಗಿಯೇ ಇರಲಿಲ್ಲ. ಪೋಲಕರ ಹೆಂಡತಿಯೂ ಜನ್ಮತಃ ಈಸಾಯಿಯಾಗಿಯೂ ಪೋಲಕರು ಯಹೂದ್ಯರಾಗಿಯೂ ಇದ್ದರು. ಅವರಿಬ್ಬರಿಗೂ ಸಾಮಾನ್ಯವಾದ ಧರ್ಮವು ನೀತಿಧರ್ಮವೇ.

ಈ ಮದುವೆಯ ಕಾಲದಲ್ಲಿ ಸಂಭವಿಸಿದ ಒಂದು ವಿನೋದ ಘಟನೆಯನ್ನು ಇಲ್ಲಿ ತಿಳಿಸುತ್ತೇನೆ. ಟ್ರಾನ್ಸ್‌ವಾಲಿನ ಐರೋಪ್ಯ ವಿವಾಹದ ದಾಖಲೆಯ ಅಧಿಕಾರಿಗೆ ಬಿಳಿಯರಲ್ಲದೆ ಇತರರ ವಿವಾಹ ಗಳನ್ನು ದಾಖಲೆ ಮಾಡುವ ಅಧಿಕಾರವಿರಲಿಲ್ಲ. ಈ ಮದುವೆಯಲ್ಲಿ ನಾನೇ 'ಗೆಳೆಯ'*(ಬೆಸ್ಟ್ ಮ್ಯಾನ್)ನಾಗಿದ್ದೆನು. ಐರೋಪ್ಯ ಮಿತ್ರ ರಾರೂ ಈ ಸ್ಥಾನಕ್ಕೆ ದೊರಕುತ್ತಿರಲಿಲ್ಲವೆಂದಲ್ಲ, ಪೋಲಕರು ಈ ಸೂಚನೆಗೇ ಕಿವಿಗೊಡಲಿಲ್ಲ. ಆದುದರಿಂದ ನಾವು ಮೂರು ಮಂದಿ ದಾಖಲೆಯ ಅಧಿಕಾರಿಯ ಬಳಿಗೆ ಹೋದೆವು. ನಾನು 'ಗೆಳೆಯ'

---

* ಈಸಾಯಿ ಮದುವೆಯು ಸಾಂಗವಾಗಬೇಕಾದರೆ ವರನ ಕಡೆ ಬೆಸ್ಟ್ ಮ್ಯಾನ್ (ಗೆಳೆಯ) ಎಂದೊಬ್ಬನು ಇರಬೇಕು.

ನಾಗಿರುವ ಮದುವೆಯಲ್ಲಿ ವಧೂವರರು ಬಿಳಿಯರೇ ಎಂದು ಆ ಅಧಿಕಾರಿಯು ನಂಬುವದೆಂತು? ಈ ವಿಚಾರವನ್ನು ಸರಿಯಾಗಿ ಕಂಡುಹಿಡಿಯುವವರೆಗೆ ದಾಖಲೆಮಾಡುವದನ್ನು ನಿಲ್ಲಿಸಬೇಕೆಂದು ಆತನು ಸೂಚಿಸಿದನು. ಮರುದಿನ ಭಾನುವಾರ. ಅದರ ಮಾರನೆಯ ದಿನ ವರ್ಷಾರಂಭದ ಹಬ್ಬ—ಅಂದು ಸಕಲರಿಗೂ ರಜಾ. ಯಥಾಕ್ರಮವಾಗಿ ಆ ದಿನಕ್ಕೆ ಗೊತ್ತುಮಾಡಿದ್ದ ವಿವಾಹವನ್ನು ಇಂತಹ ಟೊಳ್ಳು ನೆಪಕ್ಕಾಗಿ ಮುಂದೆ ಹಾಕುವದೆಂದರೆ ಯಾರಿಗೂ ಸಹಿಸುವಂತಿರಲಿಲ್ಲ. ದಾಖಲೆ ಇಲಾಖೆಯ ಮುಖ್ಯಾಧಿಕಾರಿಗಳಾದ ಶ್ರೇಷ್ಠ ಪ್ರಜಾಶಾಂತಿರಕ್ಷಕ (ಚೀಫ್ ಮ್ಯಾಜಿಸ್ಟ್ರೇಟ)ರ ಪರಿಚಯವು ನನಗಿದ್ದಿತು. ನಾನು ವಧೂವರರೊಂದಿಗೆ ಅವರ ಬಳಿಗೆ ಹೋದೆನು. ಅವರು ನಕ್ಕು ದಾಖಲೆಯ ಅಧಿಕಾರಿಗೆ ಒಂದು ಕಾಗದವನ್ನು ಬರೆದು ನನ್ನ ಕೈಗೆ ಕೊಟ್ಟರು. ಅಂತು ಕಟ್ಟಕಡೆಗೆ ವಿವಾಹವು ದಾಖಲಾಯಿತು.

ಇದುವರೆಗೆ ನನ್ನೊಡನೆ ವಾಸಿಸುತ್ತಿದ್ದ ಐರೋಪ್ಯರೆಲ್ಲರೂ ನನಗೆ ಮುಂಚೆಯೇ ಹೆಚ್ಚುಕಡಿಮೆ ಪರಿಚಿತರಾದವರಾಗಿರುತ್ತಿದ್ದರು. ಆದರೆ ಈಗ ಕೇವಲ ಅಪರಿಚಿತರಾದ ಆಂಗ್ಲ ಮಹಿಳೆಯೊಬ್ಬಾಕೆಯು ನಮ್ಮ ಸಂಸಾರಕ್ಕೆ ಬಂದು ಸೇರಿದರು. ಈ ನೂತನ ದಂಪತಿಗಳೊಂದಿಗೆ ಎಂದೂ ಮನಃಕ್ಲೇಶವಾದಂತೆ ನನಗೆ ನೆನಪಿಲ್ಲ. ಆದರೆ ಪೋಲಕರ ಹೆಂಡತಿಗೂ ನನ್ನ ಹೆಂಡತಿಗೂ ಜಗಳಗಳೇನಾದರೂ ಆಗಿದ್ದರೆ ಅವು ಸಜಾತೀಯ ಸುವ್ಯವಸ್ಥಿತ ಕುಟುಂಬಗಳಲ್ಲಿ ಆಗುವದಕ್ಕಿಂತ ಹೆಚ್ಚಿನವೇನೂ ಆಗಿರಲಿಲ್ಲ. ಮತ್ತು ನನ್ನ ಕುಟುಂಬದಲ್ಲಂತು ಎಲ್ಲಾ ವಿಧದ ಎಲ್ಲಾ ಸ್ವಭಾವದ ಜನರೂ ತಡೆಯಿಲ್ಲದೆ ಸೇರುತ್ತಿದ್ದರಾದುದರಿಂದ ಅದನ್ನು ವಿವಿಧ ಗುಣಗಳ ಕೂಟವೆಂದೆ ಎಣಿಸಬೇಕೆಂಬುದನ್ನು ಮರೆಯಕೂಡದು. ನಾವು ವಿಚಾರಮಾಡಿ ನೋಡಿದರೆ ಸಜಾತೀಯವಿಜಾತೀಯವೆಂಬ ಭೇದವು ಕೇವಲ ಕಲ್ಪನೆಯದೆಂದು ಗೊತ್ತಾಗುತ್ತದೆ. ನಾವೆಲ್ಲಾ ಒಂದೇ ಕುಟುಂಬಕ್ಕೆ ಸೇರಿದವರೇ.

ವೆಸ್ಟರ ವಿವಾಹೋತ್ಸವವನ್ನೂ ಈ ಅಧ್ಯಾಯದಲ್ಲಿಯೇ ನಡೆಸಿಬಿಡೋಣ. ಈ ಸಮಯದಲ್ಲಿ ಬ್ರಹ್ಮಚರ್ಯದ ವಿಷಯವಾಗಿ ನನ್ನ ಅಭಿಪ್ರಾಯಗಳು ಇನ್ನೂ ಪಕ್ವಕ್ಕೆ ಬಂದಿರಲಿಲ್ಲ. ಆದುದರಿಂದ ನಾನು ಇನ್ನೂ ಮದುವೆಯಾಗದಿದ್ದ ನನ್ನ ಮಿತ್ರರೆಲ್ಲರ ಮದುವೆಗೆ ಸಂಧಾನ ಮಾಡುತ್ತಿದ್ದೆನು. ಯಥಾಕಾಲದಲ್ಲಿ ವೆಸ್ಟರು ಮಾತಾಪಿತೃಸಂದರ್ಶನಾರ್ಥಿಗಳಾಗಿ ಲೌತ್ (ಇಂಗ್ಲೆಂಡಿನಲ್ಲಿ ಒಂದು ಊರು)ಗೆ ಯಾತ್ರೆ ಹೊರಟಾಗ ನಾನು ಅವರಿಗೆ "ಹಿಂತಿರುಗುವಾಗ ಸಾಧ್ಯವಾದರೆ ಮದುವೆಮಾಡಿಕೊಂಡು ಬನ್ನಿ." ಎಂದು ಸಲಹೆಕೊಟ್ಟೆನು. ಫೀನಿಕ್ಸ್ ಆಶ್ರಮವು ನಮ್ಮೆಲ್ಲರ ಮನೆಯಾಗಿದ್ದಿತು.' ನಾವೆಲ್ಲರೂ ಈಗ ರೈತರಾಗಿಬಿಟ್ಟಿರುವೆವೆಂಬ ಎಣಿಕೆಯಿದ್ದುದರಿಂದ ನಾವು ಮದುವೆಗಾಗಲಿ ಅದರ ಸಾಮಾನ್ಯ ಪರಿಣಾಮಕ್ಕಾಗಲಿ ಹೆದರುತ್ತಿರಲಿಲ್ಲ. ವೆಸ್ಟರು ಲೆಸ್ಟರ್‌ಷೈರಿ (ಇಂಗ್ಲೆಂಡಿನ ಒಂದು ಜಿಲ್ಲೆ)ಸ ಸುಂದರ ಯುವತಿಯೊಬ್ಬರನ್ನು ಮದುವೆಮಾಡಿಕೊಂಡು ಅವರೊಡನೆ ವಾಪಸು ಬಂದರು. ಆಕೆಯು ಆ ಜಿಲ್ಲೆಯ ಜೋಡಿನ ಕಾರ್ಖಾನೆಯೊಂದರಲ್ಲಿ ಕೆಲಸಮಾಡುತ್ತಿದ್ದ ಒಂದು ಕುಟುಂಬಕ್ಕೆ ಸೇರಿದ್ದರು. ಆಕೆಗೆ ಕೂಡ ಈ ಕಾರ್ಖಾನೆಯಲ್ಲಿ ಕೆಲಸಮಾಡಿ ಸ್ವಲ್ಪ ಅನುಭವವಿದ್ದಿತು. ನಾನು ಆಕೆಯು ಸೌಂದರ್ಯವತಿಯೆಂದು ಹೇಳಿದ್ದೇನೆ. ಏಕೆಂದರೆ ಆಕೆಯ ಸದ್ಗುಣಸೌಂದರ್ಯವು ನನ್ನನ್ನು ಒಡನೆಯೇ ಆಕರ್ಷಿಸಿತು. ಸರಿಯಾಗಿ ನೋಡಿದರೆ ವಿಶುದ್ಧಾಂತಃಕರಣವೇ ನಿಜವಾದ ಸೌಂದರ್ಯ. ವೆಸ್ಟರ ಹೆಂಡತಿಯೊಡನೆ ಅವರ ಅತ್ತೆಯೂ ಬಂದಿದ್ದರು. ಆ ಮುದುಕಿಯು ಇನ್ನೂ ಜೀವನಂತರಾಗಿದ್ದಾರೆ. ತಮ್ಮ ಉದ್ಯೋಗತತ್ಪರತೆಯಿಂದಲೂ ನಿರಂತರಹಸನ್ಮುಖದಿಂದಲೂ ಆಕೆಯು ನಮ್ಮೆಲ್ಲರನ್ನೂ ನಾಚಿಕೆಗೊಳಿಸುತ್ತಿದ್ದರು.

ನಾನು ಈ ಐರೋಪ್ಯ ಮಿತ್ರರನ್ನು ಮದುವೆಮಾಡಿಕೊಳ್ಳಲು ಪ್ರೇರಿಸಿದಂತೆಯೇ ಭಾರತೀಯ ಮಿತ್ರರು ತಮ್ಮ ಸಂಸಾರವನ್ನು

ಹಿಂದುಸ್ತಾನದಿಂದ ಕರೆಸಲು ಪ್ರೋತ್ಸಾಹಿಸಿದೆನು. ಐದಾರು ಸಂಸಾರಗಳು ಅಲ್ಲಿ ನೆಲೆಸಿ ಅಭಿವೃದ್ಧಿಹೊಂದಿ ಫೀನಿಕ್ಸ ಆಶ್ರಮವು ಹೀಗೆ ಒಂದು ಸಣ್ಣ ಹಳ್ಳಿಯಾಗಿ ಬೆಳೆಯಿತು.



## ೨೩

# ಗೃಹಕೃತ್ಯದ ಒಂದು ದೃಶ್ಯ

ಡರಬನಿನಲ್ಲಿ ಗೃಹಕೃತ್ಯದ ವೆಚ್ಚವು ಹೆಚ್ಚಾಗಿದ್ದಿತಾದರೂ ಮನಸ್ಸು ಸರಳ ಜೀವನದ ಕಡೆಗೆ ಅಲ್ಲಿಯೇ ಬಾಗಿತೆಂದು ನಾವು ಆಗಲೇ ನೋಡಿದ್ದೇವೆ. ಆದರೆ ಜೋಹಾನ್ಸ್‌ಬರ್ಗನಲ್ಲಿ ಮನೆಯ ಆಡಳಿತವು ರಸ್ಕಿನರ ಉಪದೇಶದ ದೆಸೆಯಿಂದ ಬಹಳವಾಗಿ ಮಾರ್ಪಟ್ಟಿತು.

ಬ್ಯಾರಿಸ್ಟರ ಮನೆಯಲ್ಲಿ ಎಷ್ಟು ಸಾಧ್ಯವೊ ಅಷ್ಟುಮಟ್ಟಿನ ಸರಳತೆಯನ್ನು ನಾನು ನನ್ನ ಮನೆಯಲ್ಲಿ ಹಬ್ಬಿಸಿದೆನು. ಸ್ವಲ್ಪ ಮಟ್ಟಿಗೆ ಕುರ್ಚಿ ಮೇಜು ಮುಂತಾದ ಸಾಮಾನುಗಳನ್ನು ಇಟ್ಟುಕೊಳ್ಳದಿರುವದು ಸಾಧ್ಯವಿರಲಿಲ್ಲ. ಬಾಹ್ಯಸುಧಾರಣೆಗಿಂತಲೂ ಆಂತರಿಕ ಪರಿವರ್ತನೆಯೇ ಹೆಚ್ಚಾಗಿದ್ದಿತು. ಶಾರೀರಿಕ ಕೆಲಸಗಳನ್ನೆಲ್ಲಾ ಸ್ವತಃ ಮಾಡುವದರಲ್ಲಿ ಆಸಕ್ತಿಯು ಹೆಚ್ಚಿತು. ಆದುದರಿಂದ ನನ್ನ ಮಕ್ಕಳಿಗೂ ಈ ಶಿಕ್ಷಣವನ್ನೇ ಕೊಡತೊಡಗಿದೆನು.

ಅಂಗಡಿಯ ರೊಟ್ಟಿಯನ್ನು ಕೊಳ್ಳುವದರ ಬದಲು ಕ್ಯೂನೆವರು ಹೇಳಿರುವಂತೆ ಹುಳಿ ಸೋಕದ ಹೊಟ್ಟುತೆಗೆಯದ ಹಿಟ್ಟಿನಿಂದ* ರೊಟ್ಟಿಯನ್ನು ಮನೆಯಲ್ಲಿಯೇ ಮಾಡತೊಡಗಿದೆವು. ಇದಕ್ಕೆ ಸಾಮಾನ್ಯವಾಗಿ ದೊರಕುವ ಹಿಟ್ಟು ಪ್ರಯೋಜನವಿಲ್ಲವಾದುದರಿಂದ ಕೈಯಿಂದ ಬೀಸಿದ ಹಿಟ್ಟು ಹೆಚ್ಚು ಸರಳತೆ, ಆರೋಗ್ಯ, ಉಳಿತಾಯಗಳಲ್ಲಿ ಫಲಿಸುವದೆಂದು ಯೋಚಿಸಿದೆವು. ಆದುದರಿಂದ ನಾನು ೭ ಪೌಂಡು ಕೊಟ್ಟು ಬೀಸುವ ಕಲ್ಲನ್ನು ತೆಗೆದುಕೊಂಡೆನು.

---

* ಯಂತ್ರಗಳಲ್ಲಿ ಹಸನು ಮಾಡಿರುವ ಧಾನ್ಯದಲ್ಲಿ ಹೊಟ್ಟೆಲ್ಲಾ ಹೋಗಿರುವದರಿಂದ ಅದರ ಸತ್ವವು ತೊಲಗಿ ಅಂತಹ ಧಾನ್ಯವು ಆರೋಗ್ಯಕ್ಕೆ ಹಾನಿಕರವೆಂದು ಇಂದಿನ ವೈದ್ಯಶಾಸ್ತ್ರಜ್ಞರ ಅಭಿಪ್ರಾಯ.

ಇದು ಕಬ್ಬಿಣದ್ದಾದುದರಿಂದ ಒಬ್ಬರು ಬೀಸಲು ಇದು ಬಹು ಭಾರವಾಗಿದ್ದಿತು. ಆದರೆ ಇಬ್ಬರು ಇದನ್ನು ಸುಲಭವಾಗಿ ತಿರುಗಿಸಲಾಗುತ್ತಿದ್ದಿತು. ಹೆಚ್ಚುವುಟ್ಟಿಗೆ ಪೋಲಕರು, ನಾನು ಮತ್ತು ಹುಡುಗರು ಬೀಸುತ್ತಿದ್ದೆವು. ಬೀಸುವ ಹೊತ್ತೇ ಕಸ್ತೂರಿಬಾಯಿಗೆ ಅಡಿಗೆಯ ಸಮಯವಾಗಿರುತ್ತಿದ್ದಿತು. ಆದರೂ ಒಮ್ಮೊಮ್ಮೆ ಆಕೆಯೂ ಈ ಕೆಲಸಕ್ಕೆ ಕೈಹಾಕುತ್ತಿದ್ದಳು. ಈಗ ಪೋಲಕರ ಹೆಂಡತಿಯು ಬಂದ ಮೇಲೆ ಆಕೆಯು ನಮಗೆ ನೆರವಾದರು. ಈ ಕೆಲಸವು ಹುಡುಗರಿಗೆ ಬಹು ಲಾಭದಾಯಕವಾದ ವ್ಯಾಯಾಮವಾಯಿತು. ಈ ಕೆಲಸವನ್ನಾಗಲಿ ಅಥವಾ ಇನ್ನಾವದನ್ನಾಗಲಿ ಅವರ ಮೇಲೆ ಒತ್ತಾಯದಿಂದ ಹೊರಿಸುತ್ತಿರಲಿಲ್ಲ. ಆದರೆ ತಾವೂ ಬಂದು ನೆರವಾಗುವದು ಅವರಿಗೊಂದು ಆಟವಾಗಿದ್ದಿತು. ಬೇಸರವಾದೊಡನೆ ಬಿಟ್ಟುಬಿಡಲು ಅವರಿಗೆ ಯಾವ ಅಡ್ಡಿಯೂ ಇರಲಿಲ್ಲ. ಆದರೆ ಈ ಹುಡುಗರಾಗಲಿ ನಾನು ಮುಂದೆ ಪಾಠಕರಿಗೆ ಪರಿಚಯ ಮಾಡಿಕೊಡಬೇಕಾಗಿಬರುವ ಹುಡುಗರಾಗಲಿ ಸಾಮಾನ್ಯವಾಗಿ ಎಂದೂ ಕೆಲಸಕ್ಕೆ ಹಿಂತೆಗೆಯುತ್ತಿರಲಿಲ್ಲ. ಮೈಗಳ್ಳರೊಬ್ಬರೂ ಇರಲಿಲ್ಲವೆಂದಲ್ಲ. ಮುಕ್ಕಾಲು ಪಾಲು ಜನ ನಗುಮೊಗದಿಂದಲೇ ಕೆಲಸಮಾಡುತ್ತಿದ್ದರು. ಕೆಲಸಕ್ಕೆ ಹಿಂದೇಟು ಹಾಕುತ್ತಿದ್ದ ಅಥವಾ ಆಯಾಸವಾಯಿತು ಎನ್ನುತ್ತಿದ್ದ ಹುಡುಗರು ಹೆಚ್ಚಾಗಿ ಇದ್ದಂತೆ ನನಗೆ ನೆನಪಿಲ್ಲ.

ಮನೆಯನ್ನು ನೋಡಿಕೊಳ್ಳುವದಕ್ಕೆ ನಾವು ಒಬ್ಬ ಆಳನ್ನು ಇಟ್ಟುಕೊಂಡಿದ್ದೆವು. ಅವನು ಕುಟುಂಬಕ್ಕೆ ಸೇರಿದವನಾಗಿ ನಮ್ಮೊಡನೆಯೇ ವಾಸಿಸುತ್ತಿದ್ದನು. ಅವನ ಕೆಲಸದಲ್ಲಿ ಹುಡುಗರು ಅವನಿಗೆ ನೆರನಾಗುತ್ತಿದ್ದರು. ಪೌರಸಭೆಯ ಝಾಡಮಾಲಿಯೊಬ್ಬನು ಮಲಜಲಾದಿಗಳನ್ನು ಹೊತ್ತುಕೊಂಡು ಹೋಗುತ್ತಿದ್ದನು. ನಾವೇ ಕಕ್ಕಸವನ್ನು ಶುಚಿಮಾಡುತ್ತಿದ್ದೆವು. ಆಳು ಮಾಡುವನೆಂದು ನಿರೀಕ್ಷಿಸುತ್ತಿರಲಿಲ್ಲ. ಮಾಡಬೇಕೆಂದು ಅವನಿಗೆ ಹೇಳುತ್ತಲೂ ಇರಲಿಲ್ಲ. ಇದು ಹುಡುಗರಿಗೆ ಒಳ್ಳೆಯ ಶಿಕ್ಷಣ

ವಾಯಿತು. ಇದರ ಫಲವೇನಾಯಿತೆಂದರೆ, ನನ್ನ ಮಕ್ಕಳಲ್ಲಿ ಒಬ್ಬರಿಗೂ ಝಾಡಮಾಲಿಯ ಕೆಲಸದಲ್ಲಿ ಅಸಹ್ಯ ಹುಟ್ಟದಿದ್ದು ದಲ್ಲದೆ ನೈರ್ಮಲ್ಯರಕ್ಷಣೆಯ ಸಾಧಾರಣ ಪರಿಜ್ಞಾನವು ಅವರಿಗೆ ಸ್ವಾಭಾವಿಕವಾಗಿಯೇ ಉಂಟಾಯಿತು. ಜೋಹಾನ್ಸ್‌ಬರ್ಗಿನ ಮನೆ ಯಲ್ಲಿ ಕಾಹಿಲೆ ಬಂದುದೇ ಅಪೂರ್ವ. ಅದು ಬಂದಾಗ ಹುಡುಗರು ಶ್ರದ್ಧಾಪೂರ್ವಕವಾಗಿ ರೋಗಿಯ ಶುಶ್ರೂಷೆಯನ್ನು ಮಾಡು ತ್ತಿದ್ದರು. ಅವರಿಗೆ ಸಾಹಿತ್ಯಶಿಕ್ಷಣವನ್ನು ಕೊಡುವ ವಿಚಾರ ವಾಗಿ ನಾನು ಉದಾಸೀನನಾಗಿದ್ದೆನೆಂದು ಹೇಳುವದಿಲ್ಲ. ಆದರೆ ಇತರ ಶಿಕ್ಷಣಕ್ಕಾಗಿ ಅದನ್ನು ಬಲಿಗೊಡಲು ನಾನು ಹಿಂತೆಗೆಯ ಲಿಲ್ಲ. ಆದುದರಿಂದ ಈ ವಿಷಯವಾಗಿ ನನ್ನ ಮಕ್ಕಳು ನನ್ನನ್ನು ಆಕ್ಷೇಪಿಸಲು ಎಡೆಯಿದೆ. ಅವರು ಹಾಗೆ ಮಾಡಿಯೂ ಇದ್ದಾರೆ. ಅದಕ್ಕೆ ಉತ್ತರವಾಗಿ ನಾನು ಸ್ವಲ್ಪಮಟ್ಟಿಗೆ ತಪ್ಪಿತಸ್ಥನೆಂದೇ ಹೇಳ ಬೇಕು. ಅವರಿಗೆ ಸಾಹಿತ್ಯಶಿಕ್ಷಣವನ್ನು ಕೊಡಿಸಬೇಕೆಂಬ ಇಚ್ಛೆಯೇನೋ ನನಗಿದ್ದಿತು. ನಾನೂ ಆ ಕೆಲಸವನ್ನು ಮಾಡಲು ಪ್ರಯತ್ನಪಟ್ಟೆನು. ಆದರೆ ಅದಕ್ಕೆ ಯಾವದಾದರೊಂದು ಅಡಚಣೆಯು ಒದಗುತ್ತಲೇ ಇದ್ದಿತು. ಅವರಿಗೆ ಇನ್ನಾರಿಂದಲೂ ಪಾಠ ಹೇಳಿಸುವ ವ್ಯವಸ್ಥೆಯನ್ನು ಮಾಡಿರಲಿಲ್ಲವಾದುದರಿಂದ ನಾನು ಪ್ರತಿನಿತ್ಯವೂ ನನ್ನ ಕಚೇರಿಗೆ ಹೋಗುವಾಗ ಮತ್ತು ಅಲ್ಲಿಂದ ಬರುವಾಗ ಅವರೊಡನೆ ನಡೆಯುತ್ತಿದ್ದೆನು. ಇದು ಒಟ್ಟು ಸುಮಾರು ೫ ಮೈಲಿಯಾಗುತ್ತಿದ್ದಿತು. ಇದರಿಂದ ಅವರಿಗೂ ನನಗೂ ತಕ್ಕಮಟ್ಟಿಗೆ ವ್ಯಾಯಾಮವಾಗುತ್ತಿದ್ದಿತು. ಹೀಗೆ ನಡೆ ಯುವ ಕಾಲದಲ್ಲಿ ಇನ್ನಾರೊಡನೆಯೂ ನನಗೆ ಕೆಲಸವಿಲ್ಲದಿದ್ದಾಗ ನಾನು ಮಾತನಾಡುವದರ ಮೂಲಕ ಅವರಿಗೆ ಶಿಕ್ಷಣವನ್ನು ಕೊಡಲು ಪ್ರಯತ್ನಪಟ್ಟೆನು. ಹಿಂದುಸ್ಥಾನದಲ್ಲಿಯೇ ನಿಂತಿದ್ದ ಹಿರಿಯ ಮಗನಾದ ಹರಿಲಾಲನ ಹೊರತು ನನ್ನ ಉಳಿದ ಮಕ್ಕಳಿ ಗೆಲ್ಲಾ ಜೋಹಾನ್ಸ್‌ಬರ್ಗಿನಲ್ಲಿ ಈ ರೀತಿಯಾದ ಶಿಕ್ಷಣವು ದೊರೆ ಯಿತು. ಪ್ರತಿದಿನವೂ ತಪ್ಪದೆ ಕಟ್ಟಕಡೆಗೆ ಒಂದು ಗಂಟೆಯಮಟ್ಟಿ

ಗಾದರೂ ಅವರಿಗೆ ಸಾಹಿತ್ಯಶಿಕ್ಷಣವನ್ನು ಕೊಡುವದು ನನಗೆ ಸಾಧ್ಯವಾಗಿದ್ದಿದ್ದರೆ ಅವರಿಗೆ ಆದರ್ಶಪ್ರಾಯವಾದ ಶಿಕ್ಷಣವನ್ನು ಕೊಟ್ಟಂತಾಗುತ್ತಿದ್ದಿತೆಂದು ನನ್ನ ಅಭಿಪ್ರಾಯ. ಆದರೆ ನಾನು ಅವರಿಗೆ ಸಾಕಾದಷ್ಟು ಸಾಹಿತ್ಯಶಿಕ್ಷಣವನ್ನು ದೊರಕಿಸಲಿಲ್ಲ. ಇದು ಅವರಿಗೂ ನನಗೂ ಕೂಡ ವಿಷಾದಕ್ಕೆ ಕಾರಣವಾಗಿದೆ. ನನ್ನ ಹಿರಿಯ ಮಗನು ಈ ವಿಷಯವಾಗಿ ತನ್ನ ದುಃಖವನ್ನು ಮುಖತಃ ನನಗೂ ವೃತ್ತಪತ್ರಗಳ ಮೂಲಕವಾಗಿಯೂ ಅನೇಕ ಬಾರಿ ವ್ಯಕ್ತಪಡಿಸಿದ್ದಾನೆ. ಉಳಿದವರು ನನ್ನ ಈ ದೋಷವನ್ನು ಅನಿವಾರ್ಯವೆಂದು ತಿಳಿದು ಉದಾರಬುದ್ಧಿಯಿಂದ ನನ್ನನ್ನು ಮನ್ನಿಸಿದ್ದಾರೆ. ಇದರಿಂದ ನನಗೆ ದುಸ್ಸಹವಾದ ವಿಷಾದವೇನೂ ಉಂಟಾಗಿಲ್ಲ. ಪಶ್ಚಾತ್ತಾಪವೇನಾದರೂ ಇದ್ದರೆ ಅದು ನಾನು ಆದರ್ಶಪಿತನಾಗಿರದಿದ್ದುದಕ್ಕಾಗಿ ಮಾತ್ರ. ಆದರೆ ನಾನು—ಸರಿಯಾಗಿ ಆಗಲಿ, ತಪ್ಪಾಗಿ ಆಗಲಿ — ಸಮಾಜಸೇವೆಯೆಂದು ಮನಃಪೂರ್ವಕವಾಗಿ ನಂಬಿದ್ದ ಉದ್ದೇಶಕ್ಕಾಗಿ ಅವರ ಸಾಹಿತ್ಯಶಿಕ್ಷಣವನ್ನು ಬಲಿಕೊಟ್ಟೆನೆಂದೇ ನನ್ನ ಅಭಿಪ್ರಾಯ. ಅವರು ವಿಶುದ್ಧಚರಿತರಾಗಲು ಮಾಡಬೇಕಾದುದನ್ನೆಲ್ಲಾ ಮಾಡುವದರಲ್ಲಿ ನಾನು ಅಲಕ್ಷ್ಯವನ್ನು ತೋರಿಸಿಲ್ಲವೆಂದು ನನಗೆ ದೃಢವಾದ ನಂಬಿಕೆಯಿದೆ. ಇದಕ್ಕೆ ಸುವ್ಯವಸ್ಥೆಯನ್ನು ಮಾಡುವದು ಪ್ರತಿಯೊಬ್ಬ ಹೆತ್ತಾತನ ಕರ್ತವ್ಯವೆಂದು ನಾನು ಎಣಿಸುತ್ತೇನೆ. ನಾನು ಇಷ್ಟು ಪ್ರಯತ್ನಪಟ್ಟಿದ್ದರೂ ನನ್ನ ಮಕ್ಕಳಲ್ಲಿ ದೋಷಗಳು ಕಂಡುಬಂದಿದ್ದರೆ ಅವು ಅವರ ತಾಯಿತಂದೆಗಳ ದೋಷಗಳ ಪ್ರತಿಬಿಂಬಗಳೇ ಹೊರತು ನನ್ನ ಔದಾಸೀನ್ಯದ ಫಲವಲ್ಲವೆಂದು ನಾನು ದೃಢವಾಗಿ ನಂಬುತ್ತೇನೆ.

ಮಕ್ಕಳು ತಾಯಿತಂದೆಗಳ ಆಕೃತಿಯನ್ನೇ ಅಲ್ಲದೆ ಅವರ ಗುಣದೋಷಗಳನ್ನೂ ಪಡೆಯುತ್ತಾರೆ. ಆವರಣದ ಪ್ರಭಾವವು ಕೂಡ ಗಣಿಸತಕ್ಕುದಾದರೂ ಮಗುವಿನ ಮೂಲಧನವು ತಂದೆತಾಯಿಗಳಿಂದ ಬಂದುದೇ. ತಂದೆತಾಯಿಗಳಿಂದ ಪಡೆದ ದೋಷ

ಗಳಿಂದ ತಮ್ಮನ್ನು ತಾವು ಪಾರುಮಾಡಿಕೊಂಡ ಮಕ್ಕಳನ್ನೂ ನಾನು ನೋಡಿದ್ದೇನೆ. ವಿಮಲತೆಯು ಆತ್ಮನ ಸಹಜಗುಣವಾಗಿ ರುವದೇ ಇದಕ್ಕೆ ಕಾರಣ.

ಈ ಹುಡುಗರಿಗೆ ಆಂಗ್ಲ ಶಿಕ್ಷಣವನ್ನು ಕೊಡುವ ವಿಷಯು ವನ್ನು ಕುರಿತು ನನಗೂ ಪೋಲಕರಿಗೂ ಅನೇಕ ವೇಳೆ ತೀಕ್ಷ್ಣ ವಾಗ್ವಾದಗಳು ನಡೆಯುತ್ತಿದ್ದುವು. ಮಕ್ಕಳಿಗೆ ಬಾಲ್ಯದಿಂದ ಇಂಗ್ಲಿಷ್ ಭಾಷೆಯಲ್ಲಿಯೇ ಮಾತನಾಡುವದನ್ನೂ ಯೋಚನೆ ಮಾಡುವದನ್ನೂ ಕಲಿಸಿಕೊಡುವ ತಂದೆತಾಯಿಗಳು ತಮ್ಮ ಮಕ್ಕಳಿಗೂ ತಮ್ಮ ದೇಶಕ್ಕೂ ಎರಡು ಬಗೆಯುತ್ತಾರೆಂದು ನಾನು ಸದಾ ನಂಬಿದ್ದೇನೆ. ಹೀಗೆ ಮಾಡುವದರಿಂದ ಅವರು ತಮ್ಮ ಮಕ್ಕಳಿಗೆ ಜನಾಂಗದ ಆಧ್ಯಾತ್ಮಿಕ ಮತ್ತು ಸಾಮಾಜಿಕ ಪುರಾಣ ಸಂಸ್ಕೃತಿಯನ್ನು ತಪ್ಪಿಸಿ ಅದೇ ಪರಿಮಾಣದಲ್ಲಿ ಆ ಮಕ್ಕಳನ್ನು ದೇಶಸೇವೆಗೆ ಅನರ್ಹರನ್ನಾಗಿ ಮಾಡುತ್ತಾರೆ. ಹೀಗೆ ನನ್ನ ಅಭಿಪ್ರಾಯವಿದ್ದುದರಿಂದ ನಾನು ಯಾವಾಗಲೂ ನನ್ನ ಮಕ್ಕ ಳೊಡನೆ ತಪ್ಪದೆ ಗುಜರಾತಿಯಲ್ಲಿಯೇ ಮಾತನಾಡುತ್ತಿದ್ದೆನು. ಪೋಲಕರಿಗೆ ಇದು ಎಂದೂ ಸರಿದೋರಲಿಲ್ಲ. ನಾನು ನನ್ನ ಮಕ್ಕಳು ಮುಂದಕ್ಕೆ ಬರುವದನ್ನು ಕೆಡಿಸುತ್ತಿದ್ದೆನೆಂದು ಅವರ ಅಭಿಪ್ರಾಯ. ನನ್ನ ಮಕ್ಕಳು ಇಂಗ್ಲಿಷಿನಂತಹ ವಿಶ್ವವ್ಯಾಪಕ ಭಾಷೆಯನ್ನು ತಮ್ಮ ಬಾಲ್ಯದಿಂದ ಕಲಿತರೆ ಜೀವನದ ಜೂಜಿನಲ್ಲಿ ಅವರು ಇತರರನ್ನು ಸುಲಭವಾಗಿ ಬಹು ಹಿಂದೆ ಹಾಕುವರೆಂದು ಪೋಲಕರು ತಮಗೆ ಸಾಧ್ಯವಾದಷ್ಟು ಆಗ್ರಹಪೂರ್ವಕವಾಗಿ ಮತ್ತು ಪ್ರೇಮಪೂರ್ವಕವಾಗಿ ವಾದಿಸುತ್ತಿದ್ದರು. ಆದರೆ ಈ ತರ್ಕವು ನನ್ನ ಮನಸ್ಸನ್ನು ತಟ್ಟಲಿಲ್ಲ. ನನ್ನ ಅಭಿಪ್ರಾಯವು ಸರಿ ಯೆಂದು ಅವರನ್ನು ಒಪ್ಪಿಸಿದೆನೋ ಅಥವಾ ಅವರು ನನ್ನನ್ನು ಹಟ ಮಾರಿಯೆಂದು ಕೈಬಿಟ್ಟರೋ ನನಗೆ ನೆನಪಿಲ್ಲ. ಇದು ನಡೆದು ಸುಮಾರು ೨೦ ವರ್ಷವಾಯಿತು. ನನ್ನ ಅನುಭವದೊಂದಿಗೆ ನನ್ನ ಅಭಿಪ್ರಾಯವೂ ಹೆಚ್ಚು ಹೆಚ್ಚು ದೃಢವಾಗುತ್ತಾಬಂದಿದೆ. ಸಂಪೂ

ರ್ಣವಾದ ಸಾಹಿತ್ಯಶಿಕ್ಷಣವಿಲ್ಲದುದರಿಂದ ನನ್ನ ಮಕ್ಕಳಿಗೆ ಅನಾನುಕೂಲವಾಗಿದ್ದರೂ ಅವರು ನೈಜವಾಗಿ ಗಳಿಸಿದ ತಾಯ್ನುಡಿಯ ಅರಿವು ಅವರಿಗೂ ದೇಶಕ್ಕೂ ಮಂಗಳಕರವಾಗಿಯೇ ಪರಿಣಮಿಸಿದೆ. ಏಕೆಂದರೆ ಹೀಗೆ ಶಿಕ್ಷಿತರಾಗದಿದ್ದರೆ ಕಾಣಬರುತ್ತಿದ್ದಂತೆ ಈಗ ಅವರು ವಿದೇಶಿಗಳಾಗಿ ಕಾಣುವದಿಲ್ಲ. ದಿನವೂ ಅನೇಕಮಂದಿ ಆಂಗ್ಲ ಮಿತ್ರರೊಡನೆ ಸಂಪರ್ಕವುಂಟಾಗುತ್ತಿದ್ದುದರಿಂದಲೂ ಇಂಗ್ಲಿಷ್ ಭಾಷೆಯನ್ನೇ ಮುಖ್ಯವಾಗಿ ಮಾತನಾಡುವ ದೇಶದಲ್ಲಿ ಅವರು ಇದ್ದುದರಿಂದಲೂ ಅವರು ಆ ಭಾಷೆಯಲ್ಲಿ ಸಾಧಾರಣ ಸೌಲಭ್ಯದಿಂದ ಮಾತನಾಡಲು ಮತ್ತು ಬರೆಯಲು ಬಲ್ಲವರಾಗಿ ಸಹಜವಾಗಿ ದ್ವಿಭಾಷಿಗಳಾದರು.



೨೪

# ಜೂಲು 'ದಂಗೆ'

ಜೋಹಾನ್ಸ್‌ಬರ್ಗಿನಲ್ಲಿ ನಾನು ನೆಲೆಸಿರುವೆನೆಂದು ತಿಳಿದು-ಕೊಂಡಮೇಲೆಯೂ ಒಂದು ಕಡೆ ನಿಂತು ಜೀವಿಸುವದು ನನ್ನ ಹಣೆಯಲ್ಲಿ ಬರೆದಿರಲಿಲ್ಲ. ಇನ್ನು ನೆಮ್ಮದಿಯಾಗಿರಬಹುದೆಂದು ನನಗೆ ತೋರಿತೋ ಇಲ್ಲವೋ ಎನ್ನುವಷ್ಟರಲ್ಲಿ ಅನಿರೀಕ್ಷಿತವಾದ ಘಟನೆಯೊಂದು ಸಂಭವಿಸಿತು. ನೇಟಾಲಿನಲ್ಲಿ ಜೂಲು ಜನರು ದಂಗೆಯೆದ್ದಿರುವರೆಂಬ ವರ್ತಮಾನವನ್ನು ವೃತ್ತಪತ್ರಿಕೆಗಳು ತಿಳಿಸಿದುವು. ಜೂಲುಗಳ ಮೇಲೆ ನನಗೆ ಯಾವ ವೈರವೂ ಇರಲಿಲ್ಲ. ಅವರು ಯಾವ ಭಾರತೀಯನಿಗೂ ಕೇಡು ಮಾಡಿರಲಿಲ್ಲ. 'ದಂಗೆ'ಯ ಅಸ್ತಿತ್ವದ ವಿಷಯವಾಗಿಯೇ ನನಗೆ ಸಂಶಯವಿದ್ದಿತು. ಆದರೆ ಆಗ ನಾನು ಬ್ರಿಟಿಷ್ ಚಕ್ರಾಧಿಪತ್ಯವು ಪ್ರಪಂಚದ ಉದ್ಧಾರಕ್ಕಾಗಿ ಇದ್ದಿತೆಂದು ನಂಬಿದ್ದೆನು. ಅಕೃತಿಮವಾದ ರಾಜಭಕ್ತಿಯು ನನ್ನನ್ನು ಚಕ್ರಾಧಿಪತ್ಯಕ್ಕೆ ಕೇಡನ್ನೆಣಿಸುವದಕ್ಕೆ ಕೂಡ ಬಿಡುತ್ತಿರಲಿಲ್ಲ. ಆದುದರಿಂದ 'ದಂಗೆ'ಯ ನೀತಿ ಅನೀತಿಗಳು ನನ್ನ ಮನೋನಿಶ್ಚಯವನ್ನು ತಟ್ಟುವಂತಿರಲಿಲ್ಲ. ನೇಟಾಲಿನಲ್ಲಿ ಸ್ವಯಂಸೇವಕರ ಸೈನ್ಯವೊಂದು ಇದ್ದಿತು. ಆ ಸೈನ್ಯವು ಹೆಚ್ಚಿಗೆ ಜನರನ್ನು ಸೇರಿಸಿಕೊಳ್ಳಬಹುದಾಗಿದ್ದಿತು. ಅದು 'ದಂಗೆ'ಯನ್ನು ಅಡಗಿಸಲು ಆಗಲೇ ಸನ್ನದ್ಧವಾಗಿದ್ದಿತೆಂದು ನಾನು ವೃತ್ತಪತ್ರಿಕೆಗಳಲ್ಲಿ ಓದಿದೆನು. ನೇಟಾಲಿನೊಡನೆ ನನಗೆ ನಿಕಟ ಸಂಬಂಧವಿದ್ದುದರಿಂದ ನಾನೊಬ್ಬ ನೇಟಾಲಿನ ಪ್ರಜೆಯೇ ಎಂದು ನನ್ನ ಭಾವನೆಯಾಗಿದ್ದಿತು. ಆದುದರಿಂದ ನಾನು ಆವಶ್ಯಕತೆಯೊದಗಿದರೆ ಭಾರತೀಯ ಶುಶ್ರೂಷಾದಳವೊಂದನ್ನು ಕೂಡಿಸಲು ಸಿದ್ಧನಾಗಿರುವೆನೆಂದು ಗವರ್ನರರಿಗೆ ಪತ್ರ ಬರೆದೆನು. ಅವರು ಆಗಬಹುದೆಂದು ಒಡನೆಯೆ ಉತ್ತರವನ್ನು ಕಳುಹಿಸಿದರು.

ನನ್ನ ಸೂಚನೆಗೆ ಇಷ್ಟು ಶೀಘ್ರವಾಗಿ ಒಪ್ಪಿಗೆ ದೊರೆಯುವದೆಂದು ನಾನು ನಿರೀಕ್ಷಿಸಿರಲಿಲ್ಲ. ಅದೃಷ್ಟವಶಾತ್ ನಾನು ಕಾಗದವನ್ನು ಬರೆಯುವದಕ್ಕೆ ಮುಂಚೆಯೇ ಬೇಕಾದ ಏರ್ಪಾಟುಗಳನ್ನೆಲ್ಲಾ ಮಾಡಿದ್ದೆನು. ನನ್ನ ಸೂಚನೆಯು ಅನುಮೋದಿತವಾದರೆ ನಾನು ಜೋಹಾನ್ಸ್‌ಬರ್ಗಿನ ಮನೆಯನ್ನು ಬಿಟ್ಟುಬಿಡಬೇಕೆಂದೂ ಪೋಲಕರು ಬೇರೊಂದು ಸಣ್ಣ ಮನೆಗೆ ಹೋಗಬೇಕೆಂದೂ ಕಸ್ತೂರಿಬಾಯಿಯು ಫೀನಿಕ್ಸ್‌ಗೆ ಹೋಗಿ ಅಲ್ಲಿರಬೇಕೆಂದೂ ನಿಶ್ಚಯಿಸಿದ್ದೆನು ಈ ನಿಶ್ಚಯದಲ್ಲಿ ಆಕೆಯ ಪೂರ್ಣ ಸಹಕಾರವಿದ್ದಿತು. ಇಂತಹ ವಿಚಾರಗಳಲ್ಲಿ ಆಕೆಯು ನನಗೆ ಎಂದೂ ಅಡ್ಡಬಂದಂತೆ ಕಾಣೆ. ಆದುದರಿಂದ ನನಗೆ ಗವರ್ನರರ ಉತ್ತರ ಬಂದೊಡನೆಯೇ ಮನೆಯ ಮಾಲಿಕನಿಗೆ ಮನೆಯನ್ನು ಬಿಡುವೆವೆಂದು ಯಥಾಕ್ರಮವಾಗಿ ಒಂದು ತಿಂಗಳ 'ತಿಳಿವಳಿಕೆ' (ನೋಟೀಸ್)ಯನ್ನು ಕೊಟ್ಟು ಕೆಲವು ಸಾಮಾನುಗಳನ್ನು ಫೀನಿಕ್ಸ್‌ಗೆ ಕಳಿಸಿ ಕೆಲವನ್ನು ಪೋಲಕರ ಹತ್ತಿರ ಬಿಟ್ಟೆನು.

ನಾನು ಡರಬನಿಗೆ ಹೋಗಿ ಜನಸಹಾಯವನ್ನು ಬೇಡಿದೆನು. ನಮಗೆ ಹೆಚ್ಚು ಮಂದಿಯೇನೂ ಬೇಕಾಗಿರಲಿಲ್ಲ. ನಾವು ಒಟ್ಟು ೨೪ ಜನರಿದ್ದೆವು. ನಮ್ಮಲ್ಲಿ ನಾವಲ್ಲದೆ ನಾಲ್ಕು ಜನ ಗುಜರಾತಿಗಳು ಇದ್ದರು. ಉಳಿದವರಲ್ಲಿ ಸ್ವತಂತ್ರ ಪಠಾಣನಾದ ಒಬ್ಬಾತನ ಹೊರತು ಮಿಕ್ಕವರು ದಕ್ಷಿಣಭಾರತದ ವಿಮುಕ್ತ 'ಗಿರಿಮಿಟಿಯ'ರಾಗಿದ್ದರು.

ನನಗೆ ದರ್ಜೆಯನ್ನು ಕೊಡಲೂ ಕೆಲಸವನ್ನು ಸುಲಭ ಮಾಡಲೂ ಮತ್ತು ಆಗಿನ ಪದ್ಧತಿಯ ಪ್ರಕಾರವಾಗಿಯೂ ಶ್ರೇಷ್ಠ ವೈದ್ಯಶಾಖಾಧಿಕಾರಿಗಳು ನನ್ನನ್ನು ಹಂಗಾಮಿಯಾಗಿ 'ಸಾರ್ಜೆಂಟ್ ಮೇಜರ್' ದರ್ಜೆಗೆ ನೇಮಿಸಿದರು. ಮೂರು ಜನರನ್ನು 'ಸಾರ್ಜೆಂಟ್'ರಾಗಿರಲೂ ಒಬ್ಬನನ್ನು 'ಕಾರ್ಪೋರಲ್' ಆಗಿರಲೂ ನಾನು ಆರಿಸಿದೆನು. ನಮ್ಮ ಉಡುಪು ಕೂಡ ಸರಕಾರದಿಂದ

ಬಂದಿತು. ನಮ್ಮ ದಳವು ಆರು ವಾರ ಕಾರ್ಯದಲ್ಲಿ ತೊಡಗಿದ್ದಿತು. ನಾನು 'ದಂಗೆ'ಯ ರಂಗಸ್ಥಳವನ್ನು ತಲಪಿ ನೋಡಲು 'ದಂಗೆ'ಯೆನಿಸಕೊಳ್ಳುವಂತಹದು ಅಲ್ಲಿ ಏನೂ ದೃಷ್ಟಿಗೆ ಬೀಳಲಿಲ್ಲ ಯಾರೂ ಸರಕಾರವನ್ನು . ಇದಿರಿಸುತ್ತಿದ್ದಂತೆ ಕಂಡುಬರಲಿಲ್ಲ. ಈ ಗಲಭೆಯನ್ನು ದೊಡ್ಡದು ಮಾಡಲು ಕಾರಣವೇನೆಂದರೆ, ಜೂಲೂ ನಾಯಕನೊಬ್ಬನು ಜೂಲುಗಳ ಮೇಲೆ ಸರಕಾರದವರು ಹೊರಿಸಿದ್ದ ಹೊಸ ತೆರಿಗೆಯೊಂದನ್ನು ಕೊಡಬೇಡಿರೆಂದು ಹೇಳಿ ತೆರಿಗೆಯನ್ನು ಕೂಡಿಸಲು ಹೋಗಿದ್ದ ಒಬ್ಬ ಸಾರ್ಜೆಂಟನ್ನು ಕತ್ತರಿಸಿ ಹಾಕಿದ್ದನು. ಅದೇನೇ ಆಗಿರಲಿ, ನನ್ನ ಮನಸ್ಸಂತು ಜೂಲುಗಳ ಕಡೆಯೇ ಇದ್ದಿತು. ಸೈನ್ಯದ ಮುಖ್ಯಸ್ಥಾನವನ್ನು ತಲಪಲು ಗಾಯಹೊಂದಿದ ಜೂಲುಗಳಿಗೆ ಶುಶ್ರೂಷೆ ಮಾಡುವದೇ ನಮ್ಮ ಮುಖ್ಯ ಕೆಲಸವೆಂದು ಹೇಳಲು ನನಗೆ ಬಹಳ ಸಂತೋಷವಾಯಿತು. ಅಲ್ಲಿ ಮೇಲ್ವಿಚಾರದಲ್ಲಿದ್ದ ವೈದ್ಯಶಾಖಾಧಿಕಾರಿಗಳು ನಮ್ಮನ್ನು ಆದರದಿಂದ ಬರಮಾಡಿಕೊಂಡರು. ಗಾಯಹೊಂದಿದ ಜೂಲುಗಳನ್ನು ಬಿಳಿಯ ಜನರು ಮನವಿಟ್ಟು ಶುಶ್ರೂಷಿಸುತ್ತಿರಲಿಲ್ಲವೆಂದೂ ಅವರ ಗಾಯಗಳು ಕೊಳೆಯುತ್ತಿದ್ದುವೆಂದೂ ತಮಗೆ ಏನೂ ತೋಚದಂತಾಗಿರುವದೆಂದೂ ಅವರು ಹೇಳಿದರು. ನಾವು ಬಂದುದು ಏನೂ ಅರಿಯದ ಆ ಜನರ ಅದೃಷ್ಟವೆಂದು ಸಂತೋಷಪಟ್ಟು ಅವರು ನಮಗೆ ಗಾಯಕ್ಕೆ ಕಟ್ಟುವ ಪಟ್ಟಿ, ಕ್ರಿಮಿನಾಶಕದ್ರವ ಮುಂತಾದವುಗಳನ್ನು ಒದಗಿಸಿಕೊಟ್ಟು ನಮ್ಮನ್ನು ಆ ಸಮಯಕ್ಕೆ ಏರ್ಪಡಿಸಿದ್ದ ವೈದ್ಯಶಾಲೆಗೆ ಕರೆದುಕೊಂಡು ಹೋದರು. ಜೂಲುಗಳು ನಮ್ಮನ್ನು ನೋಡಿ ಆನಂದಪಟ್ಟರು. ಬಿಳಿಯ ಸಿಪಾಯಿಗಳು ನಮಗೂ ಅವರಿಗೂ ಮಧ್ಯೆ ಇದ್ದ ಕಂಬಿಗಳಲ್ಲಿ ಇಣಿಕಿನೋಡಿ ಜೂಲುಗಳ ಗಾಯಗಳಿಗೆ ಚಿಕಿತ್ಸೆ ಮಾಡದಿರುವಂತೆ ನಮ್ಮನ್ನು ಪ್ರೇರಿಸಲು ಪ್ರಯತ್ನಪಡುತ್ತಿದ್ದರು. ನಾವು ಅವರಿಗೆ ಕಿವಿಗೊಡದಿರುತ್ತಿದ್ದುದರಿಂದ ಅವರು ರೇಗಿ ಜೂಲುಗಳ ಮೇಲೆ ಹೇಳಲಾಗದ ಬೈಗಳನ್ನು ಸುರಿಯುತ್ತಿದ್ದರು.

ಬರಬರುತ್ತಾ ನನಗೂ ಈ ಸೈನಿಕರಿಗೂ ಹೆಚ್ಚಾದ ಪರಿಚಯ ವುಂಟಾಗಿ ಅವರು ನಮಗೆ ಅಡ್ಡಿಮಾಡುವದನ್ನು ಬಿಟ್ಟುಬಿಟ್ಟರು. ಅಲ್ಲಿದ್ದ ಸೈನ್ಯಾಧಿಕಾರಿಗಳಲ್ಲಿ ನನ್ನನ್ನು ೧೮೯೬ರಲ್ಲಿ ತೀಕ್ಷ್ಣವಾಗಿ ವಿರೋಧಿಸಿದ್ದ ಕರ್ನಲ್ ಸ್ಪಾರ್ಕ್ಸರೂ ಕರ್ನಲ್ ವೈಲಿಯವರೂ ಇದ್ದರು. ಈಗ ನನ್ನ ನಡತೆಯನ್ನು ನೋಡಿ ಅವರಿಗೆ ಆಶ್ಚರ್ಯ ವಾಗಿ ಅವರು ಇದಕ್ಕಾಗಿಯೇ ನನ್ನನ್ನು ಕರೆಸಿ ತಮ್ಮ ಕೃತಜ್ಞತೆ ಯನ್ನು ವ್ಯಕ್ತಪಡಿಸಿದರು. ಅವರು ನನ್ನನ್ನು ಜನರಲ್ ಮೆಕೆನ್ನಿ ಯವರ ಬಳಿಗೊಯ್ದು ಅವರಿಗೆ ನನ್ನ ಪರಿಚಯವನ್ನು ಮಾಡಿ ಕೊಟ್ಟರು. ಇವರೆಲ್ಲರೂ ಉದ್ಯೋಗತಃ ಸೈನಿಕರೆಂದು ಪಾಠಕರು ಎಣಿಸದಿರಲಿ. ಕರ್ನಲ್ ವೈಲಿಯವರು ಡರಬನಿನ ಸುಪ್ರಸಿದ್ಧ ವಕೀಲರಾಗಿದ್ದರು. ಕರ್ನಲ್ ಸ್ಪಾರ್ಕ್ಸರು ಡರಬನಿನಲ್ಲಿ ಮಾಂಸದ ಅಂಗಡಿಯನ್ನಿಟ್ಟುಕೊಂಡು ಪ್ರಸಿದ್ಧರಾಗಿದ್ದರು. ಜನರಲ್ ಮೆಕೆನ್ನಿಯವರು ನೇಟಾಲಿನಲ್ಲಿ ಪ್ರಸಿದ್ಧರಾದ ಕೃಷಿಕರಾಗಿದ್ದರು. ಈ ಮಹಾಶಯರೆಲ್ಲರೂ ಸ್ವಯಂಸೇವಕರಾಗಿ ಯುದ್ಧಶಿಕ್ಷಣ ವನ್ನೂ ಅನುಭವವನ್ನೂ ಪಡೆದಿದ್ದರು.

ನಮ್ಮ ವಶದಲ್ಲಿದ್ದ ಜೂಲುಗಳು ಕದನದಲ್ಲೇನೂ ಗಾಯ ತಿಂದವರಾಗಿರಲಿಲ್ಲ. ಅವರಲ್ಲಿ ಒಂದು ಭಾಗವನ್ನು ಗುಮಾನಿಯ ಮೇಲೆ ಕೈದುಮಾಡಿದ್ದರು. ಸೈನ್ಯದ ಮುಖ್ಯಾಧಿಕಾರಿಗಳು ಇವ ರಿಗೆ ಛಡಿಯಿಂದ ಏಟು ತಿನ್ನುವ ಶಿಕ್ಷೆಯನ್ನು ವಿಧಿಸಿದ್ದರು. ಈ ಏಟುಗಳಿಂದ ಬಹಳ ಗಾಯವಾಗಿದ್ದಿತು. ಇವುಗಳನ್ನು ನೋಡಿ ಕೊಳ್ಳುವವರಾರೂ ಇಲ್ಲದೆ ಇವು ಕೊಳೆಯುತ್ತಿದ್ದುವು. ಉಳಿದ ವರು ದಂಗೆಯೋಳದ ಜೂಲುಮಿತ್ರರು. 'ಶತೃ'ಗಳಿಂದ ಪ್ರತ್ಯೇಕಿಸಿ ಗುರುತಿಸುವದಕ್ಕೆ ಇವರಿಗೆ ಲಾಂಛನಗಳನ್ನು ಕೊಟ್ಟಿದ್ದರೂ ಬಿಳಿಯ ಸೈನಿಕರು ಗೊತ್ತಿಲ್ಲದೆ ಇವರನ್ನು ಗುಂಡಿನಿಂದ ಹೊಡೆದರು.

ಈ ಕೆಲಸವಲ್ಲದೆ ನಮಗೆ ಬಿಳಿಯ ಸಿಪಾಯಿಗಳಿಗೆ ಔಷಧ ವನ್ನು ಗೊತ್ತುಮಾಡಿ ಕೂಡಿಸಿಕೊಡುವ ಕೆಲಸ ಬೇರೆ

ಇದ್ದಿತು. ಡಾ. ಬೂತರ ಸಣ್ಣ ವೈದ್ಯಶಾಲೆಯಲ್ಲಿ ನಾನು ಒಂದು ವರ್ಷದ ಶಿಕ್ಷಣವನ್ನು ಪಡೆದಿದ್ದುದರಿಂದ ಇದು ನನಗೆ ಸುಲಭವಾಗಿಯೇ ಇದ್ದಿತು. ಇಲ್ಲಿ ಕೆಲಸದಿಂದ ನನಗೆ ಅನೇಕ ಐರೋಪ್ಯರ ಗಾಢ ಪರಿಚಯವುಂಟಾಯಿತು.

ವೇಗವಾಗಿ ಚಲಿಸುವ ಒಂದು ಸೈನ್ಯಶಾಖೆಗೆ ನಮ್ಮನ್ನು ಸೇರಿಸಿದ್ದರು. ಅಪಾಯವಿದೆಯೆಂದು ಎಲ್ಲಿಂದ ಸಮಾಚಾರ ಬರುವುದೋ ಅಲ್ಲಿಗೆ ಅದು ಹೋಗಬೇಕೆಂದು ಅಪ್ಪಣೆಯಾಗಿದ್ದಿತು. ಇವರಲ್ಲಿ ಮುಕ್ಕಾಲುಭಾಗ ಪದಾತಿಗಳಾಗಿದ್ದು ಈ ಸಂದರ್ಭದಲ್ಲಿ ಸವಾರರಾಗಿದ್ದರು. ನಮ್ಮ ಪಾಳೆಯವು ಹೊರಟೊಡನೆಯೇ ನಾವು ನಮ್ಮ ಡೋಲಿಗಳನ್ನು ಹೆಗಲಮೇಲೆ ಹೊತ್ತುಕೊಂಡು ಸೈನ್ಯವನ್ನು ಕಾಲ್ನಡೆಯಲ್ಲಿ ಹಿಂಬಾಲಿಸಬೇಕಾಗಿದ್ದಿತು. ಎರಡು ಮೂರು ಸಲ ನಾವು ದಿನಕ್ಕೆ ನಲವತ್ತು ಮೈಲಿಯಂತೆ ಪಯಣ ಮಾಡಬೇಕಾಯಿತು. ಆದರೆ ನಾವು ಹೋದಕಡೆಯೆಲ್ಲಾ ನಮಗೆ ಮಾಡುವದಕ್ಕೆ ದೇವರ ಸೇವೆಯು ಒದಗುತ್ತಿದ್ದಿತು. ಬಿಳಿಯ ಸೈನಿಕರು ತಿಳಿಯದೆ ಹೊಡೆದು ಗಾಯಪಡಿಸಿದ ಜೂಲು 'ಮಿತ್ರ'ರನ್ನು ನಾವು ಶಿಬಿರಕ್ಕೊಯ್ದು ಅವರಿಗೆ ಶುಶ್ರೂಷೆ ಮಾಡಬೇಕಾಗಿದ್ದಿತು.



## ೨೫

# ಹೃದಯಮಂಥನ

ಜೂಲು ದಂಗೆಯಿಂದ ನನಗೆ ಅನೇಕ ಹೊಸ ಅನುಭವಗಳುಂಟಾಗಿ ಅದು ಬಹು ಮನೋವಿಚಾರಕ್ಕೆ ಕಾರಣವಾಯಿತು. ಯುದ್ಧದ ಭಯಂಕರ ಸ್ವರೂಪವು ನನಗೆ ಈ 'ದಂಗೆ'ಯಿಂದ ಮನವರಿಕೆಯಾದಷ್ಟುಮಟ್ಟಿಗೆ ಬೋಅರ್ ಯುದ್ಧದಿಂದ ಉಂಟಾಗಿರಲಿಲ್ಲ. ಇದು ಮನುಷ್ಯರ ಬೇಟೆಯಾಗಿದ್ದಿತೇ ವಿನಾ ಯುದ್ಧವಾಗಿರಲಿಲ್ಲ. ಈ ಅಭಿಪ್ರಾಯವು ನನ್ನದು ಮಾತ್ರವೇ ಆಗಿರದೆ ನನ್ನೊಡನೆ ಮಾತನಾಡಲು ಸಂದರ್ಭವೊದಗಿದ ಅನೇಕ ಆಂಗ್ಲೇಯರದೂ ಆಗಿದ್ದಿತು. ಅಪರಾಧವರಿಯದ ಹಳ್ಳಿಗಳ ಮಧ್ಯೆ ದಿನ ಬೆಳಗೂ ಸಿಪಾಯಿಗಳ ಕೋವಿಯ ಗುಂಡುಗಳು ಪಟಾಕಿಯಂತೆ ಸದ್ದುಮಾಡಿ ಹಾರುವದನ್ನು ಕೇಳುತ್ತಾ ಇದರ ಮಧ್ಯೆ ವಾಸಿಸುವದು ದುಸ್ಸಹವಾಗಿದ್ದಿತು. ಆದರೆ ಗಾಯಹೊಂದಿದ ಜೂಲುಗಳನ್ನು ಉಪಚರಿಸುವದು ಮಾತ್ರವೇ ನಮ್ಮ ದಳದ ಕೆಲಸವಾಗಿದ್ದುದರಿಂದ ನಾನು ಈ ಸಂಕಟವನ್ನು ಸಹಿಸಿದೆನು. ನಾವಿಲ್ಲದಿದ್ದರೆ ಜೂಲುಗಳಿಗೆ ದಿಕ್ಕೇ ಇರುತ್ತಿರಲಿಲ್ಲವೆಂಬುದು ವಿಶದವಾಗಿದ್ದಿತು. ಆದುದರಿಂದ ಈ ಕೆಲಸವು ನನ್ನ ಹೃದಯದ ಹೊರೆಯನ್ನು ಕಡಿಮೆ ಮಾಡಿತು.

ಆದರೆ ಇದಲ್ಲದೆ ಯೋಚಿಸಬೇಕಾದ ವಿಚಾರಗಳನೇಕವಾಗಿದ್ದುವು. ದೇಶದ ಆ ಭಾಗದಲ್ಲಿ ಜನಸಾಂದ್ರತೆಯು ಬಹು ಕಡಿಮೆಯಾಗಿದ್ದಿತು. ದೂರದೂರವಾಗಿ ಗುಡ್ಡಕಣಿವೆಗಳ ಮಧ್ಯೆ ಈ ಸರಳಸ್ವಭಾವದ 'ಅನಾಗರಿಕ' ಜೂಲೂಗಳ 'ಕ್ರಾಲ್' (ಸಣ್ಣ ಹಳ್ಳಿ)ಗಳಿದ್ದುವು. ಗಾಯಹೊಂದಿದವರೊಡನೆ ಅಥವಾ ಅವರಿಲ್ಲದೆ ಈ ಗಂಭೀರ ನಿರ್ಜನ ಪ್ರದೇಶಗಳಲ್ಲಿ ಮುಂದುವರಿಯುತ್ತಾ ನಾನು ಅನೇಕ ವೇಳೆ ವಿಚಾರಸಾಗರದಲ್ಲಿ ಮಗ್ನನಾಗುತ್ತಿದ್ದೆನು.

ನಾನು ಬ್ರಹ್ಮಚರ್ಯ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ಚಿಂತಿಸಿದೆನು. ಈ ವಿಷಯದಲ್ಲಿನ ನನ್ನ ಮನವರಿಕೆಯು ಇನ್ನೂ ದೃಢಪಟ್ಟಿತು. ಈ ವಿಚಾರವಾಗಿ ನನ್ನ ಜೊತೆಗಾರರೊಂದಿಗೆ ಚರ್ಚಿಸಿದೆನು. ಆತ್ಮಸಂದರ್ಶನಕ್ಕೆ ಬ್ರಹ್ಮಚರ್ಯವು ಕೇವಲ ಅನಿವಾರ್ಯವಾದುದೆಂದು ನನ್ನ ಗೋಚರಕ್ಕೆ ಬಂದಿರಲಿಲ್ಲವಾದರೂ ಆತ್ಮವನ್ನೇ ಅರ್ಪಿಸಿ ಲೋಕಸೇವಾನಿರತನಾಗಲೆಳಸುವವನಿಗೆ ಬ್ರಹ್ಮಚರ್ಯವಿಲ್ಲದೆ ಆಗದೆಂಬುದನ್ನು ನಾನು ಸ್ಪಷ್ಟವಾಗಿ ಕಂಡೆನು. ಇಂತಹ ಸೇವಾಕಾರ್ಯವು ನನ್ನ ಪಾಲಿಗೆ ಮುಂದೆ ಹೆಚ್ಚುಹೆಚ್ಚಾಗಿ ಬೀಳುವುದೆಂದೂ ನಾನು ಸಂಸಾರಸುಖದಲ್ಲಿಯೂ ಪ್ರಜೋತ್ಪತ್ತಿಯಲ್ಲಿಯೂ ಮಕ್ಕಳ ಪೋಷಣೆಯಲ್ಲಿಯೂ ನಿರತನಾಗಿದ್ದರೆ ನನ್ನ ಕರ್ತವ್ಯವನ್ನು ನಾನು ಎಸಗಲಾಗುವದಿಲ್ಲವೆಂದೂ ನನಗೆ ಹೊಳೆಯಿತು.

ಒಂದು ಮಾತಿನಲ್ಲಿ ಹೇಳಬೇಕೆಂದರೆ, ಒಮ್ಮೆಯೇ ನಾನು ಭೋಗಿಯಾಗಿಯೂ ಯೋಗಿಯಾಗಿಯೂ ಇರುವದು ಸಲ್ಲದ ಮಾತು. ಉದಾಹರಣೆಗಾಗಿ ಈಗ ನನ್ನ ಹೆಂಡತಿಯು ಗರ್ಭಿಣಿಯಾಗಿದ್ದಿದ್ದರೆ ನಾನು ಈ ಸೇವಾಕಾರ್ಯದಲ್ಲಿ ತೊಡಗುವದಕ್ಕೇ ಆಗುತ್ತಿರಲಿಲ್ಲ. ಬ್ರಹ್ಮಚರ್ಯಪಾಲನೆಯಿಲ್ಲವೆ ಕುಟುಂಬಪಾಲನೆಯೂ ಲೋಕಸೇವೆಯೂ ಒಂದಕ್ಕೊಂದು ವಿರುದ್ಧವಾಗಿ ಪರಿಣಮಿಸುವುವು. ಬ್ರಹ್ಮಚರ್ಯದಿಂದ ಈ ವಿರುದ್ಧಭಾವವು ಸಂಪೂರ್ಣವಾಗಿ ತೊಲಗುವದು.

ಹೀಗೆ ವಿಚಾರಮಾಡಿ ನಾನು ಆಜೀವಬ್ರಹ್ಮಚರ್ಯವ್ರತವನ್ನು ಹಿಡಿಯಲು ಸ್ವಲ್ಪ ಆತುರನಾದೆನು. ವ್ರತಧಾರಣೆಯ ನಿರೀಕ್ಷಣೆಯು ಒಂದು ರೀತಿಯ ಹುರುಪನ್ನುಂಟುಮಾಡಿತು. ಕಲ್ಪನಾಶಕ್ತಿಗೆ ಕೂಡ ಕ್ರೀಡಿಸಲಮಿತ ಅವಕಾಶ ದೊರಕಿ ಅದು ಸೇವಾಕಾರ್ಯದ ಅನಂತಶ್ರೇಣಿಗಳನ್ನು ಸೃಷ್ಟಿಸಿತು.

ಹೀಗೆ ನನ್ನ ಮನಸ್ಸು ಗಾಢವಿಚಾರದಲ್ಲೂ ಶರೀರವು ಶ್ರಮದಲ್ಲೂ ನಿರತವಾಗಿರುವಾಗ 'ದಂಗೆ'ಯನ್ನು ಅಡಗಿಸುವ ಕಾರ್ಯವು ಇನ್ನೇನು ಮುಗಿಯಿತೆಂದೂ ನಮ್ಮನ್ನು ಶೀಘ್ರದಲ್ಲಿಯೇ ಬಿಟ್ಟುಬಿಡುವರೆಂದೂ ವರದಿ ಬಂದಿತು. ಇದು ತಿಳಿದ ಒಂದೆರಡು ದಿನದೊಳಗಾಗಿ ನಮ್ಮನ್ನು ಬಿಟ್ಟುಬಿಟ್ಟರು. ಕೆಲವು ದಿವಸಗಳಲ್ಲಿ ನಾವು ನಮ್ಮ ಮನೆಗೆ ಸೇರಿಕೊಂಡೆವು. ಸ್ವಲ್ಪ ಕಾಲದಲ್ಲಿಯೇ ಗವರ್ನರರು ನಮ್ಮ ಶುಶ್ರೂಷಾದಳವು ಮಾಡಿದ ಸಹಾಯಕ್ಕಾಗಿ ದಳದ ಉಪಕಾರವನ್ನು ವಿಶೇಷವಾಗಿ ನೆನೆಸಿ ನನಗೆ ಕಾಗದವನ್ನು ಬರೆದರು.

ನಾನು ಫೀನಿಕ್ಸಿಗೆ ಬಂದನಂತರ ಬ್ರಹ್ಮಚರ್ಯದ ವಿಚಾರವನ್ನು ಛಗನಲಾಲ, ಮಗನಲಾಲ, ವೆಸ್ಟ್ ಮುಂತಾದವರೊಡನೆ ಉತ್ಸಾಹಪೂರ್ವಕವಾಗಿ ಚರ್ಚಿಸಿದೆನು. ಅವರಿಗೆ ಈ ವಿಷಯವು ರುಚಿಸಿತು. ಅವರು ವ್ರತ ಹಿಡಿಯುವದರ ಆವಶ್ಯಕತೆಯನ್ನೇನೋ ಒಪ್ಪಿದರು; ಆದರೆ ಅದು ಎಷ್ಟು ಕಷ್ಟಸಾಧ್ಯವೆಂಬುದನ್ನೂ ವಿವರಿಸಿದರು. ಅವರಲ್ಲಿ ಕೆಲವರು ಧೈರ್ಯದಿಂದ ಬ್ರಹ್ಮಚರ್ಯವ್ರತವನ್ನು ಪಾಲಿಸತೊಡಗಿದರು. ಕೆಲವರು ಈ ಪ್ರಯತ್ನದಲ್ಲಿ ಸಫಲರಾದರೆಂದೂ ನನಗೆ ಗೊತ್ತು.

ನಾನೂ ಆಜೀವಬ್ರಹ್ಮಚರ್ಯವ್ರತವನ್ನು ಹಿಡಿದೆನು ಕೈಗೊಂಡ ಕಾರ್ಯವು ಎಷ್ಟು ದೊಡ್ಡದೆಂದೂ ಮಹತ್ವದ್ದೆಂದೂ ಆಗ ನನಗೆ ಸಂಪೂರ್ಣವಾಗಿ ತಿಳಿದಿರಲಿಲ್ಲವೆಂದು ನಾನು ಒಪ್ಪಿಕೊಳ್ಳಬೇಕು. ಇಂದು ಕೂಡ ನನಗೆ ಅದರ ಕಷ್ಟಗಳ ಅನುಭವವಾಗುತ್ತಿದೆ, ವ್ರತದ ಮಹತ್ವವು ಹೆಚ್ಚುಹೆಚ್ಚಾಗಿ ವಿಶದವಾಗುತ್ತಿದೆ. ಬ್ರಹ್ಮಚರ್ಯವಿಲ್ಲದ ಜೀವನವು ಶುಷ್ಕವೆಂದೂ ಪಶುಜೀವನಸಮಾನವೆಂದೂ ನನಗೆ ಭಾಸವಾಗುತ್ತದೆ. ಪಶುವು ಸ್ವಭಾವತಃ ಆತ್ಮಸಂಯಮದ ಗಂಧವನ್ನೇ ಅರಿಯದು. ಮನುಷ್ಯನಿಗೆ ಆತ್ಮಸಂಯಮ ಶಕ್ತಿಯಿರುವದರಿಂದಲೇ ಮತ್ತು ಆ ಶಕ್ತಿಯನ್ನು ಉಪ

ಯೋಗಿಸುವ ಮಟ್ಟಿಗೇ ಅವನನ್ನು ಮನುಷ್ಯನೆನ್ನುವದು. ನಮ್ಮ ಗ್ರಂಥಗಳಲ್ಲಿ ಮೊದಲು ನನಗೆ ಬ್ರಹ್ಮಚರ್ಯದ ಸ್ತುತಿಯು ಏತಿ ಏಾರಿದುದಾಗಿ ತೋರುತ್ತಿದ್ದಿತು. ಆದರೆ ಅದು ಇಂದು ಕೇವಲ ಸರಿಯಾದುದೆಂದೂ ಅನುಭವಸಿದ್ಧವಾದುದೆಂದೂ ದಿನದಿನವೂ ಹೆಚ್ಚು ಸ್ಪಷ್ಟವಾಗುತ್ತಿದೆ.

ಇಂತಹ ಅಸಾಧಾರಣ ಶಕ್ತಿಯಿಂದ ತುಂಬಿದ ಬ್ರಹ್ಮಚರ್ಯವು ಎಂದಿಗೂ ಸುಲಭಸಾಧ್ಯವಾಗಲಾರದೆಂದೂ ಖಂಡಿತವಾಗಿ ಅದು ಕೇವಲ ಶಾರೀರಿಕವಾಗಿರಲಾಗಿರದೆಂದೂ ನಾನು ಕಂಡೆನು. ಬ್ರಹ್ಮಚರ್ಯವು ಶರೀರಸಂಯಮದಲ್ಲೇ ಮೊದಲಾದರೂ ಅಷ್ಟಕ್ಕೇ ನಿಲ್ಲುವದಿಲ್ಲ. ಪೂರ್ಣ ಬ್ರಹ್ಮಚರ್ಯವು ಮಲಿನಭಾವವೊಂದಕ್ಕೂ ಎಡೆಗೊಡಲಾರದು. ನಿಜವಾದ ಬ್ರಹ್ಮಚಾರಿಯು ಸ್ವಪ್ನದಲ್ಲಿ ಕೂಡ ಇಂದ್ರಿಯತೃಪ್ತಿಯನ್ನು ಬಯಸುವದಿಲ್ಲ. ಆ ಸ್ಥಿತಿಗೆ ಬರುವ ವರೆಗೂ ಬ್ರಹ್ಮಚಾರಿಯು ಸಾಧಿಸಬೇಕಾದುದು ಬಹುವಾಗಿದೆ.

ನನಗೆ ಶಾರೀರಿಕ ಬ್ರಹ್ಮಚರ್ಯವನ್ನು ಪಾಲಿಸುವದರಲ್ಲಿ ಕೂಡ ಅನೇಕ ಕಷ್ಟಗಳು ತೋರಿಬಂದಿವೆ. ಇಂದು ನಾನು ಈ ವಿಷಯದಲ್ಲಿ ತಕ್ಕಮಟ್ಟಿಗೆ ನಿಶ್ಶಂಕೆಯಿಂದ ಇದ್ದೇನೆಂದು ಹೇಳಬಹುದು. ಆದರೆ ನಾನು ಇನ್ನೂ ಅತಿ ಪ್ರಾಮುಖ್ಯವಾದ ಸಂಪೂರ್ಣ ಮನೋನಿಗ್ರಹವನ್ನು ಗಳಿಸಬೇಕು. ಇದಕ್ಕೆ ಸಂಕಲ್ಪವಾಗಲಿ ಪ್ರಯತ್ನವಾಗಲಿ ಸಾಲದೆಂದಲ್ಲ. ಆದರೆ ಅನಿಷ್ಟಗಳಾದ ವಿಚಾರಗಳು ಹೇಗೆ ಗುಪ್ತರೀತಿಯಿಂದ ಮನಸ್ಸನ್ನು ಆಕ್ರಮಿಸುವುವೋ ಅದು ನನಗೆ ಇಂದಿನವರೆಗೂ ತಿಳಿದಿಲ್ಲ. ಅನಿಷ್ಟ ವಿಚಾರಗಳನ್ನು ಮನೋರಾಜ್ಯದ ಹೊರಗಿಡಲು ಮನುಷ್ಯನಿಗೆ ಶಕ್ತಿಯಿದೆಯೆಂಬುದರಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಆದರೆ ಆ ಶಕ್ತಿಯನ್ನು ಅವರವರೇ ಕಂಡುಹಿಡಿದುಕೊಳ್ಳಬೇಕು. ಸಾಧುಸಂತರೇನೋ ತಮ್ಮ ಅನುಭವವನ್ನು ನಮಗೆ ಕೊಟ್ಟಿದ್ದಾರೆ. ಆದರೆ ಅವರು ನಿಷ್ಕಳಂಕವಾದ ಸರ್ವಮಾನ್ಯವಾದ ನಿಯಮವಾವದನ್ನೂ

ನಮಗೆ ಕೊಟ್ಟಿಲ್ಲ. ಏಕೆಂದರೆ ಸರ್ವಸಂಪನ್ನತೆಯಾಗಲಿ ನಿಷ್ಕಳಂಕವಾಗಲಿ ಈಶ್ವರನ ಪ್ರಸಾದವಾಗಿ ಮಾತ್ರ ಬರಬಲ್ಲುದು. ಆದುದರಿಂದ ಈಶ್ವರೋಪಾಸಕರು ತಮ್ಮ ತಪಶ್ಚರ್ಯೆಯಿಂದ ಪುನೀತವಾದ, ತಮ್ಮ ವಿಶುದ್ಧಭಾವದಿಂಧ ಪೂರಿತವಾದ, ರಾಮನಾಮವೇ ಮುಂತಾದ ಮಂತ್ರಗಳನ್ನು ನಮಗೆ ಕೊಟ್ಟಿದ್ದಾರೆ. ಸಂಪೂರ್ಣವಾದ ಈಶ್ವರಾರ್ಪಣವಿಲ್ಲದೆ ಪೂರ್ಣಮನೋನಿಗ್ರಹವು ಅಸಾಧ್ಯ. ಪ್ರತಿಯೊಂದು ಮಹಾಧರ್ಮಗ್ರಂಥವು ಹೇಳುವದೂ ಇದೇ. ನಾನು ಸಂಪೂರ್ಣ ಬ್ರಹ್ಮಚರ್ಯಕ್ಕಾಗಿ ಪ್ರಯತ್ನಪಡುತ್ತಿರುವ ಪ್ರತಿಯೊಂದು ಕ್ಷಣವೂ ನನಗೆ ಇದರ ಸತ್ಯವು ವ್ಯಕ್ತವಾಗುತ್ತದೆ.

ಆದರೆ ಆ ಪ್ರಯತ್ನದ, ಆ ಹೋರಾಟದ, ಚರಿತ್ರೆಯ ಕೆಲವು ಭಾಗವು ಮುಂದಿನ ಅಧ್ಯಾಯದಲ್ಲಿ ವಿವರಿಸಲ್ಪಡುವುದು. ನಾನು ಈ ವ್ರತದ ಕಾರ್ಯದಲ್ಲಿ ಹೇಗೆ ತೊಡಗಿದೆನೆಂಬುದನ್ನು ಸೂಚಿಸಿ ಈ ಪ್ರಕರಣವನ್ನು ಮುಗಿಸುವೆನು. ಉತ್ಸಾಹದ ಮೊದಲುಬ್ಬಿನಲ್ಲಿ ವ್ರತಪಾಲನೆಯು ಬಹು ಸುಲಭವಾಗಿ ಕಂಡಿತು. ನನ್ನ ಜೀವನದ ರೀತಿಯಲ್ಲಿ ನಾನು ಮೊಟ್ಟಮೊದಲು ಮಾಡಿದ ಸುಧಾರಣೆಯೇನೆಂದರೆ, ನನ್ನ ಹೆಂಡತಿಯೊಡನೆ ಒಂದೇ ಹಾಸಿಗೆಯಲ್ಲಿ ಮಲಗುವದನ್ನೂ ಆಕೆಯೊಡನೆ ಏಕಾಂತವಾಗಿರುವದನ್ನೂ ಬಿಟ್ಟುಬಿಟ್ಟೆನು.

ಹೀಗೆ ನಾನು ೧೯೦೦ರಿಂದ ಇಷ್ಟವಿರಲಿ ಇಲ್ಲದಿರಲಿ ಪರಿಪಾಲಿಸುತ್ತಿದ್ದ ಬ್ರಹ್ಮಚರ್ಯವನ್ನು ೧೯೦೬ರ ಮಧ್ಯದಲ್ಲಿ ವ್ರತವಾಗಿ ಹಿಡಿದೆನು.

---

## ೨೬

# ಸತ್ಯಾಗ್ರಹದ ಜನ್ಮ

ಈ ಆತ್ಮಶುದ್ಧಿಯು ನನ್ನನ್ನು ಸತ್ಯಾಗ್ರಹಕ್ಕೆ ಸಿದ್ಧಮಾಡಲೋಸುಗವೇ ಎಂಬಂತೆ ಜೋಹಾನ್ಸ್‌ಬರ್ಗಿನಲ್ಲಿ ಘಟನೆಗಳು ಸಂಭವಿಸುತ್ತಿದ್ದುವು. ನಾನು ಬ್ರಹ್ಮಚರ್ಯವ್ರತವನ್ನು ಕೈಗೊಳ್ಳುವದರಲ್ಲಿ ಕೊನೆಗಂಡ ನನ್ನ ಜೀವನದ ಮುಖ್ಯ ಘಟನೆಗಳೆಲ್ಲಾ ನನಗೆ ತಿಳಿಯದಂತೆಯೇ ನನ್ನನ್ನು ಸತ್ಯಾಗ್ರಹಕ್ಕೆ ಸಿದ್ಧಗೊಳಿಸುತ್ತಿದ್ದುವೆಂದು ನನಗೆ ಈಗ ಕಾಣುತ್ತದೆ.

'ಸತ್ಯಾಗ್ರಹ'ವೆಂಬ ಶಬ್ದವನ್ನು ಸೃಷ್ಟಿಸುವದಕ್ಕೆ ಮುಂಚೆಯೇ ಆ ತತ್ವವು ಹುಟ್ಟಿದ್ದಿತು. ಅಷ್ಟೇಕೆ, ಅದು ಉದಿಸಿದಾಗ ನನಗೇ ಅದರ ಸ್ವರೂಪವು ತಿಳಿದಿರಲಿಲ್ಲ. ಗುಜರಾತಿಯಲ್ಲಿ ಕೂಡ ನಾವು ಆ ತತ್ವವನ್ನು 'ಪ್ಯಾಸ್ಸಿವ್ ರೆಸಿಸ್ಟೆನ್ಸ್' ಎಂಬ ಹೆಸರಿನಿಂದಲೇ ಕರೆಯುತ್ತಿದ್ದೆವು. ಐರೋಪ್ಯರ ಕೂಟವೊಂದರಲ್ಲಿ 'ಪ್ಯಾಸ್ಸಿವ್ ರೆಸಿಸ್ಟೆನ್ಸ್' ಎಂಬ ಮಾತಿಗೆ ಸಂಕುಚಿತಾರ್ಥವನ್ನು ಕೊಟ್ಟು ಅದು ನಿರ್ಬಲರ ಆಯುಧವೆಂದೂ ಅದರಲ್ಲಿ ದ್ವೇಷಕ್ಕೆ ಕೂಡ ಎಡೆಯುಂಟೆಂದೂ ಕಟ್ಟಕಡೆಗೆ ಅದು ಹಿಂಸಾತ್ಮಕವಾಗಿ ಕೂಡ ಪರಿಣಮಿಸಬಲ್ಲುದೆಂದೂ ಅವರು ಎಣಿಸಿದುದನ್ನು ನಾನು ಕಂಡೆನು. ಆಗ ನಾನು ಇದೊಂದೂ ಭಾರತೀಯರ ಚಳವಳಿಗೆ ಅನ್ವಯಿಸುವದಿಲ್ಲವೆಂದು ಹೇಳಿ ಆ ಚಳವಳಿಯ ನೈಜಸ್ವರೂಪವನ್ನು ವಿವರಿಸಬೇಕಾಯಿತು. ಭಾರತೀಯರ ಹೋರಾಟವನ್ನು ವರ್ಣಿಸಲು ಹೊಸದೊಂದು ಪದವನ್ನು ನಿರ್ಮಿಸಬೇಕೆಂಬುದು ಸ್ಪಷ್ಟವಾಯಿತು.

ಆದರೆ ನಾನು ಬಹು ಪ್ರಯತ್ನಪಟ್ಟರೂ ಅಂತಹ ಪದವೊಂದೂ ನನಗೆ ಹೊಳೆಯಲಿಲ್ಲ. ಆದುದರಿಂದ ನಾನು ಈ ತತ್ವವನ್ನು ವರ್ಣಿಸಲು ಅತ್ಯುತ್ತಮವಾದ ಪದವನ್ನು ಸೂಚಿಸುವ

ವಾಚಕರಿಗೆ ಸಣ್ಣದೊಂದು ಬಹುಮಾನವನ್ನು ಕೊಡುವದಾಗಿ 'ಇಂಡಿಯನ್ ಒಪಿನಿಯನ್' ಪತ್ರಿಕೆಯಲ್ಲಿ ಪ್ರಕಟಿಸಿದೆನು. ಇದರ ಫಲವಾಗಿ ಮಗನಲಾಲ ಗಾಂಧಿಯವರು 'ಸದಾಗ್ರಹ' (ಸತ್ + ಆಗ್ರಹ) ಎಂಬ ಪದವನ್ನು ನಿರ್ಮಿಸಿ ಬಹುಮಾನವನ್ನು ಗೆದ್ದರು. ಆದರೆ ನಾನು ಈ ಪದದ ಅರ್ಥವನ್ನು ಇನ್ನೂ ಸ್ಪಷ್ಟಮಾಡಲಿಕ್ಕಾಗಿ ಅದನ್ನು 'ಸತ್ಯಾಗ್ರಹ'ವೆಂದು ಮಾರ್ಪಡಿಸಿದೆನು. ಈ ಪದವು ನಮ್ಮ ಹೋರಾಟವನ್ನು ವರ್ಣಿಸಲು ಅಂದಿನಿಂದ ಗುಜರಾತಿಯಲ್ಲಿ ಪ್ರತೀತವಾಗಿದೆ.

ಈ ಧರ್ಮಯುದ್ಧದ ಇತಿಹಾಸವೇ ಎಲ್ಲಾ ಲೆಕ್ಕಕ್ಕೂ ದಕ್ಷಿಣ ಆಫ್ರಿಕದಲ್ಲಿ ನನ್ನ ಜೀವನದ—ಅದರಲ್ಲೂ ನಾನು ಆ ಉಪಖಂಡದಲ್ಲಿ ನಡೆಸಿದ ಸತ್ಯಶೋಧನೆಯ—ಚರಿತ್ರೆಯಾಗಿದೆ. ಈ ಇತಿಹಾಸದ ಹೆಚ್ಚು ಭಾಗವನ್ನು ನಾನು ಯರವಾಡಾ ಕಾರಾಗೃಹದಲ್ಲಿ ಬರೆದು ನನಗೆ ಬಿಡುಗಡೆಯಾದಮೇಲೆ ಅದನ್ನು ಮುಗಿಸಿದೆನು. ಅದು 'ನವಜೀವನ'ದಲ್ಲಿ ಪ್ರಕಟವಾಗಿ ಈಚೆಗೆ ಪುಸ್ತಕರೂಪದಲ್ಲಿ ಪ್ರಚುರವಾಗಿದೆ. 'ಕರೆಂಟ್ ಥಾಟ್'' ಎಂಬ ಮಾಸಪತ್ರಿಕೆಗಾಗಿ ಶ್ರೀ. ವಾಲಜೀ ಗೋವಿಂದಜೀ ದೇಸಾಯಿಯವರು ಅದನ್ನು ಇಂಗ್ಲಿಷಿಗೆ ಭಾಷಾಂತರಿಸುತ್ತಿದ್ದಾರೆ. ಆದರೆ ಇಷ್ಟರೊಳಗಿದವರು ನಾನು ದಕ್ಷಿಣ ಆಫ್ರಿಕದಲ್ಲಿ ನಡೆಸಿದ ಸತ್ಯಶೋಧನೆಯ ಪ್ರಯೋಗಗಳಲ್ಲಿ ಮುಖ್ಯವಾದುದನ್ನು ಅರಿತುಕೊಳ್ಳಲಿಕ್ಕೆಂದು ನಾನು ಈ ಇಂಗ್ಲಿಷ್ ಅನುವಾದವನ್ನು ಶೀಘ್ರದಲ್ಲಿಯೇ ಪುಸ್ತಕರೂಪದಲ್ಲಿ ಪ್ರಕಟಿಸಲು ಏರ್ಪಾಟು ಮಾಡುತ್ತಿದ್ದೇನೆ.* ಅದರಲ್ಲಿ ಬರೆದಿರುವದನ್ನು ನಾನು ಪುನಃ ಹೇಳುವದಿಲ್ಲ. ಆದರೆ ಆ ಇತಿಹಾಸದಲ್ಲಿ ಕಾಣಬರದಿರುವ, ದಕ್ಷಿಣ ಆಫ್ರಿಕದಲ್ಲಿ ಕೇವಲ ನನ್ನ ಜೀವನಕ್ಕೆ ಸಂಬಂಧಪಟ್ಟ,

* ಇದು ಈಗ ಇಂಗ್ಲಿಷಿನಲ್ಲಿ ಪ್ರಕಟವಾಗಿದೆ. ಇದರ ಕನ್ನಡ ಅನುವಾದವು 'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ' ಎಂಬ ಹೆಸರಿನಿಂದ ಇದೇ ಆಗಸ್ಟ್ ತಿಂಗಳಲ್ಲಿ ಪ್ರಕಟವಾಗುವುದು.—ಅನುವಾದಕರು.

ಕೆಲವು ಸಂಗತಿಗಳನ್ನು ಮುಂದಿನ ಹಲವು ಅಧ್ಯಾಯಗಳಲ್ಲಿ ತಿಳಿಸುವೆನು. ಇದಾದಮೇಲೆ ಒಡನೆಯೇ ನಾನು ಭರತಖಂಡದಲ್ಲಿ ನಡೆಸಿದ ಪ್ರಯೋಗಳ ವಿಚಾರವನ್ನು ಬರೆಯುತೊಡಗುವೆನು. ಆದುದರಿಂದ ಈ ಪ್ರಯೋಗಗಳನ್ನು ಕಾಲಕ್ರಮದಲ್ಲಿ ಅವಿಚ್ಛಿನ್ನವಾಗಿ ತಿಳಿಯಲೆಳಸುವ ಪಾಠಕರು ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸವನ್ನು ಓದುವದೊಳ್ಳೆಯದು.

---

## ೨೭

# ಆಹಾರ ವಿಚಾರವಾಗಿ ಇನ್ನೂ ಹೆಚ್ಚು ಪ್ರಯೋಗಗಳು

ಕಾಯಾ ವಾಚಾ ಮನಸಾ ಬ್ರಹ್ಮಚರ್ಯವನ್ನಾಚರಿಸಲು ನಾನು ಆತುರನಾಗಿದ್ದೆನು. ಸತ್ಯಾಗ್ರಹ ಯುದ್ಧಕ್ಕಾಗಿ ಆದಷ್ಟು ಹೆಚ್ಚು ಸಮಯವನ್ನು ಉಪಯೋಗಿಸಬೇಕು, ಅಂತಃಶುದ್ಧಿಯನ್ನು ಅಭ್ಯಸಿಸಿ ಆ ಹೋರಾಟಕ್ಕೆ ಸಿದ್ಧಪಡಿಸಿಕೊಳ್ಳಬೇಕು, ಎಂಬ ವಿಷಯದಲ್ಲಿಯೂ ನನಗೆ ಅಷ್ಟೇ ಆತುರತೆಯಿದ್ದಿತು. ಇವು ನಾನು ಆಹಾರದ ವಿಷಯದಲ್ಲಿ ಇನ್ನೂ ಹೆಚ್ಚು ಸುಧಾರಣೆಗಳನ್ನು ಮಾಡುವದಕ್ಕೂ ಹೆಚ್ಚು ಸಂಯಮವನ್ನು ನಡೆಸುವದಕ್ಕೂ ಕಾರಣವಾದುವು. ಹಿಂದಿನ ಬದಲಾವಣೆಗಳಾದರೋ ಆರೋಗ್ಯದೃಷ್ಟಿಯಿಂದ ಮಾಡಲ್ಪಟ್ಟಿದ್ದುವು. ಆದರೆ ಈಗಿನ ಪ್ರಯೋಗಗಳನ್ನು ನಡೆಸಿದುದು ಧಾರ್ಮಿಕದೃಷ್ಟಿಯಿಂದ.

ಈಗ ಉಪವಾಸಮಿತಾಹಾರಗಳಿಗೆ ನನ್ನ ಜೀವನದಲ್ಲಿ ಹೆಚ್ಚು ಪ್ರಾಮುಖ್ಯತೆಯು ದೊರಕಿತು. ಮನುಷ್ಯನಲ್ಲಿ ವಿಷಯವಾಸನೆಯೂ ಜಿಹ್ವಾಚಾಪಲ್ಯವೂ ಸಾಮಾನ್ಯವಾಗಿ ಜೊತೆಗೇ ಇರುತ್ತವೆ. ನನ್ನ ವಿಷಯವೇನೂ ಬೇರೆಯಾಗಿರಲಿಲ್ಲ. ವಿಷಯಾಸಕ್ತಿಯನ್ನೂ ಜಿಹ್ವಾಚಾಪಲ್ಯವನ್ನೂ ಅಂಕೆಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿ ನನಗೆ ಎಷ್ಟೋ ಅಡಚಣೆಗಳೊದಗಿವೆ. ಇಂದು ಕೂಡ ನಾನು ಇವನ್ನು ಸಂಪೂರ್ಣವಾಗಿ ಗೆದ್ದಿರುವೆನೆಂದು ಹೇಳುವಂತಿಲ್ಲ. ನಾನು ಅತ್ಯಾಹಾರಿಯೆಂದೇ ನನ್ನ ಎಣಿಕೆ. ಮಿತ್ರರು ನನ್ನಲ್ಲಿ ಕಾಣುವ ಸಂಯಮವು ನನಗೆ ಎಂದೂ ಹಾಗೆ ಕಂಡಿಲ್ಲ. ನನಗಿರುವಮಟ್ಟಿಗೆ ನಾನು ಸಂಯಮವನ್ನು ಅಭ್ಯಸಿಸದೆ ಹೋಗಿದ್ದರೆ ನಾನು ಪಶುಗಳಿಗಿಂತ ಕೀಳಂತಸ್ತಿಗೆ ಇಳಿದು ಎಂದೋ

ಹಾಳಾಗಿಹೋಗಿರುತ್ತಿದ್ದೆನು. ಆದರೆ ನಾನು ನನ್ನ ಕುಂದುಗಳನ್ನು ಸಾಕಾದಷ್ಟುಮಟ್ಟಿಗೆ ಅರಿತಿದ್ದುದರಿಂದ ಅವುಗಳನ್ನು ಹೋಗಲಾಡಿಸಲು ದೊಡ್ಡ ಪ್ರಯತ್ನವನ್ನು ಮಾಡಿದೆನು. ಈ ಪ್ರಯತ್ನದ ಫಲವಾಗಿಯೇ ನಾನು ಇಷ್ಟು ದಿನ ಈ ಶರೀರದೊಡನೆ ಕೂಡಿಕೊಂಡು ಬಂದಿದ್ದೇನೆ; ಅದರಿಂದ ತಕ್ಕಮಟ್ಟಿಗೆ ಕೆಲಸವನ್ನೂ ತೆಗೆದಿದ್ದೇನೆ.

ನನ್ನ ಈ ಕುಂದು ನನಗೆ ಗೊತ್ತಿದ್ದುದರಿಂದಲೂ ಅನಿರೀಕ್ಷಿತವಾಗಿ ಹಿತವಾದ ಸಂಗವು ದೊರೆತುದರಿಂದಲೂ ಏಕಾದಶಿಯ ದಿನ ಫಲಾಹಾರವನ್ನು ಅಥವಾ ಉಪವಾಸವನ್ನು ಮಾಡತೊಡಗಿದೆನು. ಜನ್ಮಾಷ್ಟಮಿ ಮುಂತಾದ ಶುಭತಿಥಿಗಳನ್ನು ಆಚರಿಸತೊಡಗಿದೆನು. ಬರಿಯ ಹಣ್ಣಿನ ಆಹಾರವನ್ನು ಮೊದಲುಮಾಡಿದೆನು. ಆದರೆ ಸಂಯಮದ ದೃಷ್ಟಿಯಿಂದ ಹಣ್ಣಿನ ಆಹಾರಕ್ಕೂ ಧಾನ್ಯದ ಆಹಾರಕ್ಕೂ ಹೆಚ್ಚಿನ ವ್ಯತ್ಯಾಸವೇನೂ ಕಾಣಬರಲಿಲ್ಲ. ಧಾನ್ಯದ ಆಹಾರದಿಂದ ನಮ್ಮ ನಾಲಗೆಯನ್ನು ರಂಜಿಸುವದು ಎಷ್ಟರಮಟ್ಟಿಗೆ ಸಾಧ್ಯವೋ ಹಣ್ಣಿನಿಂದಲೂ ಅಷ್ಟರಮಟ್ಟಿಗೆ ಸಾಧ್ಯ ಮತ್ತು ಅದು ಅಭ್ಯಾಸವಾದಮೇಲೆ ಇನ್ನೂ ಹೆಚ್ಚಾಗಿಯೇ ಸಾಧ್ಯವೆಂಬುದನ್ನು ನಾನು ಕಂಡೆನು. ಆದುದರಿಂದ ನಾನು ಇಂತಹ ಶುಭದಿನಗಳಲ್ಲಿ ಉಪವಾಸ ಮಾಡುವದು ಅಥವಾ ಒಂದು ಹೊತ್ತು ಊಟಮಾಡುವದಕ್ಕೆ ಪ್ರಾಮುಖ್ಯತೆಯನ್ನು ಕೊಡತೊಡಗಿದೆನು. ಇದಲ್ಲದೆ ಪ್ರಾಯಶ್ಚಿತ್ತವೇ ಮುಂತಾದ ಸಂದರ್ಭವೊದಗಿದರೆ ಅದನ್ನೂ ಉಪವಾಸಕ್ಕಾಗಿ ಆನಂದದಿಂದ ಉಪಯೋಗಿಸಿಕೊಳ್ಳುತ್ತಿದ್ದೆನು.

ಈಗ ಶರೀರವು ಹೆಚ್ಚು ಸ್ವಚ್ಛವಾಗಿದ್ದುದರಿಂದ ಹಸಿವು ಚೆನ್ನಾಗಿ ಆಗಿ ಊಟದಲ್ಲಿ ಹೆಚ್ಚು ರುಚಿಯಿರುತ್ತಿದ್ದಿತೆಂದೂ ನನ್ನ ಅನುಭವಕ್ಕೆ ಬಂದಿತು. ಉಪವಾಸವು ಸಂಯಮೋಪಕರಣವಾಗಿರುವಂತೆಯೇ ಅದನ್ನು ಭೋಗೋಪಕರಣವನ್ನಾಗಿಯೂ ಮಾಡಿಕೊಳ್ಳಬಹುದೆಂದು ನನಗೆ ಗೊತ್ತಾಯಿತು. ಆಮೇಲೆ ನನಗುಂ

ಟಾದ ಇದೇ ರೀತಿಯ ಅನುಭವಗಳಲ್ಲದೆ ಇತರರ ಅನುಭವಗಳೂ ಈ ಆಶ್ಚರ್ಯ ವಿಷಯವನ್ನು ಸಮರ್ಥಿಸುತ್ತವೆ. ನಾನು ನನ್ನ ಶರೀರಕ್ಕೆ ಶಿಕ್ಷಣ ಕೊಟ್ಟು ಉತ್ತಮಗೊಳಿಸಬೇಕೆಂದಿದ್ದೆನು. ಆದರೆ ಸಂಯಮಸಾಧನೆಯೂ ..ಜಿಹ್ವಾನಿಗ್ರಹವೂ ಈಗ ನನ್ನ ಹೆಗ್ಗುರಿಯಾಗಿದ್ದುದರಿಂದ ನಾನು ಈಗೊಂದು ಆಗೊಂದು ರೀತಿಯ ಆಹಾರವನ್ನು ಆರಿಸಿ ಜೊತೆಗೆ ಅದರ ಅಳತೆಯನ್ನೂ ಕ್ಲುಪ್ತಪಡಿಸುತ್ತಿದ್ದೆನು. ಆದರೆ ರುಚಿಯು ನನ್ನ ಹಿಂದೆಯೇ ಬರುತ್ತಿದ್ದಿತು! ಒಂದು ಆಹಾರವನ್ನು ಬಿಟ್ಟು ಇನ್ನೊಂದನ್ನು ತೆಗೆದುಕೊಂಡರೆ ಮೊದಲನೆಯದಕ್ಕಿಂತ ಎರಡನೆಯದು ಹೊಸ ರುಚಿಯನ್ನೂ ಹೆಚ್ಚಾದ ರುಚಿಯನ್ನೂ ಕೊಡುತ್ತಿದ್ದಿತು!

ನಾನು ಈ ಪ್ರಯೋಗಗಳನ್ನು ನಡೆಸುವಾಗ ನನಗೆ ಅನೇಕ ಜೊತೆಗಾರರಿದ್ದರು. ಇವರಲ್ಲಿ ಹರ್ಮ್ಯಾನ್ ಕಾಲ್‌ಬಾಕರೇ ಮುಖ್ಯರು. ನಾನು ಇವರ ವಿಷಯವಾಗಿ 'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ' ದಲ್ಲಿ ಆಗಲೇ ಬರೆದಿರುವದರಿಂದ ಇಲ್ಲಿ ನಾನು ಪುನಃ ಆ ವಿಷಯಗಳನ್ನು ತಿಳಿಸುವದಿಲ್ಲ. ಉಪವಾಸದಲ್ಲಿಯಾಗಲಿ ಅಥವಾ ಆಹಾರದ ಮಾರ್ಪಾಟಿನಲ್ಲಿಯಾಗಲಿ ಕಾಲ್‌ಬಾಕರು ಯಾವಾಗಲೂ ನನ್ನೊಡನೆ ಇರುತ್ತಿದ್ದರು. ಸತ್ಯಾಗ್ರಹಕದನವು ಅತ್ಯಂತ ತೀಕ್ಷ್ಣವಾಗಿ ನಡೆಯುತ್ತಿದ್ದಾಗ ನಾನು ಅವರ ಮನೆಯಲ್ಲಿಯೇ ಅವರೊಡನೆ ವಾಸಿಸುತ್ತಿದ್ದೆನು. ನಾವು ನಮ್ಮ ಆಹಾರದ ಬದಲಾವಣೆಗಳ ವಿಷಯವಾಗಿ ಚರ್ಚಿಸುತ್ತಾ ಹಿಂದಿನ ಆಹಾರಕ್ಕಿಂತಲೂ ಹೊಸ ಆಹಾರದಲ್ಲಿ ಹೆಚ್ಚು ರುಚಿಗಾಣುತ್ತಿದ್ದೆವು. ಈ ರೀತಿಯ ಮಾತುಕತೆಯು ಆಗ ಸಂತೋಷಜನಕವಾಗಿ ತೋರುತ್ತಿದ್ದಿತು. ಅದರಲ್ಲಿ ಯಾವ ಅನೌಚಿತ್ಯವೂ ನನಗೆ ಕಾಣುತ್ತಿರಲಿಲ್ಲ. ಆದರೆ ಆಹಾರದ ರುಚಿಯ ವಿಷಯವಾಗಿ ಮಾತನಾಡಿದುದು ತಪ್ಪೆಂದು ನನಗೆ ಅನುಭವದಿಂದ ಗೊತ್ತಾಗಿದೆ. ಊಟಮಾಡುವದು ಶರೀರರಕ್ಷಣೆಗಲ್ಲದೆ ನಾಲಗೆಯ ರುಚಿಗಲ್ಲ. ಪ್ರತಿಯೊಂದು ಇಂದ್ರಿಯವೂ ಶರೀರಕ್ಕಾಗಿಯೂ ಶರೀರದ ಮೂಲಕ ಆತ್ಮಕ್ಕಾ

ಗಿಯೂ ಸೇವಿಸಿದಾಗ ಅದಕ್ಕೆ ವಿಶಿಷ್ಟವಾದ ರಸವು ಶೂನ್ಯವಾಗುತ್ತದೆ. ಆಗಲೇ ಅದು ಪ್ರಕೃತಿನಿಯಮಕ್ಕನುಸಾರವಾಗಿ ಕೆಲಸ ಮಾಡತೊಡಗುವದು.

ಹೀಗೆ ಪ್ರಕೃತಿಪಥಗಾಮಿಯಾಗಲು ಎಷ್ಟು ಪ್ರಯೋಗಗಳನ್ನು ನಡೆಸಿದರೂ ಕಡಿಮೆಯೇ, ಎಷ್ಟು ತ್ಯಾಗಮಾಡಿದರೂ ಹೆಚ್ಚಲ್ಲ. ಆದರೆ ದುರದೃಷ್ಟವಶಾತ್ ಇಂದಿನ ಪ್ರವಾಹವು ಇದಕ್ಕೆ ಇದಿರಾಗಿ ಹರಿಯುತ್ತಿದೆ. ನಶಿಸಿಹೋಗುವ ನಮ್ಮ ಶರೀರವನ್ನು ಅಂದಗೊಳಿಸುವದಕ್ಕಾಗಿಯೂ ಅದರ ಇರವನ್ನು ಒಂದೆರಡು ಕ್ಷಣ ನಿಲ್ಲಿಸಲೋಸುಗವೂ ಇತರ ಅನೇಕ ಪ್ರಾಣಿಗಳನ್ನು ಬಲಿಗೊಡಲು ನಾವು ಹೇಸುವದಿಲ್ಲ. ಇದರ ಫಲವೇನೆಂದರೆ ಶರೀರವೂ ಆತ್ಮವೂ ಎರಡೂ ಕ್ಷಯಿಸುತ್ತವೆ. ಹಳೆಯ ಜಾಡ್ಯವೊಂದನ್ನು ಹೋಗಲಾಡಿಸುವದರಲ್ಲಿ ನಾವು ನೂರು ಹೊಸ ವ್ಯಾಧಿಗಳನ್ನು ತಂದುಕೊಳ್ಳುತ್ತೇವೆ; ಇಂದ್ರಿಯಭೋಗಪರವಶರಾಗಿ ಆ ಭೋಗಶಕ್ತಿಯನ್ನು ಕೂಡ ಕಳೆದುಕೊಳ್ಳುತ್ತೇವೆ. ಇದೆಲ್ಲಾ ನಮ್ಮ ಕಣ್ಣೆದಿರಿಗೇ ನಡೆಯುತ್ತಿದೆ. ಆದರೆ ಕಣ್ಣುಮುಚ್ಚಿಕೊಂಡವನಿಗಿಂತ ಕುರುಡನುಂಟೆ?

ಆಹಾರವಿಷಯಕವಾದ ಪ್ರಯೋಗಗಳ ಉದ್ದೇಶವನ್ನೂ ಅವುಗಳಲ್ಲಿ ಕೊನೆಗಂಡ ವಿಚಾರಸರಣಿಯನ್ನೂ ಹೀಗೆ ವಿವರಿಸಿ ಮುಂದೆ ಆ ಪ್ರಯೋಗಗಳನ್ನು ತಕ್ಕಮಟ್ಟಿಗೆ ವಿಸ್ತಾರವಾಗಿ ವರ್ಣಿಸಲೆಳಸುತ್ತೇನೆ.

---

# ೨೮

# ಕಸ್ತೂರಿಬಾಯಿಯ ಸ್ಥೈರ್ಯ

ಕಸ್ತೂರಿಬಾಯಿಯ ಜೀವನದಲ್ಲಿ ಆಕೆಯ ಪ್ರಾಣಕ್ಕೆ ಕ್ರೂರ ಜಾಡ್ಯದಿಂದ ಮೂರು ಸಲ ಗಂಡಾಂತರವೊದಗಿದೆ. ಮೂರು ಸಲವೂ ಆಕೆಗೆ ಮನೆಯ ಮದ್ದಿನಿಂದಲೇ ಗುಣವಾಯಿತು. ಇವುಗಳಲ್ಲಿ ಮೊದಲನೆಯದು ಸಂಭವಿಸಿದ ಸಮಯದಲ್ಲಿ ಸತ್ಯಾಗ್ರಹವು ನಡೆಯುತ್ತಿದ್ದಿತು ಅಥವಾ ಪ್ರಾರಂಭವಾಗುವದರಲ್ಲಿದ್ದಿತು. ಆಕೆಗೆ ಬಾರಿಬಾರಿಗೆ ರಕ್ತಸ್ರಾವವಾಗುತ್ತಿದ್ದಿತು. ವೈದ್ಯಮಿತ್ರರೊಬ್ಬರು ಆಕೆಗೆ ಶಸ್ತ್ರಚಿಕಿತ್ಸೆ ಮಾಡಿಸಬೇಕೆಂದು ಸಲಹೆಯಿತ್ತರು. ಕಸ್ತೂರಿಬಾಯಿಯು ಸ್ವಲ್ಪ ಅನುಮಾನಪಟ್ಟುಕೊಂಡು ಆಮೇಲೆ ಇದಕ್ಕೆ ಒಪ್ಪಿದಳು. ಆಕೆಯ ಶರೀರವು ಬಹು ಕ್ಷೀಣವಾಗಿದ್ದುದರಿಂದ ವೈದ್ಯರು ಆಕೆಗೆ ಕ್ಲೋರೋಫಾರ್ಮನ್ನು (ಎಚ್ಚರ ತಪ್ಪಿಸುವ ಔಷಧ) ಕೊಡದೆಯೇ ಶಸ್ತ್ರಪ್ರಯೋಗವನ್ನು ಮಾಡಬೇಕಾಯಿತು. ಪ್ರಯೋಗವೇನೋ ನಿರ್ವಿಘ್ನವಾಗಿ ನೆರವೇರಿತು. ಆದರೆ ಆಕೆಯು ಬಹಳ ನೋವನ್ನು ಸಹಿಸಬೇಕಾಯಿತು. ಕಸ್ತೂರಿಬಾಯಿಯು ಇದನ್ನೆಲ್ಲಾ ಅಚ್ಚರಿಗೊಳಿಸುವ ಸ್ಥೈರ್ಯದಿಂದ ಸಹಿಸಿದಳು. ಆಕೆಗೆ ಶುಶ್ರೂಷೆಗೈಯುತ್ತಿದ್ದ ವೈದ್ಯರೂ ಅವರ ಹೆಂಡತಿಯೂ ಆಕೆಯನ್ನು ಬಹು ಎಚ್ಚರಿಕೆಯಿಂದ ನೋಡಿಕೊಂಡರು. ಇದು ನಡೆದುದು ಡರಬನಿನಲ್ಲಿ. ವೈದ್ಯರು ನನಗೆ ಜೋಹಾನ್ಸಬರ್ಗಿಗೆ ಹೋಗಲಪ್ಪಣೆಯಿತ್ತು, ರೋಗಿಯ ವಿಚಾರವಾಗಿ ಸ್ವಲ್ಪವೂ ಚಿಂತಿಸಲು ಕಾರಣವಿಲ್ಲವೆಂದು ಹೇಳಿದರು.

ಆದರೆ ಕೆಲವು ದಿವಸಗಳಲ್ಲಿಯೇ ಕಸ್ತೂರಿಬಾಯಿಯ ದೇಹಸ್ಥಿತಿಯು ಕೇಡಾಗಿರುವದೆಂದೂ ಆಕೆಗೆ ಹಾಸಿಗೆಯಲ್ಲಿ ಕುಳಿತುಕೊಳ್ಳುವಷ್ಟು ತ್ರಾಣ ಕೂಡ ಇಲ್ಲವೆಂದೂ ಒಂದು ಸಲ ಆಕೆಯು

ಎಚ್ಚರತಪ್ಪಿದ್ದಳೆಂದೂ ನನಗೆ ಪತ್ರ ಬಂದಿತು. ನನ್ನ ಅನುಮತಿಯಿಲ್ಲದೆ ಆಕೆಗೆ ಮದ್ಯವನ್ನಾಗಲಿ ಮಾಂಸವನ್ನಾಗಲಿ ಕೊಡಲಾಗದೆಂದು ವೈದ್ಯರಿಗೆ ತಿಳಿದಿದ್ದಿತು. ಆದುದರಿಂದ ಅವರು ಕಸ್ತೂರಿಬಾಯಿಗೆ 'ಬೀಫ್ ಟೀ' (ಗೋಮಾಂಸದಿಂದ ಮಾಡಿದ ಚಹಾ) ಯನ್ನು ಕೊಡಲು ನನ್ನ ಅಪ್ಪಣೆಯನ್ನು ಜೋಹಾನ್ಸಬರ್ಗನಿಂದ 'ಟೆಲಿಫೋನ' ಮೂಲಕ ಕೇಳಿದರು. ನಾನು ಹಾಗೆ ಅಪ್ಪಣೆಕೊಡಲಾರೆನೆಂದೂ ಆಕೆಯು ತನ್ನ ಇಷ್ಟವನ್ನು ತಿಳಿಸುವ ಸ್ಥಿತಿಯಲ್ಲಿದ್ದರೆ ಆಕೆಯನ್ನು ಕೇಳಬಹುದೆಂದೂ ಆಕೆಯು ತನ್ನಿಷ್ಟದಂತೆ ನಡೆಯಲು ಸ್ವತಂತ್ರಳೆಂದೂ ನಾನು ಉತ್ತರ ಕಳಿಸಿದೆನು.

"ಈ ವಿಷಯದಲ್ಲಿ ನಾನು ರೋಗಿಯ ಇಷ್ಟದಂತೆ ನಡೆಯಲು ಒಪ್ಪಲಾರೆನು. ನೀವೇ ಬರಬೇಕು. ನನಗೆ ಸ್ವಾತಂತ್ರ್ಯ ಕೊಡದಿದ್ದರೆ ನಿಮ್ಮ ಹೆಂಡತಿಯ ಪ್ರಾಣಕ್ಕೆ ನಾನು ಹೊಣೆಯಾಗುವದಿಲ್ಲ." ಎಂದು ವೈದ್ಯರು ಹೇಳಿದರು.

ನಾನು ಆ ದಿನದ ರೈಲಿನಲ್ಲಿಯೇ ಡರಬನಿಗೆ ಹೋಗಿ ವೈದ್ಯರನ್ನು ಕಂಡೆನು. ಅವರು ನಿಸ್ತಬ್ಧರಾಗಿ ಈ ಸಮಾಚಾರವನ್ನು ನನಗೆ ಹೇಳಿದರು: "ನಿಮ್ಮನ್ನು 'ಟೆಲಿಫೋನ'ನಲ್ಲಿ ಕೇಳುವ ಹೊತ್ತಿಗೆ ನಾನು ಆಗಲೇ ನಿಮ್ಮ ಹೆಂಡತಿಗೆ 'ಬೀಫ್ ಟೀ'ಯನ್ನು ಕೊಟ್ಟಿದ್ದೆನು."

"ವೈದ್ಯರೆ, ಇದು ಮೋಸ." ಎಂದೆನು ನಾನು.

"ರೋಗಿಗೆ ಔಷಧಪಥ್ಯಗಳನ್ನು ನಿಯಮಿಸುವದರಲ್ಲಿ ಮೋಸವೆಲ್ಲಿಂದ ಬಂದಿತು? ಅಷ್ಟೇಕೆ, ಹಾಗೆ ಮಾಡುವದರಿಂದ ರೋಗಿಗಳನ್ನು ಉಳಿಸುವದು ಸಾಧ್ಯವಾದರೆ ಅವರನ್ನು ಅಥವಾ ಅವರ ಬಂಧುಗಳನ್ನು ಮೋಸಗೊಳಿಸುವದು ಒಳ್ಳೆಯದೆಂದೇ ನಾವು ವೈದ್ಯರು ಎಣಿಸುತ್ತೇವೆ." ಎಂದು ವೈದ್ಯರು ದೃಢತೆಯಿಂದ ಹೇಳಿದರು.

ನನಗೆ ಬಹು ಖೇದವಾಯಿತು. ಆದರೂ ನಾನು ಶಾಂತನಾಗಿದ್ದೆನು. ವೈದ್ಯರು ಒಳ್ಳೆಯ ಮನುಷ್ಯರಾಗಿದ್ದರಲ್ಲದೆ ನನ್ನ ಗೆಳೆಯರಾಗಿಯೂ ಇದ್ದರು. ಅವರೂ ಅವರ ಹೆಂಡತಿಯೂ ನನ್ನ ಮೇಲೆ ಉಪಕಾರದ ಹೊರೆಯನ್ನು ಹೊರಿಸಿದ್ದರು. ಆದರೆ ಅವರ ವೈದ್ಯನೀತಿಗೆ ತಲೆಬಾಗಿಸಲು ನಾನು ಸಿದ್ಧನಾಗಿರಲಿಲ್ಲ.

"ವೈದ್ಯರೇ, ಈಗ ಏನು ಮಾಡಬೇಕೆಂದಿರುವಿರಿ, ಹೇಳಿ. ಆಕೆಯು ಇಷ್ಟಪಟ್ಟರಂತು ಸರಿ. ಇಲ್ಲದಿದ್ದರೆ ಅದರಿಂದ ಆಕೆಯ ಸಾವು ಸಿದ್ಧವಾಗಿದ್ದರೂ ಆಕೆಗೆ ಮಾಂಸವನ್ನು ಕೊಡಿಸಲು ನಾನು ಎಂದಿಗೂ ಒಪ್ಪುವದಿಲ್ಲ."

"ನಿಮ್ಮ ತತ್ವ ವಿಚಾರಕ್ಕೆ ನನ್ನದೇನೂ ಅಡ್ಡಿಯಿಲ್ಲ. ಇಗೋ ಕೇಳಿ: ನಿಮ್ಮ ಪತ್ನಿಗೆ ನಾನು ವೈದ್ಯನಾಗಿರುವವರೆಗೂ ಆಕೆಗೆ ನನ್ನಿಷ್ಟಬಂದುದನ್ನು ಕೊಡಲು ನನಗೆ ಸ್ವಾತಂತ್ರ್ಯವಿರಬೇಕು. ಇದು ನಿಮ್ಮ ಒಪ್ಪಿಗೆಗೆ ಬಾರದಿದ್ದರೆ ನಿಮ್ಮ ಹೆಂಡತಿಯನ್ನು ಕರೆದುಕೊಂಡು ಹೋಗಿ. ಇದು ವಿಷಾದಕರವಾದರೂ ನನ್ನ ಮನೆಯಲ್ಲಿಯೇ ಆಕೆಯು ಸಾಯುವದನ್ನು ನಾನು ನೋಡಲಾರೆನು."

"ಹಾಗಾದರೆ ನಾನು ಈಗಲೇ ಆಕೆಯನ್ನು ಕರೆದುಕೊಂಡು ಹೋಗಬೇಕೋ?"

"ಆಕೆಯನ್ನು ಕರೆದುಕೊಂಡು ಹೋಗಿರೆಂದು ನಾನು ಹೇಳಿದುದು ಯಾವಾಗ? ನನಗೆ ಬೇಕಾದುದು ಇಷ್ಟೇ: ನನ್ನ ಕೈ ಕಟ್ಟಬೇಡಿ. ಇದಕ್ಕೆ ನೀವು ಒಪ್ಪಿದರೆ ನನ್ನ ಹೆಂಡತಿಯೂ ನಾನೂ ಆಕೆಗೆ ನಮ್ಮ ಕೈಲಾದುದನ್ನೆಲ್ಲಾ ಮಾಡುತ್ತೇವೆ. ಆಕೆಯ ವಿಚಾರವಾಗಿ ಎಳ್ಳಷ್ಟೂ ಚಿಂತೆಯಿಲ್ಲದೆ ನೀವು ಹೋಗಬಹುದು. ಇಷ್ಟು ಸುಲಭವಾದ ವಿಷಯವು ನಿಮಗೆ ತಿಳಿಯದೇಹೋದರೆ ನಮ್ಮ ಮನೆಯಿಂದ ನಿಮ್ಮ ಹೆಂಡತಿಯನ್ನು ಕರೆದುಕೊಂಡುಹೋಗಿರೆಂದು ನಾನು ನಿಮಗೆ ಹೇಳಬೇಕಾಗುತ್ತದೆ."

ನನ್ನ ಮಕ್ಕಳಲ್ಲಿ ಒಬ್ಬನು ನನ್ನ ಜೊತೆಗೆ ಇದ್ದನೆಂದು ನನಗೆ ತೋರುತ್ತದೆ. ಅವನೂ ನನ್ನ ಅಭಿಪ್ರಾಯವನ್ನೇ ಅನುಮೋದಿಸಿ ಕಸ್ತೂರಿಬಾಯಿಗೆ 'ಬೀಫ್ ಟೀ'ಯನ್ನು ಕೊಡಕೂಡದೆಂದು ಹೇಳಿದನು. ಇದಾದಮೇಲೆ ನಾನು ನನ್ನ ಹೆಂಡತಿಯೊಡನೆ ಮಾತನಾಡಿದೆನು. ಈ ವಿಷಯದಲ್ಲಿ ಆಕೆಯ ಅಭಿಪ್ರಾಯವನ್ನು ಕೇಳುವದಕ್ಕೆ ಕೂಡ ಆಕೆಯು ಕೇವಲ ನಿಶ್ಶಕ್ತಳಾಗಿದ್ದಳು. ಆದರೆ ಕೇಳುವದು ದುಃಖಕರವಾದರೂ ಅದು ನನ್ನ ಕರ್ತವ್ಯವೆಂದು ಭಾವಿಸಿ ನಾನು ವೈದ್ಯರಿಗೂ ನನಗೂ ನಡೆದ ವಿಷಯವನ್ನು ಆಕೆಗೆ ತಿಳಿಸಿದೆನು. ಆಕೆಯು ದೃಢತಾಪೂರ್ವಕವಾಗಿ "ನಾನು 'ಬೀಫ್ ಟೀ' ಯನ್ನು ಸೇವಿಸುವದಿಲ್ಲ. ಈ ಪ್ರಪಂಚದಲ್ಲಿ ಮಾನುಷಜನ್ಮವೆತ್ತುವದೇ ಒಂದು ಭಾಗ್ಯ ನಾನು ನಿಮ್ಮ ತೊಡೆಯ ಮೇಲೆ ಸತ್ತೇನೇ ಹೊರತು ಈ ಶರೀರವನ್ನು ಕಲುಷಿತವನ್ನಾಗಿ ಮಾಡುವದಿಲ್ಲ." ಎಂದು ಹೇಳಿದಳು.

ನಾನು ಆಕೆಗೆ ಎಷ್ಟೋ ಹೇಳಿದೆನು. ನನ್ನ ಮತವನ್ನೇ ಆಕೆಯು ಅನುಸರಿಸಬೇಕಾದುದೇನೂ ಇಲ್ಲವೆಂದು ತಿಳಿಸಿದೆನು. ಮಾಂಸಮದ್ಯಗಳನ್ನು ಔಷಧವಾಗಿ ತೆಗೆದುಕೊಳ್ಳಲು ಅಭ್ಯಂತರವಿಲ್ಲದ ಹಿಂದೂ ಮಿತ್ರರ ಮತ್ತು ಪರಿಚಯಸ್ಥರ ಉದಾಹರಣೆಗಳನ್ನು ಕೊಟ್ಟೆನು. ಆದರೆ ಆಕೆಯು ಕದಲಲಿಲ್ಲ. "ಅದೆಲ್ಲಾ ಆಗುವದಿಲ್ಲ. ನನ್ನನ್ನು ಇಲ್ಲಿಂದ ಒಡನೆಯೇ ಕರೆದುಕೊಂಡು ಹೋಗಿ" ಎಂದಳವಳು.

ನನಗೆ ಬಹು ಸಂತೋಷವಾಯಿತು. ನಾನು ಕಸ್ತೂರಿಬಾಯಿಯನ್ನು ಅಲ್ಲಿಂದ ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದೆನು. ಹೀಗೆ ನಿಶ್ಚಯಿಸಿದಾಗ ನನ್ನ ಹೃದಯವು ಪೂರ್ಣವಾಗಿ ಸ್ವಮಿತವಾಗಿರಲಿಲ್ಲ. ನಾನು ವೈದ್ಯರ ಬಳಿಗೆ ಹೋಗಿ ನನ್ನ ಹೆಂಡತಿಯ ಮನೋನಿಶ್ಚಯವನ್ನು ತಿಳಿಸಿದೆನು. ಅವರು ರೇಗಿ

"ಎಂತಹ ಕಲ್ಲೆದೆ ನಿಮ್ಮದು ! ಆಕೆಯ ಈಗಿನ ಸ್ಥಿತಿಯಲ್ಲಿ ಈ ವಿಷಯವಾಗಿ ಮಾತನಾಡುವದಕ್ಕೆ ನಿಮಗೆ ನಾಚಿಕೆಯಾಗಲಿಲ್ಲವೆ? ನಾನು ಹೇಳುವದನ್ನು ಕೇಳಿ: ನಿಮ್ಮ ಪತ್ನಿಯು ಈಗ ಇಲ್ಲಿಂದ ಸಾಗಿಸಲ್ಪಡುವ ಸ್ಥಿತಿಯಲ್ಲಿಲ್ಲ. ಆಕೆಯ ಶರೀರವು ಅಲುಗಾಡಿ ಕುಲುಕಾಡಿದರೆ ಬಾಳುವಹಾಗಿಲ್ಲ. ಆಕೆಗೆ ದಾರಿಯಲ್ಲಿಯೇ ಪ್ರಾಣಹೋದರೂ ಆಶ್ಚರ್ಯವೇನಿರುವದಿಲ್ಲ. ನೀವು ಕರೆದುಕೊಂಡೇ ಹೋಗಬೇಕೆಂದು ಹಟಮಾಡುವದಾದರೆ ಹಾಗೆ ಮಾಡಲು ನೀವು ಸ್ವತಂತ್ರರು. ನೀವು ಆಕೆಗೆ 'ಬೀಫ್ ಟೀ' ಯನ್ನು ಕೊಡದಿದ್ದರೆ ಆಕೆಯನ್ನು ನಮ್ಮ ಮನೆಯಲ್ಲಿ ಒಂದು ದಿನ ಕೂಡ ಇಟ್ಟುಕೊಳ್ಳುವ ಜವಾಬ್ದಾರಿಯನ್ನು ನಾನು ಹೊರಲು ಸಿದ್ಧನಾಗಿಲ್ಲ." ಎಂದು ಹೇಳಿದರು.

ಆದುದರಿಂದ ನಾವು ಆ ಸ್ಥಳವನ್ನು ಒಡನೆಯೇ ಬಿಡಲು ನಿಶ್ಚಯಿಸಿದೆವು. ಜಡಿಮಳೆಯು ಸುರಿಯುತ್ತಿದ್ದಿತು. ರೈಲ್ವೆಯ ನಿಲ್ದಾಣವು ಸ್ವಲ್ಪ ದೂರವಾಗಿಯೇ ಇದ್ದಿತು. ಡರಬನಿನಿಂದ ಫೀನಿಕ್ಸನವರೆಗೆ ರೈಲಿನಲ್ಲಿಯೂ ಆಮೇಲೆ ಎರಡುವರೆ ಮೈಲಿ ಕಾಲು ರಸ್ತೆಯಲ್ಲಿಯೂ ಹೋದರೆ ನಮ್ಮ ಆಶ್ರಮವು ಸಿಕ್ಕುತ್ತಿದ್ದಿತು. ನಾನು ಹೊತ್ತಿದ್ದುದೇನೋ ಗಂಡಾಂತರದ ಕೆಲಸ. ಆದರೆ ಈಶ್ವರನ ಮೇಲೆ ಭಾರವನ್ನು ಹಾಕಿ ನನ್ನ ಕಾರ್ಯದಲ್ಲಿ ಮುಂದುವರಿದೆನು. ರೈಲ್ವೇ ಸ್ಟೇಷನಿಗೆ ಬಂದು ಒಂದು ಡೋಲಿ, ಒಂದು ಸೀಸೆಯ ತುಂಬ ಹಾಲು, ಒಂದು ಸೀಸೆಯ ತುಂಬ ನೀರು, ಡೋಲಿಯಲ್ಲಿ ಕಸ್ತೂರಿಬಾಯಿಯನ್ನು ಹೊರುವದಕ್ಕೆ ಆರು ಆಳುಗಳು, ಇವೆಲ್ಲದರೊಡನೆ ನಮ್ಮನ್ನು ಇದಿರುಗೊಳ್ಳಬೇಕೆಂದು ವೆಸ್ಟರಿಗೆ ಒಬ್ಬ ಆಳಿನೊಡನೆ ಮೊದಲೇ ಹೇಳಿಕಳಿಸಿದ್ದೆನು. ಕಸ್ತೂರಿಬಾಯಿಯನ್ನು ಮೊದಲಿನ ರೈಲುಗಾಡಿಯಲ್ಲಿಯೇ ಕರೆದುಕೊಂಡು ಹೋಗಲು ಅನುಕೂಲವಾಗುವಂತೆ ಒಂದು ರಿಕ್ಷಾವನ್ನು ತಂದು ಅದರಲ್ಲಿ ಆಕೆಯನ್ನು ಅಂತಹ ಅಪಾಯ ಸ್ಥಿತಿಯಲ್ಲಿಯೇ ಕೂಡಿಸಿ ಹೊರಟೆನು.

ನನ್ನ ಹೆಂಡತಿಗೆ ಧೈರ್ಯ ಹೇಳಬೇಕಾದ ಆವಶ್ಯಕತೆಯಿರಲಿಲ್ಲ. ಆಕೆಯೇ 'ನನಗೇನೂ ಆಗುವದಿಲ್ಲ. ನೀವು ಚಿಂತಿಸಬೇಡಿರಿ.' ಎಂದು ಹೇಳಿ ನನ್ನನ್ನು ಸಂತೈಸಿದಳು.

ಎಷ್ಟೋ ದಿನ ಆಹಾರವಿಲ್ಲದೆ ಹೋದುದರಿಂದ ಆಕೆಯ ಶರೀರದಲ್ಲಿ ಚರ್ಮಮೂಳೆಗಳಲ್ಲದೆ ಇನ್ನೇನೂ ಇರಲಿಲ್ಲ. ನಿಲ್ದಾಣದ ವೇದಿಕೆಯು (ಸ್ಟೇಷನಿನ ಪ್ಲ್ಯಾಟ್‌ಫಾರ್ಮ್) ಬಹು ದೊಡ್ಡದಾಗಿದ್ದುದರಿಂದ ರೈಲ್‌ಗಾಡಿಗಳು ಸಿಕ್ಕುವದಕ್ಕೆ ಮುಂಚೆ ಒಂದಷ್ಟು ದೂರ ನಡೆಯಬೇಕಾಗಿದ್ದಿತು. ಆದುದರಿಂದ ನಾನು ಆಕೆಯನ್ನು ಎತ್ತಿಕೊಂಡು ಹೋಗಿ ಗಾಡಿಯಲ್ಲಿ ಕೂಡಿಸಿದೆನು. ಫೀನಿಕ್ಸಿನಿಂದ ನಾವು ಆಕೆಯನ್ನು ಡೋಲಿಯಲ್ಲಿ ಹೊರಿಸಿಕೊಂಡು ಹೋದೆವು. ಅಲ್ಲಿ ಆಕೆಯು ಜಲಚಿಕಿತ್ಸೆಯಿಂದ ನಿಧಾನವಾಗಿ ಗುಣಹೊಂದಿದಳು.

ನಾನು ಫೀನಿಕ್ಸನ್ನು ತಲಪಿದ ಎರಡುಮೂರು ದಿವಸಗಳಲ್ಲಿ ಸ್ವಾಮಿಗಳೊಬ್ಬರು ನಮ್ಮ ಮನೆಗೆ ಬಂದರು. ನಾವು ಮನೋದಾರ್ಢ್ಯದಿಂದ ವೈದ್ಯರ ಸಲಹೆಯನ್ನು ತ್ಯಜಿಸಿದ ವಿಚಾರವನ್ನು ಕೇಳಿ ನಮ್ಮ ಮೇಲೆ ಕರುಣೆಗೊಂಡು ನಮಗೆ ತಿಳಿಯಹೇಳಲೋಸುಗ ಅವರು ಬಂದಿದ್ದರು. ನನಗೆ ನೆನಪಿರುವವಮಟ್ಟಿಗೆ ನನ್ನ ಎರಡನೆಯ ಮತ್ತು ಮೂರನೆಯ ಮಕ್ಕಳಾದ ಮಣಿಲಾಲನೂ ರಾಮದಾಸನೂ ಸ್ವಾಮಿಗಳು ಬಂದಾಗ ಅಲ್ಲಿದ್ದರು. ಅವರು ಮನುಸ್ಮೃತಿಯ ಶ್ಲೋಕಗಳನ್ನು ಉದಹರಿಸುತ್ತಾ ಮಾಂಸಾಹಾರವು ಧರ್ಮಕ್ಕೆ ವಿರುದ್ಧವಲ್ಲವೆಂದು ವಾದಿಸಿದರು. ಅವರು ನನ್ನ ಹೆಂಡತಿಯ ಇದಿರಿಗೆ ಈ ಚರ್ಚೆಯನ್ನು ನಡೆಸುತ್ತಿದ್ದುದು ನನಗೆ ಸರಿಬೀಳಲಿಲ್ಲ. ಆದರೆ ಮರ್ಯಾದೆಯ ಸಲುವಾಗಿ ನಾನು ಅವರನ್ನು ಅಡ್ಡಿಮಾಡಲಿಲ್ಲ. ನನಗೆ ಮನುಸ್ಮೃತಿಯ ಆ ಶ್ಲೋಕಗಳು ತಿಳಿದಿದ್ದುವು. ನನ್ನ ಮನವರಿಕೆಗೆ ಆ ಶ್ಲೋಕಗಳು ಆವಶ್ಯಕವಾಗಿರಲಿಲ್ಲ. ಆ ಶ್ಲೋಕಗಳು ಪ್ರಕ್ಷಿಪ್ತಗಳೆಂದು ಹೇಳುವ ಪಂಗಡವುಂಟೆಂದು ನನಗೆ ಗೊತ್ತಿದ್ದಿತು. ಒಂದುವೇಳೆ ಅವು ಮೂಲಗ್ರಂಥದಲ್ಲಿಯೇ ಇದ್ದ

ರೂ ಶಾಕಾಹಾರದ ವಿಚಾರವಾಗಿ ನನ್ನ ಮತವು ಶಾಸ್ತ್ರಗಳ ಆಧಾರದ ಮೇಲಲ್ಲದೆ ಸ್ವತಂತ್ರವಾಗಿ ಹುಟ್ಟಿದ್ದಿತು. ಕಸ್ತೂರಿಬಾಯಿಯ ನಂಬಿಕೆಯನ್ನಂತು ಆಲ್ಲಾಡಿಸುವಹಾಗೇ ಇರಲಿಲ್ಲ. ಶಾಸ್ತ್ರ ಪ್ರಮಾಣವೇನೂ ಆಕೆಗೆ ತಿಳಿದಿರಲಿಲ್ಲ. ಆದರೆ ತಲೆತಲಾಂತರದಿಂದ ಬಂದ ತಮ್ಮ ಪೂರ್ವಿಕರ ಧರ್ಮಾಚರಣೆಯೇ ಆಕೆಗೆ ಸಾಕಾಗಿದ್ದಿತು. ಮಕ್ಕಳಂತೂ ತಮ್ಮ ತಂದೆಯ ಮತವನ್ನೇ ಹಿಂಬಾಲಿಸಿದ್ದರಾದುದರಿಂದ ಅವರು ಸ್ವಾಮಿಗಳ ಚರ್ಚೆಗೆ ಬೆಲೆಯೇನೂ ಕೊಡುತ್ತಿರಲಿಲ್ಲ. ಕಸ್ತೂರಿಬಾಯಿಯು ಹೀಗೆ ಹೇಳಿ ಸಂವಾದವನ್ನು ಕೊನೆಗಾಣಿಸಿದಳು :—

" ಸ್ವಾಮಿಜೀ, ನೀವು ಏನೇ ಹೆಳಿ, ನನಗೆ 'ಬೀಫ್ ಟೀ' ಯನ್ನು ಕುಡಿದು ಗುಣಹೊಂದುವದು ಇಷ್ಟವಿಲ್ಲ. ದಯೆಯಿಟ್ಟು ಇನ್ನು ನನ್ನ ತಲೆಯನ್ನು ಚಿಟ್ಟುಹಿಡಿಸಬೇಡಿರಿ. ನಿಮಗೆ ಇಷ್ಟ ತೋರಿದರೆ ಈ ವಿಷಯವಾಗಿ ನಮ್ಮ ಯಜಮಾನರೊಂದಿಗೂ ಮಕ್ಕಳೊಂದಿಗೂ ಚರ್ಚಿಸಬಹುದು. ನನ್ನ ಮನಸ್ಸಂತೂ ಗಟ್ಟಿಯಾಗಿದೆ. "

## ೨೯

# ಮನೆಯಲ್ಲಿ ಸತ್ಯಾಗ್ರಹ

ನನಗೆ ಮೊಟ್ಟಮೊದಲು ಕಾರಾಗೃಹವಾಸದ ಅನುಭವವಾದುದು ೧೯೦೮ರಲ್ಲಿ. ಕೈದಿಗಳು ಅನುಸರಿಸಬೇಕಾದ ಕಟ್ಟುಗಳಲ್ಲಿ ಕೆಲವು ಬ್ರಹ್ಮಚಾರಿಯೂ ಸಂಯಮಿಯೂ ತಾನಾಗಿಯೇ ಆಚರಿಸಬೇಕಾದಂತಹವೆಂದು ಆಗ ನನಗೆ ಗೊತ್ತಾಯಿತು. ಉದಾಹರಣೆಗಾಗಿ ಸೂರ್ಯಾಸ್ತಮಯಕ್ಕೆ ಮುಂಚೆಯೇ ದಿನವೂ ಕಡೆಯ ಊಟವನ್ನು ಮುಗಿಸಿಬಿಡಬೇಕೆಂಬುದು ಇಂತಹದೊಂದು ಕಟ್ಟಾಗಿದ್ದಿತು. ಭಾರತೀಯ ಕೈದಿಗಳಿಗಾಗಲಿ ಆಫ್ರಿಕದ (ನೀಗ್ರೋ) ಕೈದಿಗಳಿಗಾಗಲಿ ಕಾಫಿಚಹಾಗಳನ್ನು ಕೊಡುತ್ತಿರಲಿಲ್ಲ. ಬೇಯಿಸಿದ ಆಹಾರಕ್ಕೆ ತಮಗೆ ಬೇಕಾದರೆ ಉಪ್ಪನ್ನು ಸೇರಿಸಿಕೊಳ್ಳಬಹುದಾಗಿದ್ದಿತು. ಆದರೆ ಕೇವಲ ಬಾಯಿರುಚಿಗಾಗಿ ಅವರಿಗೆ ಏನನ್ನೂ ಕೊಡುತ್ತಿರಲಿಲ್ಲ. ನಮಗೆ ಮಸಾಲೆ ಪುಡಿಯನ್ನು ಕೊಡಬೇಕೆಂದೂ ಬೇಯಿಸುವಾಗ ಉಪ್ಪು ಹಾಕುವದಕ್ಕೆ ಬಿಡಬೇಕೆಂದೂ ಬಂದೀಖಾನೆಯ ವೈದ್ಯಾಧಿಕಾರಿಗಳನ್ನು ನಾನು ಕೇಳಿದೆನು. ಅದಕ್ಕೆ ಅವರು " ಜಿಹ್ವಾಚಾಪಲ್ಯವನ್ನು ತೃಪ್ತಿಗೊಳಿಸುವದಕ್ಕಲ್ಲ ನೀವಿಲ್ಲಿರುವದು. ಆರೋಗ್ಯದೃಷ್ಟಿಯಿಂದ ಮಸಾಲೆಪುಡಿಯು ಆವಶ್ಯಕವೇ ಅಲ್ಲ; ಉಪ್ಪನ್ನು ಬೇಯಿಸುವಾಗ ಹಾಕಿದರೂ ಒಂದೇ, ಆಮೇಲೆ ಸೇರಿಸಿದರೂ ಒಂದೇ. " ಎಂದು ಹೇಳಿದರು.

ಕಡೆಗೇನೋ ಈ ಕಟ್ಟುಗಳನ್ನು ಮಾರ್ಪಡಿಸಿದರು. ಅದಕ್ಕೂ ಬಹಳ ಕಷ್ಟಪಡಬೇಕಾಯಿತು. ಆದರೆ ಇವೆರಡೂ ಸಂಯಮ ಸಾಧನೆಗೆ ಒಳ್ಳೆಯ ನಿಯಮಗಳಾಗಿದ್ದುವು. ಹೊರಗಿನಿಂದ ಹೊರಿಸಿದ ಕಟ್ಟುಗಳು ಸಫಲವಾಗುವದು ಅಪೂರ್ವ. ಆದರೆ ಅವನ್ನು ಅಂತಃಪ್ರೇರಣೆಯಿಂದ ಅನುಸರಿಸಿದರೆ ಅವುಗಳಿಂದ ಧಾರಾಳವಾಗಿ ಸತ್ಪರಿಣಾಮವುಂಟಾಗುತ್ತದೆ. ಆದುದರಿಂದ ನನಗೆ

ಕಾರಾಗಾರದಿಂದ ಬಿಡುಗಡೆಯಾದೊಡನೆಯೇ ನಾನು ಇವೆರಡು ನಿಯಮಗಳನ್ನೂ ನಡೆಸತೊಡಗಿದೆನು. ಚಹಾ ಕುಡಿಯುವದನ್ನು ಆದಷ್ಟುಮಟ್ಟಿಗೆ ನಿಲ್ಲಿಸಿಬಿಟ್ಟೆನು. ಮತ್ತು ಕಡೆಯ ಊಟವನ್ನು ಹೊತ್ತು ಮುಳುಗುವದಕ್ಕೆ ಮುಂಚೆಯೇ ಮುಗಿಸಿಬಿಡುತ್ತಿದ್ದೆನು. ಇವೆರಡಕ್ಕೂ ಈಗ ಪ್ರಯತ್ನವೇ ಅವಶ್ಯಕವಿಲ್ಲ.

ಒಂದು ಸಂದರ್ಭವೊದಗಿ ನಾನು ಉಪ್ಪನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕಾಯಿತು. ನಾನು ಇದನ್ನು ತಪ್ಪದೆ ಹತ್ತುವರ್ಷ ನಡೆಸಿದೆನು. ಮನುಷ್ಯನಿಗೆ ಉಪ್ಪು ಅವಶ್ಯಕವಾದ ಆಹಾರಪದಾರ್ಥವಲ್ಲವೆಂದೂ ಮತ್ತೆ ನೋಡಿದರೆ ಉಪ್ಪಿಲ್ಲದ ಆಹಾರವೇ ದೇಹಾರೋಗ್ಯಕ್ಕೆ ಇನ್ನೂ ಒಳ್ಳೆಯದೆಂದೂ ನಾನು ಶಾಕಾಹಾರವನ್ನು ಕುರಿತ ಕೆಲವು ಪುಸ್ತಕಗಳಲ್ಲಿ ಓದಿದೆನು. ಇದರಿಂದ ನಾನು ಬ್ರಹ್ಮಚಾರಿಗೆ ನಿರ್ಲವಣಾಹಾರವು ಲಾಭದಾಯಕವೆಂದು ತರ್ಕಿಸಿದೆನು. ನಿರ್ಬಲರು ಬೇಳೆ ಮುಂತಾದವನ್ನು ತ್ಯಜಿಸಬೇಕೆಂದು ನಾನು ಓದಿಯೂ ಇದ್ದೆನು, ಅನುಭವದಿಂದಲೂ ತಿಳಿದಿದ್ದೆನು. ನನಗೆ ಅವುಗಳಲ್ಲಿ ಬಹು ಇಷ್ಟವಿದ್ದಿತು. ಹೀಗಿರುವಲ್ಲಿ ಶಸ್ತ್ರೋಪಚಾರವಾದಮೇಲೆ ಕೆಲವು ದಿನ ಕಸ್ತೂರಿಬಾಯಿಗೆ ರಕ್ತಸ್ರಾವವು ನಿಂತಿದ್ದಿತಾದರೂ ಅದು ಪುನಃ ಆಕೆಯನ್ನು ಬಾಧಿಸತೊಡಗಿ ಮೊಂಡ ವ್ಯಾಧಿಯಾಗಿ ನಿಂತಂತೆ ತೋರಿತು. ಬರಿಯ ಜಲಚಿಕಿತ್ಸೆಯಿಂದಲೇ ಪ್ರಯೋಜನವಾಗಲಿಲ್ಲ. ಕಸ್ತೂರಿಬಾಯಿಗೆ ನನ್ನ ಚಿಕಿತ್ಸೆಗಳಲ್ಲಿ ಅಷ್ಟೇನೂ ನಂಬಿಕೆಯಿರಲಿಲ್ಲ. ಆದರೆ ಆಕೆಯು ಅವಕ್ಕೆ ಅಡ್ಡಿಬರಲಿಲ್ಲ. ಹೊರಗಿನ ನೆರವನ್ನಂತು ಆಕೆಯು ಬಯುಸಲೇ ಇಲ್ಲ. ಆದುದರಿಂದ ಚಿಕಿತ್ಸೆಗಳೆಲ್ಲಾ ಅಪ್ರಯೋಜಕವಾಗಿ ಕಂಡುಬಂದಮೇಲೆ ನಾನು ಉಪ್ಪನ್ನೂ ಬೇಳೆಗಳನ್ನೂ ಬಿಟ್ಟುಬಿಡಬೇಕೆಂದು ಆಕೆಯನ್ನು ಬೇಡಿಕೊಂಡೆನು. ಇದಕ್ಕೆ ಬೆಂಬಲಕೊಡುವ ಆಧಾರಗಳನ್ನು ನಿರೂಪಿಸಿ ಆಕೆಗೆ ಎಷ್ಟು ತಿಳಿಯಹೇಳಿದರೂ ಆಕೆಯು ಇದಕ್ಕೆ ಒಪ್ಪಲೊಲ್ಲಳು. ಕಟ್ಟಕಡೆಗೆ ಆಕೆಯು "ನಿಮಗೆ ಯಾರಾದರೂ ಇವುಗಳನ್ನು ಬಿಟ್ಟುಬಿಡಿರೆಂದು ಹೇಳಿದರೆ ನೀವು ಕೂಡ ಬಿಡಲಾರಿರಿ."

ಎಂದು ನನ್ನನ್ನೇ ಪಂಥಕ್ಕೆ ಎಳೆದಳು. ನನಗೆ ಇದರಿಂದ ದುಃಖ ವುಂಟಾಯಿತು ಮತ್ತು ಅಷ್ಟೇ ಸಂತೋಷವೂ ಉಂಟಾಯಿತು. ಸಂತೋಷವೇಕೆಂದರೆ ಆಕೆಯ ಮೇಲೆ ಪ್ರೇಮವನ್ನು ಮಳೆಗರೆ ಯಲು ನನಗೆ ಅವಕಾಶ ದೊರಕಿತೆಂದು.

"ನೀನು ತಿಳಿದುಕೊಂಡಿರುವದು ತಪ್ಪು. ನಾನು ನರಳುತ್ತಿ ದ್ದು ವೈದ್ಯರು ಇವನ್ನಾಗಲಿ ಮತ್ತಾವ ಪದಾರ್ಥವನ್ನಾಗಲಿ ಬಿಡ ಬೇಕೆಂದು ಹೇಳಿದ್ದರೆ ನಾನು ಎರಡು ಸಲ ಯೋಚಿಸದೆ ಅದಕ್ಕೆ ಒಪ್ಪಿಬಿಡುತ್ತಿದ್ದೆನು. ಅಷ್ಟೇಕೆ, ಈಗ ಯಾವ ವೈದ್ಯರ ಸಲ ಹೆಯೂ ಇಲ್ಲದೆ ನಾನು ಇಂದಿನಿಂದ ಒಂದು ವರ್ಷದ ವರೆಗೆ ಉಪ್ಪನ್ನೂ ಬೇಳೆಗಳನ್ನೂ ಬಿಟ್ಟುಬಿಡುತ್ತೇನೆ. ನೀನು ಬಿಡುವದು ಬಿಡದಿರುವದು ಬೇರೆ ಮಾತು." ಎಂದು ಹೇಳಿದೆನು.

ಆಕೆಗೆ ಸಿಡಿಲು ಬಡಿದಂತಾಯಿತು. ಬಹು ವ್ಯಾಕುಲದಿಂದ ಆಕೆಯು "ನಿಮ್ಮ ದಮ್ಮಯ್ಯ, ಕ್ಷಮಿಸಿ. ನಿಮ್ಮ ಸ್ವಭಾವ ವನ್ನು ಅರಿತೂ ಅರಿತೂ ನಾನು ನಿಮ್ಮನ್ನು ರೇಗಿಸಬಾರದಾಗಿದ್ದಿತು. ನಾನು ಈ ಪದಾರ್ಥಗಳನ್ನು ಬಿಟ್ಟುಬಿಡುವೆನೆಂದು ಆಣೆಯಿಡು ತ್ತೇನೆ. ಆದರೆ ದೇವರಾಣೆ, ನಿಮ್ಮ ವಚವನವನ್ನು ಹಿಂದಕ್ಕೆ ತೆಗೆದುಕೊಳ್ಳಿ. ಇದು ನನಗೆ ಕ್ರೂರಶಿಕ್ಷೆ." ಎಂದು ಅಂಗಲಾಚಿ ದಳು.

"ನೀನು ಈ ಪದಾರ್ಥಗಳನ್ನು ತ್ಯಜಿಸಿದರೆ ಬಹಳ ಒಳ್ಳೆ ಯದೇ ಆಯಿತು. ಅವಿಲ್ಲದಿದ್ದುವದರಿಂದ ನಿನಗೆ ಲಾಭವಾಗುವದ ರಲ್ಲಿ ನನಗೆ ಸಂದೇಹವಿಲ್ಲ. ನಾನಂತೂ ಮನಃಪೂರ್ವಕವಾಗಿ ಕೊಟ್ಟ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಲಾರೆನು. ಮತ್ತು ಅದರಿಂದ ನನಗೆ ಒಳಿತಾಗುವದು ಖಂಡಿತ. ಏಕೆಂದರೆ, ಎಲ್ಲಾ ಸಂಯಮವೂ, ಅದಕ್ಕೆ ಕಾರಣವು ಏನೇ ಆಗಿರಲಿ, ಮನುಷ್ಯನಿಗೆ ಶ್ರೇಯಸ್ಕರವಾದುದು. ಆದುದರಿಂದ ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು. ನನಗೆ ಇದು ಒರೆಗಲ್ಲಾಗಿಯೂ ನಿನ್ನ

ಮನೋನಿಶ್ಚಯವನ್ನು ನಡೆಸಲು ನಿನಗೆ ಬೆಂಬಲವಾಗಿಯೂ ಇರುತ್ತದೆ.'' ಎಂದು ನಾನು ಹೇಳಿದೆನು.

ಇದಾದ ಮೇಲೆ ಆಕೆಯು ಮಾತನ್ನು ನಿಲ್ಲಿಸಿಬಿಟ್ಟಳು. ''ನೀವು ಬಹು ಹಟಮಾರಿಗಳು, ಯಾರ ಮಾತನ್ನೂ ಕೇಳುವದಿಲ್ಲ.'' ಎಂದು ಹೇಳಿ ತನ್ನ ಹೃದಯದ ಬೆಂಕಿಯನ್ನು ಕಣ್ಣೀರಿನಲ್ಲಿ ಆರಿಸಿದಳು.

ಈ ಘಟನೆಯು ಸತ್ಯಾಗ್ರಹದ ದೃಷ್ಟಾಂತವೆಂದೂ ನನ್ನ ಜೀವನದ ಅತ್ಯಂತ ಸವಿ ನೆನಹುಗಳಲ್ಲಿ ಒಂದೆಂದೂ ನನ್ನ ಎಣಿಕೆ.

ಇದಾದನಂತರ ಕಸ್ತೂರಿಬಾಯಿಗೆ ತ್ವರೆಯಿಂದ ಗುಣವಾಗುತ್ತ ಬಂದಿತು. ಹೀಗಾದುದು ಉಪ್ಪುಬೇಳೆಗಳಿಲ್ಲದ ಆಹಾರದಿಂದಲೋ ಅಥವಾ ಅದರಿಂದ ಉಂಟಾದ ಇತರ ಪರಿಣಾಮದಿಂದಲೋ ಜೀವನದ ಇತರ ನಿಯಮಗಳನ್ನು ಆಕೆಯು ಪಾಲಿಸುವದರಲ್ಲಿ ನಾನು ಬಹು ಎಚ್ಚರಿಕೆಯಿಂದಿದ್ದುದರಿಂದಲೋ ಅಥವಾ ಮೇಲೆ ಹೇಳಿದ ಘಟನೆಯಿಂದುಂಟಾದ ಮಾನಸಿಕ ಉಲ್ಲಾಸದಿಂದಲೋ ಮತ್ತು ಒಂದು ವೇಳೆ ಇದು ನಿಜವಾದರೆ ಎಷ್ಟರ ಮಟ್ಟಿಗೆ ಅದರಿಂದ ಉಂಟಾಯಿತೋ ನಾನು ಹೇಳಲಾರೆನು. ಅದೇನೇ ಆಗಲಿ ಆಕೆಯು ಶೀಘ್ರವಾಗಿ ಗುಣ ಹೊಂದಿದಳು; ರಕ್ತಸ್ರಾವವು ಸಂಪೂರ್ಣವಾಗಿ ನಿಂತಿತು. ನನ್ನ ಕುಂಟುವೈದ್ಯದ ಪ್ರಸಿದ್ಧಿಯು ಸ್ವಲ್ಪ ಹೆಚ್ಚಿತು.

ನನಗಾದರೋ ಈ ತ್ಯಾಗಗಳಿಂದ ಒಳಿತೇ ಉಂಟಾಯಿತು. ಬಿಟ್ಟುಬಿಟ್ಟ ಪದಾರ್ಥಗಳ ಮೇಲೆ ನನಗೆ ಬಯಕೆಯೇ ಉಂಟಾಗಲಿಲ್ಲ. ವರ್ಷವೂ ವೇಗದಿಂದ ಕಳೆದು ಹೋಯಿತು. ನನ್ನ ಇಂದ್ರಿಯಗಳು ಎಂದಿಗಿಂತ ಹೆಚ್ಚಾದ ಶಾಂತತೆಯುಳ್ಳವಾದುವು. ಈ ಪ್ರಯೋಗದಿಂದ ನನಗೆ ಆತ್ಮಸಂಯಮದ ಕಡೆ ಮನಸ್ಸು ಇನ್ನೂ ತೀವ್ರವಾಗಿ ಓಡಲಾರಂಭಿಸಿತು. ಭರತಖಂಡಕ್ಕೆ ಹಿಂದಿರುಗಿದ ಮೇಲೆ ಅನೇಕ ದಿನದ ವರೆಗೂ ನಾನು ಈ ಪದಾರ್ಥಗಳ

ತ್ಯಾಗವನ್ನು ನಡೆಸಿದೆನು. ನಾನು ಲಂಡನ್ನಿನಲ್ಲಿರುವಾಗ ೧೯೧೪ರಲ್ಲಿ ಒಂದೇ ಒಂದು ಬಾರಿ ಇವೆರಡು ಪದಾರ್ಥಗಳನ್ನೂ ತೆಗೆದುಕೊಂಡೆನು. ಈ ಸಂದರ್ಭದ ವಿಚಾರವಾಗಿಯೂ ಈ ಪದಾರ್ಥಗಳನ್ನು ನಾನು ಪುನಃ ತೆಗೆದುಕೊಳ್ಳಲು ಹೇಗೆ ಆರಂಭಿಸಿದೆನೆಂಬುದನ್ನೂ ಮುಂದಿನ ಒಂದು ಅಧ್ಯಾಯದಲ್ಲಿ ತಿಳಿಸುತ್ತೇನೆ.

ಉಪ್ಪುಬೇಳೆಗಳಿಲ್ಲದ ಆಹಾರದ ಪ್ರಯೋಗವನ್ನು ನಾನು ನನ್ನ ಸಹಯೋಗಿಗಳಲ್ಲಿ ಅನೇಕರ ಮೇಲೆ ದಕ್ಷಿಣ ಆಫ್ರಿಕದಲ್ಲಿ ನಡೆಸಿದ್ದೇನೆ. ಇವುಗಳ ಪರಿಣಾಮವು ಕೂಡ ಒಳ್ಳೆಯದಾಗಿಯೇ ಇದ್ದಿತು. ವೈದ್ಯಶಾಸ್ತ್ರದ ದೃಷ್ಟಿಯಿಂದ ಉಪ್ಪುಬೇಳೆಗಳಿಲ್ಲದ ಆಹಾರದ ಗುಣಾವಗುಣಗಳ ವಿಚಾರವಾಗಿ ಮತಭೇದವಿರಬಹುದು. ಆದರೆ ನೈತಿಕ ದೃಷ್ಟಿಯಿಂದ ನೋಡಿದರೆ ಎಲ್ಲಾ ವಿಧವಾದ ಸಂಯಮವೂ ಆತ್ಮಕ್ಕೆ ಒಳ್ಳೆಯದೆಂಬುದರಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ. ಭೋಗಿಯ ಆಹಾರವೂ ಸಂಯಮಿಯ ಆಹಾರವೂ ಅವರ ಜೀವನದ ಪಥಗಳು ಭಿನ್ನವಾಗಿರುವಂತೆ ಭಿನ್ನವಾಗಿಯೇ ಇರಬೇಕು. ಬ್ರಹ್ಮಚರ್ಯವ್ರತಪಾಲನಾಕಾಂಕ್ಷಿಗಳು ವಿಲಾಸಿಯ ಜೀವನಕ್ಕೆ ತಕ್ಕ ಮಾರ್ಗವನ್ನನುಸರಿಸಿ ತಮ್ಮ ಗುರಿಗೆ ತಾವೇ ಅಡ್ಡಬರುತ್ತಾರೆ.



೩೦

# ಸಂಯಮದ ದಾರಿಯಲ್ಲಿ.

ನನ್ನ ಆಹಾರದಲ್ಲಿ ಕೆಲವು ತಿದ್ದುಪಾಟುಗಳಾಗಲು ಕಸ್ತೂರಿ ಬಾಯಿಯ ಕಾಹಿಲೆಯು ಹೇಗೆ ಕಾರಣವಾಯಿತೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದ್ದೇನೆ. ಆಮೇಲೆ ಬ್ರಹ್ಮಚರ್ಯ ಸಾಧನೆಗಾಗಿ ಇನ್ನೂ ಕೆಲವು ಸುಧಾರಣೆಗಳನ್ನು ನಡೆಸಿದೆನು.

ಇವುಗಳಲ್ಲಿ ಮೊದಲನೆಯದು ಹಾಲಿನ ತ್ಯಾಗ. ಹಾಲು ಇಂದ್ರಿಯವಿಕಾರಕ್ಕೆ ಸಹಾಯ ಮಾಡುವುದೆಂಬುದನ್ನು ನಾನು ಮೊಟ್ಟಮೊದಲು ತಿಳಿದುಕೊಂಡುದು ರಾಯಚಂದಭಾಯಿಯಿಂದ. ಶಾಕಾಹಾರವನ್ನು ಕುರಿತ ಪುಸ್ತಕಗಳು ಈ ಅಭಿಪ್ರಾಯವನ್ನು ದೃಢ ಪಡಿಸಿದುವು. ಆದರೆ ನಾನು ಬ್ರಹ್ಮಚರ್ಯವ್ರತವನ್ನು ಸ್ವೀಕರಿಸುವವರೆಗೂ ಹಾಲನ್ನು ಬಿಟ್ಟುಬಿಡಲು ಸಂಕಲ್ಪಿಸಲಾಗಲಿಲ್ಲ. ಶರೀರನಿರ್ವಾಹಕ್ಕೆ ಹಾಲಿನ ಅಗತ್ಯವಿಲ್ಲವೆಂದು ನಾನು ಬಹುಕಾಲ ಮನಗಂಡಿದ್ದೆನು. ಆದರೆ ಅದನ್ನು ಬಿಡುವದು ಸುಲಭವಾಗಿರಲಿಲ್ಲ. ಇಂದ್ರಿಯನಿಗ್ರಹದ ಸಲುವಾಗಿ ಹಾಲಿನ ತ್ಯಾಗದ ಆವಶ್ಯಕತೆಯು ನನಗೆ ಬಲವತ್ತರವಾಗಿ ತೋರುತ್ತಾಬಂದಾಗ ನನ್ನ ಕೈಗೆ ಆಕಳು ಮತ್ತು ಎಮ್ಮೆಗಳಿಗೆ ಅವುಗಳ ಮಾಲಿಕರು ಮಾಡುವ ಚಿತ್ರಹಿಂಸೆಗಳನ್ನು ವರ್ಣಿಸುವ ಪಹಿಗಳು ಮುಟ್ಟಿದುವು. ಇದರಿಂದ ನನ್ನ ಮನಸ್ಸಿನ ಮೇಲೆ ಮಹತ್ವದ ಪರಿಣಾಮವುಂಟಾಯಿತು. ಈ ವಿಷಯವಾಗಿ ನಾನು ಕಾಲನ್‌ಬಾಕರೊಡನೆ ಚರ್ಚಿಸಿದೆನು.

ನಾನು ಮಿ. ಕಾಲನ್‌ಬಾಕರ ಪರಿಚಯವನ್ನು 'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ'ದಲ್ಲಿ ಪಾಠಕರಿಗೆ ಮಾಡಿಕೊಟ್ಟಿದ್ದೇನೆ. ಮತ್ತು ಹಿಂದಿನ ಪ್ರಕರಣವೊಂದರಲ್ಲಿ ಅವರ ವಿಚಾರವು ಬಂದಿದೆ. ಆದರೂ ಅವರ ವಿಷಯವಾಗಿ ಇನ್ನೆರಡು ಮಾತುಗಳನ್ನು

ಹೇಳುವದು ಆವಶ್ಯಕವೆಂದು ನನಗೆ ತೋರುತ್ತದೆ. ನನಗೂ ಅವರಗೂ ಕೇವಲ ಆಕಸ್ಮಿಕವಾಗಿ ಪರಿಚಯವುಂಟಾಯಿತು. ಅವರು ಮಿ. ಖಾನರ ಗೆಳೆಯರಾಗಿದ್ದರು. ಖಾನರು ಇವರಲ್ಲಿ ಅಂತರ್ಗತವಾದ ವೈರಾಗ್ಯವೃತ್ತಿಯನ್ನು ಕಂಡುದರಿಂದ ಅವರ ಪರಿಚಯವನ್ನು ನನಗೆ ಮಾಡಿಕೊಟ್ಟರು. ಅವರ ಪರಿಚಯವಾದಾಗ ನನಗೆ ಅವರ ಭೋಗಾಸಕ್ತಿಯನ್ನೂ ದುಂದುಗಾರಿಕೆಯನ್ನೂ ನೋಡಿ ಆಶ್ಚರ್ಯವಾಯಿತು. ಆದರೆ ನಮಗೆ ಮೊದಲನೆಯ ಸಲ ಬೆಟ್ಟಿಯಾದಾಗಲೇ ಅವರು ನನಗೆ ಧರ್ಮವಿಷಯಕವಾದ ಸೂಕ್ಷ್ಮಪ್ರಶ್ನೆಗಳನ್ನು ಹಾಕಿದರು. ಮಾತನಾಡುತ್ತಾ ಭಗವಾನ್ ಬುದ್ಧನ ತ್ಯಾಗದ ವಿಷಯವು ಕೂಡ ಬಂದಿತು. ನಮ್ಮ ಪರಿಚಯವು ಶೀಘ್ರದಲ್ಲಿಯೇ ಅತಿ ಗಾಢವಾದ ಮೈತ್ರಿಯಾಗಿ ಬೆಳೆಯಿತು. ಇದು ಎಷ್ಟರಮಟ್ಟಿಗೆ ವೃದ್ಧಿಯಾಯಿತೆಂದರೆ ನಮ್ಮಿಬ್ಬರ ಮನೋವಿಚಾರಗಳೂ ಒಂದೇ ರೀತಿಯವಾಗಿದ್ದುವಲ್ಲದೆ ನನ್ನ ಜೀವನದಲ್ಲಿ ನಾನು ನಡೆಸುತ್ತಿದ್ದ ತಿದ್ದುಪಾಟುಗಳನ್ನು ಅವರು ತಮ್ಮ ಜೀವನದಲ್ಲಿಯೂ ನಡೆಸಬೇಕೆಂದು ಅವರಲ್ಲಿ ನಂಬಿಕೆ ಹುಟ್ಟಿತು. ಮೊಟ್ಟಮೊದಲು ನಾನು ಅವರನ್ನು ನೋಡಿದಾಗ ಅವರು ಒಬ್ಬೊಂಟಿಗರಾಗಿದ್ದು ಮನೆಯ ಬಾಡಿಗೆಯಲ್ಲದೆ ತಮ್ಮೊಬ್ಬರ ಮೇಲೆಯೇ ತಿಂಗಳಿಗೆ ೧,೨೦೦ ರೂಪಾಯಿ ಖರ್ಚುಮಾಡುತ್ತಿದ್ದರು. ಈಗಲೋ ಅವರ ಜೀವನವು ಎಷ್ಟು ಸರಳವಾಯಿತೆಂದರೆ ತಿಂಗಳ ವೆಚ್ಚವು ೧೨೦ ರೂಪಾಯಿಗೆ ಇಳಿಯಿತು. ನನಗೆ ಬಂದೀಖಾನೆಯಿಂದ ಬಿಡುಗಡೆಯಾದಮೇಲೆ ನಾನು ನನ್ನ ಮನೆಯನ್ನು ಬಿಟ್ಟು ನಾವಿಬ್ಬರೂ ಜೊತೆಗೆ ವಾಸಮಾಡತೊಡಗಿದೆವು. ನಾವು ನಡೆಸುತ್ತಿದ್ದ ಜೀವನವು ಕಷ್ಟಜೀವನವೆಂದೇ ಹೇಳಬಹುದು.

ಈ ಸಮಯದಲ್ಲಿಯೇ ನಾನು ಹಾಲಿನ ವಿಚಾರವಾಗಿ ಚರ್ಚಿಸಿದುದು. ಮಿ. ಕಾಲ್‌ಬಾಕರು "ನಾವು ಹಗಲೆಲ್ಲಾ ಹಾಲಿನ ದುಷ್ಪರಿಣಾಮಗಳ ವಿಚಾರವಾಗಿ ಮಾತನಾಡುತ್ತೇವೆ. ನಾವು

ಅದನ್ನು ಬಿಟ್ಟುಬಿಡುವದಿಲ್ಲವೇಕೆ? ಅದು ಅಗತ್ಯವೆಂದೇನೂ ಹೇಳುವ ಹಾಗಿಲ್ಲ.'' ಎಂದರು. ಈ ಸೂಚನೆಯನ್ನು ಕೇಳಿ ನನಗೆ ಆಶ್ಚರ್ಯವೂ ಸಂತೋಷವೂ ಉಂಟಾಯಿತು. ನಾನು ಅದಕ್ಕೆ ಉತ್ಸಾಹದಿಂದ ಒಡಂಬಟ್ಟೆನು. ನಾವಿಬ್ಬರೂ ಅಲ್ಲಿಯೇ ಆಗಲೇ ಹಾಲನ್ನು ತ್ಯಜಿಸುವೆವೆಂದು ವ್ರತಹಿಡಿದೆವು. ಇದು ೧೯೧೨ರಲ್ಲಿ 'ಟಾಲ್‌ಸ್ಟಾಯ್ ಫಾರ್ಮ್'ನಲ್ಲಿ ನಡೆಯಿತು.

ಆದರೆ ಈ ತ್ಯಾಗವಷ್ಟೇ ನನ್ನ ಆತ್ಮವನ್ನು ತೃಪ್ತಿಪಡಿಸುವಂತಹುದಾಗಿರಲಿಲ್ಲ. ಇದಾದ ಸ್ವಲ್ಪ ದಿವಸದಲ್ಲಿ ನಾನು ಕೇವಲ ಹಣ್ಣನ್ನು ತಿನ್ನುವದರಿಂದಲೇ ಜೀವನವನ್ನು ನಡೆಸಬೇಕೆಂದೂ ಆ ಹಣ್ಣುಗಳು ಕೂಡ ಆದಷ್ಟುಮಟ್ಟಿಗೆ ಅತ್ಯಂತ ಅಗ್ಗವಾದವುಗಳಾಗಿರಬೇಕೆಂದೂ ನಿಶ್ಚಯಿಸಿದೆನು. ಕೇವಲ ಬಡಜನರ ಜೀವನವನ್ನು ನಡೆಸಬೇಕೆಂಬುದೇ ನಮ್ಮ ಮಹತ್ವಾಕಾಂಕ್ಷೆಯಾಗಿದ್ದಿತು.

ಈ ಹಣ್ಣಿನ ಆಹಾರವು ನಮಗೆ ಬಹು ಅನುಕೂಲವಾಗಿಯೂ ಕಂಡುಬಂದಿತು. ಬೇಯಿಸುವ ಕೆಲಸವು ತಪ್ಪಿದಂತೆಯೇ ಆಯಿತು. ಹಸಿ ನೆಲಗಡಲೆಕಾಯಿ, ಬಾಳೆಹಣ್ಣು, ಖರ್ಜೂರ, ನಿಂಬೆಹಣ್ಣು ಮತ್ತು 'ಆಲಿವ್' ಎಣ್ಣೆ ಇವೇ ಸಾಮಾನ್ಯವಾಗಿ ನಮ್ಮ ಆಹಾರ.

ಬ್ರಹ್ಮಚರ್ಯವ್ರತಪಾಲನಾಕಾಂಕ್ಷಿಗಳಿಗೆ ನಾನು ಇಲ್ಲಿ ಒಂದು ಎಚ್ಚರಿಕೆಯ ನುಡಿಯನ್ನು ಹೇಳಬೇಕು. ಆಹಾರಕ್ಕೂ ಬ್ರಹ್ಮಚರ್ಯಕ್ಕೂ ನಿಕಟಸಂಬಂಧವಿದೆಯೆಂದು ನಾನು ಹೇಳಿರುವೆನಾದರೂ ಮನಸ್ಸೇ ಮುಖ್ಯವಾದುದೆಂಬುದು ಖಂಡಿತ. ಇಚ್ಛಾಪೂರ್ವಕ ಮಲಿನವಾದ ಮನಸ್ಸನ್ನು ಉಪವಾಸದಿಂದ ಶುದ್ಧಪಡಿಸಲಾಗುವದಿಲ್ಲ. ಆಹಾರದ ತಿದ್ದುಪಾಟುಗಳಿಂದ ಈ ಸಂದರ್ಭದಲ್ಲಿ ಯಾವ ಪ್ರಯೋಜನವೂ ಉಂಟಾಗುವದಿಲ್ಲ. ಮನಸ್ಸಿನ ವಿಷಯಲಂಪಟತೆಯನ್ನು ನಿರ್ಮೂಲಮಾಡಲು ತೀಕ್ಷ್ಣವಾಗಿ ಆತ್ಮಪರಾಮರ್ಶೆ ಮಾಡಿಕೊಳ್ಳುವದು, ಈಶ್ವರನನ್ನು ಶರಣುಹೊಗುವದು, ಮತ್ತು ಕಡೆಗೆ ಈಶ್ವರನ ಕೃಪೆ, ಇವಲ್ಲದೆ ಬೇರೆ ಮಾರ್ಗವಿಲ್ಲ. ಆದರೆ

ಮನಸ್ಸಿಗೂ ದೇಹಕ್ಕೂ ಗಾಢಸಂಬಂಧವಿದೆ. ವಿಷಯಾಸಕ್ತಚಿತ್ತವು ಸದಾ ಸ್ವಾದಿಷ್ಟಪದಾರ್ಥಗಳಿಗೂ ಭೋಗಕ್ಕೂ ಹಾತೊರೆಯುತ್ತದೆ. ಹೀಗೆ ಎಳೆಯುತ್ತಿರುವ ಮನಸ್ಸನ್ನು ಸರಿತರುವದಕ್ಕೆ ಆಹಾರವಿಷಯಕವಾದ ನಿಯಮಗಳೂ ಉಪವಾಸವೂ ಆವಶ್ಯಕವೆಂದು ತೋರುತ್ತದೆ. ಭೋಗಾಸಕ್ತವಾದ ಮನಸ್ಸು ಇಂದ್ರಿಯಗಳನ್ನು ಅಂಕೆಯಲ್ಲಿಟ್ಟಿರುವದರ ಬದಲು ತಾನೇ ಅವುಗಳ ಊಳಿಗದ ಆಳಾಗುತ್ತದೆ. ಆದುದರಿಂದ ಶರೀರಕ್ಕೆ ಯಾವಾಗಲೂ ಶುಚಿಯಾದ ಮತ್ತು ವಿಕಾರಕ್ಕೆ ಅತ್ಯಂತ ಕಡಿಮೆಯಾಗಿ ಎಡೆಗೊಡುವ ಆಹಾರವೂ ಆಗಾಗ ಉಪವಾಸವೂ ಆವಶ್ಯಕ.

ಆದುದರಿಂದ ಆಹಾರನಿಯಮಗಳನ್ನೂ ಉಪವಾಸವನ್ನೂ ಕೀಳಾಗಿ ಎಣಿಸುವವರು ಕೂಡ ಕೇವಲ ಅವುಗಳನ್ನೇ ನಂಬಿರುವವರಷ್ಟೇ ದೊಡ್ಡ ತಪ್ಪುಮಾಡುತ್ತಾರೆ. ಸಂಯಮದ ಕಡೆ ಚಲಿಸುತ್ತಿರುವ ಮನವುಳ್ಳವರಿಗೆ ಆಹಾರನಿಯಮಗಳೂ ಉಪವಾಸವೂ ಬಹು ಸಹಾಯವಾದವುಗಳೆಂದು ನನ್ನ ಅನುಭವವು ಹೇಳುತ್ತದೆ. ವಾಸ್ತವಿಕವಾಗಿ ಅವುಗಳ ನೆರವಿಲ್ಲದೆ ಮನಸ್ಸಿನಿಂದ ವಿಷಯವಾಸನೆಯನ್ನು ಪೂರ್ತಿಯಾಗಿ ತೊಡೆದುಹಾಕಲಾಗುವದಿಲ್ಲ.



## ೩೧

# ಉಪವಾಸ

ನಾನು ಹಾಲನ್ನೂ ದ್ವಿದಳ ಧಾನ್ಯಗಳನ್ನೂ ಬಿಟ್ಟುಬಿಟ್ಟು ಕೇವಲ ಹಣ್ಣಿನ ಆಹಾರವನ್ನು ತೆಗೆದುಕೊಳ್ಳುವ ಪ್ರಯೋಗ ವನ್ನು ಮೊದಲುಮಾಡಿದ ಸಮಯದಲ್ಲಿಯೇ ಸಂಯಮಸಾಧನೆ ಗಾಗಿ ಉಪವಾಸವನ್ನೂ ಆರಂಭಿಸಿದೆನು. ಇದರಲ್ಲಿ ಮಿ. ಕಾಲ್ ಬಾಕರು ಜೊತೆಗೂಡಿದರು. ಆಗ ಉಪವಾಸಮಾಡಿ ನನಗೆ ಅಭ್ಯಾಸವಾಗಿದ್ದಿತು. ಆದರೆ ಆ ಉಪವಾಸಗಳನ್ನೆಲ್ಲಾ ಮಾಡಿ ದುದು ಕೇವಲ ಆರೋಗ್ಯದೃಷ್ಟಿಯಿಂದ. ಇಂದ್ರಿಯನಿಗ್ರಹಕ್ಕೆ ಉಪವಾಸವು ಆವಶ್ಯಕವೆಂಬುದನ್ನು ನಾನು ತಿಳಿದುಕೊಂಡುದು ಒಬ್ಬ ಮಿತ್ರರಿಂದ. ವೈಷ್ಣವ ಮನೆತನದಲ್ಲಿಯೂ ಎಲ್ಲಾ ವಿಧದ ಕಠಿನವ್ರತಗಳನ್ನು ನಡಿಸುತ್ತಿದ್ದ ತಾಯಿಯ ಹೊಟ್ಟೆ ಯುಲ್ಲಿಯೂ ಹುಟ್ಟಿದವನಾದುದರಿಂದ ನಾನು ಹಿಂದುಸ್ಥಾನದಲ್ಲಿ ದ್ದಾಗ ಏಕಾದಶಿ ಮುಂತಾದ ದಿನಗಳಲ್ಲಿ ಉಪವಾಸವ್ರತವನ್ನು ನಡೆಸಿದ್ದೆನು. ಆದರೆ ಹೀಗೆ ಮಾಡುವದರಲ್ಲಿ ನಮ್ಮ ತಾಯಿಯ ಮೇಲ್ಪಂಕ್ತಿಯನ್ನು ಅನುಸರಿಸಿ ನಮ್ಮ ತಂದೆತಾಯಿಗಳನ್ನು ಸಂತೋಷಪಡಿಸಲು ಯತ್ನಿಸಿದ್ದೆನೇ ಹೊರತು ಇನ್ನೇನೂ ಅಲ್ಲ. ಆಗ ನನಗೆ ಉಪವಾಸದ ಮಹಿಮೆಯು ತಿಳಿದಿರಲಿಲ್ಲ. ಅದರಲ್ಲಿ ನನಗೆ ನಂಬಿಕೆಯೂ ಇರಲಿಲ್ಲ. ಆದರೆ ನಾನು ಮೇಲೆ ತಿಳಿಸಿರುವ ಮಿತ್ರರು ಅದರಿಂದ ಲಾಭಹೊಂದುತ್ತಿದ್ದರೆಂದೂ ಬ್ರಹ್ಮಚರ್ಯ ವ್ರತವನ್ನು ಪಾಲಿಸುವದರಲ್ಲಿ ಇದು ಸಹಾಯವಾಗುವದೆಂಬ ಆಸೆ ಯಿಂದ ಇದನ್ನು ನಡೆಸುತ್ತಿದ್ದರೆಂದೂ ನಾನು ಕಂಡೊಡನೆಯೇ ಅವರ ದೃಷ್ಟಾಂತವನ್ನನುಸರಿಸಿ ಏಕಾದಶಿಯ ದಿನ ಉಪವಾಸ ಮಾಡತೊಡಗಿದೆನು. ಸಾಮಾನ್ಯವಾಗಿ ಹಿಂದುಗಳು ಉಪವಾಸದ ದಿನ ಹಣ್ಣನ್ನೂ ಹಾಲನ್ನೂ ತೆಗೆದುಕೊಳ್ಳುತ್ತಾರೆ. ಆದರೆ ನಾನು

ಈ ರೀತಿಯ ಉಪವಾಸವನ್ನು ಪ್ರತಿದಿನವೂ ಮಾಡುತ್ತಿದ್ದೆನು. ಆದುದರಿಂದ ನಾನು ಈಗ ನೀರನ್ನುಳಿದು ಇನ್ನೇನನ್ನೂ ತೆಗೆದು ಕೊಳ್ಳದೆ ಪೂರ್ಣೋಪವಾಸವನ್ನಾಚರಿಸತೊಡಗಿದೆನು.

ನಾನು ಈ ಪ್ರಯೋಗವನ್ನು ಆರಂಭಿಸಿದಾಗ ಶ್ರಾವಣ ಮಾಸವೂ ರಮಜಾನ್ ತಿಂಗಳೂ ಅಕಸ್ಮಾತ್ ಒಟ್ಟುಗೂಡಿದುವು. ಗಾಂಧೀ ಮನೆತನದವರು ವೈಷ್ಣವ ವ್ರತಗಳನ್ನಲ್ಲದೆ ಶೈವವ್ರತಗ ಳನ್ನೂ ಪಾಲಿಸುತ್ತಿದ್ದರು. ವಿಷ್ಣುದೇವಾಲಯಕ್ಕೆ ಹೋಗುತ್ತಿ ದ್ದಂತೆಯೇ ಶಿವಾಲಯಕ್ಕೂ ಹೋಗುತ್ತಿದ್ದರು. ನಮ್ಮ ಮನೆಯ ಮಂದಿ ಇಡೀ ಶ್ರಾವಣಮಾಸದಲ್ಲಿ ಪ್ರದೋಷ (ಸಂಜೆಯವರೆಗೂ ಉಪವಾಸ)ವನ್ನಾಚರಿಸುತ್ತಿದ್ದರು. ನಾನೂ ಹಾಗೆಯೇ ಮಾಡಲು ನಿರ್ಧರಿಸಿದೆನು.

ಈ ಮಹತ್ವದ ಪ್ರಯೋಗಗಳ ಆರಂಭವು 'ಟಾಲ್‌ಸ್ಟಾಯ್ ಫಾರ್ಮ್'ನಲ್ಲಿ ಆಯಿತು. ಮಿ. ಕಾಲನ್‌ಬಾಕರೂ ನಾನೂ ಹುಡು ಗರುಮಕ್ಕಳನ್ನೊಡಗೊಂಡಿದ್ದ ಕೆಲವು ಸತ್ಯಾಗ್ರಹೀ ಕುಟುಂ ಬಗಳೊಂದಿಗೆ ಅಲ್ಲಿ ವಾಸಿಸುತ್ತಿದ್ದೆವು. ಈ ಹುಡುಗರುಮಕ್ಕಳಿ ಗಾಗಿ ನಾವು ಶಾಲೆಯನ್ನಿಟ್ಟಿದ್ದೆವು. ಇವರಲ್ಲಿ ನಾಲ್ಕೈದುಜನ ಮುಸಲ್ಮಾನರಾಗಿದ್ದರು. ತಮ್ಮ ಧಾರ್ಮಿಕ ನಿಯಮಗಳನ್ನೆಲ್ಲಾ ಪಾಲಿಸುವದಕ್ಕೆ ನಾನು ಯಾವಾಗಲೂ ಅವರಿಗೆ ಉತ್ತೇಜನ ವನ್ನೂ ಸಹಾಯವನ್ನೂ ಕೊಡುತ್ತಿದ್ದೆನು. ಅವರು ಪ್ರತಿನಿ ತ್ಯವೂ 'ನಮಾಜ್' (ಪ್ರಾರ್ಥನೆ) ಮಾಡುವಂತೆ ನಾನು ಎಚ್ಚರಿ ಕೆಯಿಂದ ನೋಡಿಕೊಳ್ಳುತ್ತಿದ್ದೆನು. ಆಶ್ರಮದಲ್ಲಿ ಈಸಾಯೀ ಮತ್ತು ಪಾರಸೀ ಹುಡುಗರೂ ಇದ್ದರು. ತಮ್ಮ ತಮ್ಮ ಧರ್ಮಕ್ಕೆ ಅನುಸಾರವಾಗಿ ನಡೆದುಕೊಳ್ಳುವಂತೆ ಇವರಿಗೆ ಉತ್ತೇ ಜನ ಕೊಡುವದು ನನ್ನ ಕರ್ತವ್ಯವೆಂದೆಣಿಸೆದೆನು. ಆದುದರಿಂದ ಈ ತಿಂಗಳಲ್ಲಿ ಮುಸಲ್ಮಾನ ಹುಡುಗರು ರಮಜಾನ್ ಉಪವಾ ಸವನ್ನಾಚರಿಸುವಂತೆ ನಾನು ಅವರನ್ನು ಪ್ರೇರಿಸಿದೆನು. ನಾನಂತು

ಪ್ರದೋಷವನ್ನಾಚರಿಸಲು ನಿರ್ಧರಿಸಿದ್ದೆನು. ಈಗ ಹಿಂದೂ, ಪಾರಸೀ, ಈಸಾಯೀ ಹುಡುಗರಿಗೆ ಇದರಲ್ಲಿ ನನ್ನೊಡನೆ ಒಂದುಗೂಡಬೇಕೆಂದು ಹೇಳಿದೆನು. ಆತ್ಮನಿಗ್ರಹದ ಯಾವ ವಿಷಯದಲ್ಲಿಯಾದರೂ ಇತರರೊಡನೆ ಸೇರುವದು ಯಾವಾಗಲೂ ಒಳ್ಳೆಯದೆಂದು ಅವರಿಗೆ ವಿವರಿಸಿದೆನು. ಆಶ್ರಮದ ನಿವಾಸಿಗಳಲ್ಲಿ ಅನೇಕರು ನನ್ನ ಸೂಚನೆಯನ್ನು ಸಂತೋಷದಿಂದ ಅನುಮೋದಿಸಿದರು. ಹಿಂದೂ ಮತ್ತು ಪಾರಸೀ ಯುವಕರು ಮುಸಲ್ಮಾನ ಹುಡುಗರನ್ನು ಎಲ್ಲಾ ವಿಷಯಗಳಲ್ಲಿಯೂ ಅನುವರ್ತಿಸಲಿಲ್ಲ. ಅದು ಆವಶ್ಯಕವಾಗಿಯೂ ಇರಲಿಲ್ಲ. ಮುಸಲ್ಮಾನ ಹುಡುಗರು ತಮ್ಮ ಊಟಕ್ಕೆ ಸೂರ್ಯಾಸ್ತಮಯವಾಗುವವರೆಗೂ ಕಾಯಬೇಕಾಗಿದ್ದಿತು. ಇತರರು ಹೀಗೆ ಮಾಡುತ್ತಿರಲಿಲ್ಲ. ಇದರಿಂದ ಅವರು ಮುಸಲ್ಮಾನ ಮಿತ್ರರಿಗಾಗಿ ರುಚಿಕರ ಪದಾರ್ಥಗಳನ್ನು ಸಿದ್ಧಪಡಿಸಿ ಬಡಿಸಲು ಅವಕಾಶವಾಗುತ್ತಿದ್ದಿತು. ಹಾಗೆಯೇ ಸೂರ್ಯೋದಯಕ್ಕಿಂತ ಮುಂಚೆ ಮುಸಲ್ಮಾನರು ಊಟಮಾಡಬೇಕಾದಾಗ ಹಿಂದೂ ಮತ್ತು ಇತರ ಯುವಕರೇನೂ ಅವರ ಜೊತೆಗೆ ಕೂಡಬೇಕಾಗುತ್ತಿರಲಿಲ್ಲ. ಮುಸಲ್ಮಾನರನ್ನುಳಿದು ಮಿಕ್ಕವರೆಲ್ಲರೂ ಹಗಲುಹೊತ್ತು ನೀರು ಕುಡಿಯುವದನ್ನು ಬಿಟ್ಟಿರಲಿಲ್ಲ.

ಈ ಪ್ರಯೋಗಗಳೆಲ್ಲದರ ಫಲವೇನಾಯಿತೆಂದರೆ: ಎಲ್ಲರಿಗೂ ಉಪವಾಸದ ಮಹತ್ವದಲ್ಲಿ ನಂಬಿಕೆಹುಟ್ಟಿತು ಮತ್ತು ಅವರಲ್ಲಿ ಪ್ರಖರವಾದ ಐಕ್ಯತಾಭಾವವು ಬೆಳೆಯಿತು. ಟಾಲ್‌ಸ್ಟಾಯ್ ಫಾರ್ಮಿನಲ್ಲಿ ನಾವೆಲ್ಲರೂ ಶಾಕಾಹಾರಿಗಳಾಗಿದ್ದೆವು. ಎಲ್ಲರೂ ನನ್ನ ಮನಸ್ಸನ್ನು ನೋಯಿಸದಿರಲು ಸಿದ್ಧರಾಗಿದ್ದುದೇ ಇದಕ್ಕೆ ಕಾರಣವೆಂದು ನಾನು ಕೃತಜ್ಞತೆಯಿಂದ ಹೇಳಬೇಕು. ರಮಜಾನ್ ಕಾಲದಲ್ಲಿ ಮಾಂಸವಿಲ್ಲವಲ್ಲಾ ಎಂದು ಮುಸಲ್ಮಾನ ಹುಡುಗರಿಗೆ ತೋರಿರಬೇಕು. ಆದರೆ ಅವರಲ್ಲಿ ಒಬ್ಬರೂ ಈ ತೋರಿಕೆಯು ನನ್ನನ್ನು ಮುಟ್ಟಲು ಎಂದೂ ಬಿಡಲಿಲ್ಲ. ಅವರು ಶಾಕಾಹಾರವನ್ನು ಸೇವಿಸಲು ಸಂತೋಷಪಡುತ್ತಿದ್ದರು. ಆದ

ರಲ್ಲಿ ಅವರಿಗೆ ರುಚಿಹುಟ್ಟಿತು. ಹಿಂದೂ ಹುಡುಗರು ಅವರಿಗೆ ಆಶ್ರಮದ ಸರಳತೆಗೆ ತಕ್ಕಂತಹ ರುಚಿಕರ ಶಾಕಾಹಾರಪದಾರ್ಥಗಳನ್ನು ಸಿದ್ಧಮಾಡುತ್ತಿದ್ದರು.

ಉಪವಾಸದಮೇಲಿನ ಈ ಅಧ್ಯಾಯದಲ್ಲಿ ನಾನು ಉದ್ದೇಶಪೂರ್ವಕವಾಗಿಯೇ ಬೇರೆ ವಿಷಯವನ್ನೂ ಬರೆದಿದ್ದೇನೆ. ಏಕೆಂದರೆ ಈ ಮಧುರ ಸಂಸ್ಮರಣಗಳನ್ನು ಬೇರೆಲ್ಲಿಯೂ ವರ್ಣಿಸಲು ಸಾಧ್ಯವಾಗುತ್ತಿರಲಿಲ್ಲ. ಇದೂ ಅಲ್ಲದೆ ಈ ವಿಷಯಾಂತರದ ಮಧ್ಯೆ ನನ್ನ ಸ್ವಭಾವವಿಶೇಷವೊಂದನ್ನೂ ವಿವರಿಸಿದ್ದೇನೆ. ಅದೇನೆಂದರೆ: ನನಗೆ ಒಳ್ಳೆಯದೆಂದು ತೋರಿದ ಕಾರ್ಯಗಳಲ್ಲೆಲ್ಲಾ ನನ್ನ ಸಹಯೋಗಿಗಳನ್ನೂ ಸೇರಿಸಿಕೊಳ್ಳಲು ನಾನು ಸದಾ ಪ್ರೇಮಪೂರ್ವಕವಾಗಿ ಪ್ರಯತ್ನಪಟ್ಟಿದ್ದೇನೆ. ಅವರೆಲ್ಲರೂ ಪೂರ್ಣೋಪವಾಸ ಅರ್ಧೋಪವಾಸಗಳಿಗೆ ತೀರ ಹೊಸಬರಾಗಿದ್ದರು. ಆದರೆ 'ಪ್ರದೋಷ' ಮತ್ತು 'ರಮುಜಾನ್' ಉಪವಾಸಗಳ ಮೂಲಕ ಅವರಲ್ಲಿ ಉಪವಾಸವು ಇಂದ್ರಿಯನಿಗ್ರಹ ಸಾಧನಗೊಂದು ಮಾರ್ಗವೆಂಬ ಅಭಿಪ್ರಾಯವನ್ನು ಹುಟ್ಟಿಸುವದು ಸುಲಭವಾಯಿತು.

ಹೀಗೆ ಆತ್ಮಸಂಯಮದ ವಾತಾವರಣವು ಆಶ್ರಮದಲ್ಲಿ ಸಹಜವಾಗಿಯೇ ಬೆಳೆಯಿತು. ಈಗ ಆಶ್ರಮನಿವಾಸಿಗಳೆಲ್ಲರೂ ಪೂರ್ಣೋಪವಾಸ ಅರ್ಧೋಪವಾಸಗಳನ್ನಾಚರಿಸುವದರಲ್ಲಿ ನಮ್ಮೊಡಗೂಡತೊಡಗಿದರು. ಇದರಿಂದ ಅವರಿಗೆ ಒಳ್ಳೆಯದಾಯಿತೆಂದೇ ನನ್ನ ದೃಢನಂಬಿಕೆ. ಈ ಇಷ್ಟವಸ್ತುತ್ಯಾಗವು ಅವರ ಹೃದಯವನ್ನು ಎಷ್ಟುಮಟ್ಟಿಗೆ ತಟ್ಟಿತೋ ಮತ್ತು ಇಂದ್ರಿಯನಿಗ್ರಹಕ್ಕಾಗಿ ಅವರು ಮಾಡಿದ ಪ್ರಯತ್ನದಲ್ಲಿ ಇದು ಎಷ್ಟುಮಟ್ಟಿಗೆ ಸಹಾಯವಾಯಿತೋ ನಾನು ನಿರ್ಧಾರವಾಗಿ ಹೇಳಲಾರೆನು. ಆದರೆ ನನ್ನ ಮಟ್ಟಿಗೆ ಮಾತ್ರ ನಾನು ಉಪವಾಸದಿಂದ ಆರೋಗ್ಯದೃಷ್ಟಿಯಿಂದಲೂ ನೈತಿಕದೃಷ್ಟಿಯಿಂದಲೂ ಹೆಚ್ಚು ಲಾಭವನ್ನು ಹೊಂದಿ

ದೆನೆಂದು ಹೇಳಬಲ್ಲೆನು. ಆದರೆ ಉಪವಾಸವೇ ಮುಂತಾದ ನಿಯಮಗಳಿಂದ ಎಲ್ಲರ ಮೇಲೆಯೂ ಇದೇ ರೀತಿಯ ಪರಿಣಾಮವಾಗುವದೆಂದು ತರ್ಕಿಸಲಾಗದೆಂದು ನನಗೆ ಗೊತ್ತು.

ಇಂದ್ರಿಯನಿಗ್ರಹವನ್ನು ಗುರಿಯಾಗಿಟ್ಟುಕೊಂಡು ಉಪವಾಸ ಮಾಡಿದಾಗಲೇ ಅದರಿಂದ ಪಾಶವಿಕವೃತ್ತಿಯನ್ನು ಮೆಟ್ಟಲು ಸಾಧ್ಯ. ಅಷ್ಟೇಕೆ, ಉಪವಾಸಗಳ ಫಲವಾಗಿ ತಮ್ಮ ವಿಷಯೇಚ್ಛೆಯೂ ಜಿಹ್ವಾಚಾಪಲ್ಯವೂ ಇನ್ನೂ ತೀವ್ರವಾಗಿರುವದನ್ನು ನನ್ನ ಮಿತ್ರರಲ್ಲಿ ಕೆಲವರು ಅನುಭವಿಸಿದ್ದಾರೆ. ಇದರ ಅರ್ಥವೇನೆಂದರೆ: ಆತ್ಮಸಂಯಮವನ್ನು ಸಾಧಿಸಬೇಕೆಂದು ನಿರಂತರವಾದ ಬಯಕೆಯಿಲ್ಲದಿದ್ದರೆ ಉಪವಾಸವು ನಿರರ್ಥಕ. ಕೇವಲ ಆಹಾರ ವರ್ಜನೆಯಿಂದ ಇಂದ್ರಿಯನಿಗ್ರಹವನ್ನು ಸಾಧಿಸಬಹುದೆಂದೆಣಿಸುವದು ತಪ್ಪು. ಈ ಸಂದರ್ಭದಲ್ಲಿ ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿನ ಪ್ರಸಿದ್ಧವಾದ ಈ ಕೆಳಗಿನ ಶ್ಲೋಕವು ತಿಳಿಸಲರ್ಹವಾಗಿದೆ:

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ।
ರಸವರ್ಜ್ಯಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ॥

[ಉಪವಾಸ ಮಾಡುವವನಿಂದ ಇಂದ್ರಿಯಗಳು ಬಯಸುವ ವಸ್ತುಗಳ ಅದೃಶ್ಯವಾಗುತ್ತವೆ. ಆದರೆ ಅವುಗಳ ಮೇಲಿನ ಬಯಕೆಯು ನಿಲ್ಲುತ್ತದೆ. ಈ ಬಯಕೆಯು ಕೂಡ ಈಶ್ವರದರ್ಶನದಿಂದಲೇ —ಈಶ್ವರನ ಪ್ರಸಾದದಿಂದಲೇ—ನಾಶಹೊಂದುತ್ತದೆ.]

ಆದುದರಿಂದ ಉಪವಾಸವೇ ಮುಂತಾದ ವ್ರತನಿಯಮಗಳು ಸಂಯಮಸಾಧನೆಗೆ ಮಾರ್ಗವೇ ಹೊರತು ಅವುಗಳೇ ಸರ್ವಸ್ವವಲ್ಲ. ಶರೀರೋಪವಾಸದ ಜೊತೆಗೆ ಮನಸ್ಸಿನ ಉಪವಾಸವೂ ಇಲ್ಲದಿದ್ದರೆ ಅದು ಕಾಪಟ್ಯದಲ್ಲಿಯೂ ಕಾಪಟ್ಯದಿಂದ ಫಲಿಸುವ ಅನರ್ಥದಲ್ಲಿಯೂ ಕೊನೆಗಾಣುತ್ತದೆ.

---

೩೨

# ಉಪಾಧ್ಯಾಯನಾಗಿ

'ದಕ್ಷಿಣ ಆಫ್ರಿಕದ ಸತ್ಯಾಗ್ರಹದ ಇತಿಹಾಸ'ದಲ್ಲಿ ತಿಳಿಸದಿರುವ ಅಥವಾ ಕೆಲವು ಸೂಕ್ಷ್ಮವಾಗಿ ತಿಳಿಸಿರುವ ವಿಷಯುಗಳನ್ನು ಮಾತ್ರ ನಾನು ಇಲ್ಲಿ ವರ್ಣಿಸುತ್ತಿರುವೆನೆಂಬುದನ್ನು ವಾಚಕರು ಮನಸ್ಸಿನಲ್ಲಿಟ್ಟುಕೊಂಡಿದ್ದರೆ (ಹಾಗೆ ಮಾಡುವರೆಂದು ನನ್ನ ಆಸೆ) ಈಚಿನ ಅಧ್ಯಾಯುಗಳ ಪರಸ್ಪರ ಸಂಬಂಧವು ಸುಲಭವಾಗಿ ತಿಳಿಯುತ್ತದೆ.

ಆಶ್ರಮವು ಅಭಿವೃದ್ಧಿಯಾಗುತ್ತಾ ಅಲ್ಲಿನ ಹುಡುಗಹುಡುಗಿಯರ ವಿದ್ಯಾಭ್ಯಾಸಕ್ಕೆ ಏನಾದರೂ ವ್ಯವಸ್ಥೆಮಾಡುವದು ಆವಶ್ಯಕವಾಗಿ ಕಂಡುಬಂದಿತು. ಇದರಲ್ಲಿ ಹಿಂದೂ, ಮುಸಲ್ಮಾನ, ಪಾರಸೀ ಮತ್ತು ಈಸಾಯೀ ಹುಡುಗರೂ ಕೆಲವು ಹಿಂದೂ ಹುಡುಗಿಯರೂ ಇದ್ದರು. ಅವರಿಗೆ ಪ್ರತ್ಯೇಕವಾದ ಶಿಕ್ಷಕರನ್ನು ನಿಯಮಿಸುವದು ಸಾಧ್ಯವಿರಲಿಲ್ಲ ; ನಾನು ಅದನ್ನು ಆವಶ್ಯಕವೆಂದು ಎಣಿಸಲೂ ಇಲ್ಲ. ಅದು ಸಾಧ್ಯವಿಲ್ಲದುದು ಏಕೆಂದರೆ, ತಕ್ಕ ಯೋಗ್ಯತೆಯುಳ್ಳ ಭಾರತೀಯ ಉಪಾಧ್ಯಾಯರು ದೊರಕುವದು ಕಷ್ಟವಾಗಿದ್ದಿತು. ಒಂದುವೇಳೆ ದೊರಕಿದರೂ ಸಣ್ಣ ತಲಬಿನ ಮೇಲೆ ಡರಬನಿನಿಂದ ಇಪ್ಪತ್ತು ಮೈಲಿ ದೂರವಿರುವ ಸ್ಥಳಕ್ಕೆ ಬರಲೊಪ್ಪುವರಾರು ? ಇದಲ್ಲದೆ ನಮ್ಮ ಖಜಾನೆಯಲ್ಲೇನೂ ಹಣವು ತುಂಬಿತುಳುಕುತ್ತಿರಲಿಲ್ಲ. ಆಶ್ರಮದ ಹೊರಗಿನಿಂದ ಉಪಾಧ್ಯಾಯರನ್ನು ಕರೆತರುವದು ಅನಾವಶ್ಯಕವೆಂದೆಣಿಸಿದೆನು. ನನಗೆ ವರ್ತಮಾನ ಶಿಕ್ಷಣಕ್ರಮದಲ್ಲಿ ವಿಶ್ವಾಸವಿರಲಿಲ್ಲ. ಅನುಭವದಿಂದಲೂ ಪ್ರಯೋಗದಿಂದಲೂ ಸರಿಯಾದ ಪದ್ಧತಿಯನ್ನು ಕಂಡುಹಿಡಿಯಬೇಕೆಂದು ನನಗೆ ಮನಸ್ಸಿದ್ದಿತು. ನನಗೆ ಗೊತ್ತಿದ್ದುದು

ಇಷ್ಟು: ಆದರ್ಶ ಪರಿಸ್ಥಿತಿಯಲ್ಲಿ ತಾಯಿತಂದೆಗಳೇ ಸಹಜವಾಗಿ ವಿದ್ಯೆಯನ್ನು ಕಲಿಸುವವರು; ಆಗ ಹೊರಗಿನ ಸಹಾಯವು ಸಾಧ್ಯವಾದಷ್ಟು ಕಡಿಮೆಯಾಗಿರಬೇಕು; 'ಟಾಲ್‌ಸ್ಟಾಯ್ ಫಾರ್ಮ್' ಕೂಡ ಒಂದು ಕುಟುಂಬವಾಗಿದ್ದಿತು; ಆ ಕುಟುಂಬದಲ್ಲಿ ನಾನೇ ತಂದೆಯ ಸ್ಥಾನದಲ್ಲಿದ್ದೆನು; ಶಕ್ಯವಿರುವ ಮಟ್ಟಿಗೆ ನಾನು ಶಿಕ್ಷಣ ಕೊಡುವ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕು.

ಈ ಕಲ್ಪನೆಯಲ್ಲಿ ಹುಳುಕಿಲ್ಲದಿರಲಿಲ್ಲವೆಂಬುವದೇನೋ ನಿಜವಾಗಿದ್ದಿತು. ಹುಡುಗರೆಲ್ಲಾ ತಮ್ಮ ಶೈಶವದಿಂದ ನನ್ನ ಬಳಿ ಇದ್ದಿರಲಿಲ್ಲ. ಒಬ್ಬೊಬ್ಬರು ಒಂದೊಂದು ವಾತಾವರಣದಲ್ಲಿಯೂ ಒಂದೊಂದು ಪರಿಸ್ಥಿತಿಯಲ್ಲಿಯೂ ಬೆಳೆದಿದ್ದರು. ಒಬ್ಬೊಬ್ಬರ ಧರ್ಮವೂ ಬೇರೆಯಾಗಿದ್ದಿತು. ಹೀಗಿರುವಲ್ಲಿ ನಾನು ಯಜಮಾನನ ಸ್ಥಿತಿಯನ್ನು ವಹಿಸಿ ಈ ಹುಡುಗರೆಲ್ಲರ ವಿಷಯದಲ್ಲಿಯೂ ನನ್ನ ಕರ್ತವ್ಯವನ್ನು ಪೂರ್ಣವಾಗಿ ಮಾಡಬಲ್ಲೆನೆಂತು?

ಆದರೆ ನಾನು ಯಾವಾಗಲೂ ಹಾರ್ದಿಕ ಶಿಕ್ಷಣಕ್ಕೆ, ಸುಚಾರಿತ್ರಸಂಪಾದನೆಗೆ, ಅಗ್ರಸ್ಥಾನವನ್ನು ಕೊಟ್ಟಿದ್ದೆನು. ಮತ್ತು ಹುಡುಗರ ವಯಸ್ಸುಗಳಲ್ಲಿಯೂ ಅವರನ್ನು ಬೆಳೆಸಿದ ರೀತಿಯಲ್ಲಿಯೂ ಎಷ್ಟೇ ವ್ಯತ್ಯಾಸವಿರಲಿ ಎಲ್ಲರಿಗೂ ಒಂದೇ ಸಮನಾದ ನೈತಿಕ ಶಿಕ್ಷಣವನ್ನು ಕೊಡಬಹುದೆಂದು ನನಗೆ ದೃಢವಿಶ್ವಾಸವಿದ್ದುದರಿಂದ ನಾನು ಅವರ ಮಧ್ಯೆ ಅವರ ತಂದೆಯಂತೆ ದಿನದ ಇಪ್ಪತ್ತುನಾಲ್ಕು ತಾಸೂ ವಾಸಿಸಲು ನಿಶ್ಚಯಿಸಿದೆನು. ಆದರೆ ಶಿಕ್ಷಣಕ್ಕೆ ಸೌಶೀಲ್ಯಾರ್ಜನೆಯೇ ಸರಿಯಾದ ತಳಹದಿಯೆಂದು ಎಣಿಸಿದ್ದೆನು. ಈ ಪಾಯವು ಸರಿಯಾಗಿ ಬಿದ್ದರೆ ಹುಡುಗರು ಉಳಿದುದನ್ನೆಲ್ಲಾ ತಾವಾಗಿಯೇ ಅಥವಾ ಮಿತ್ರರ ಸಹಾಯದಿಂದ ಕಲಿತುಕೊಳ್ಳಲಾಪರೆಂಬ ನಂಬಿಕೆಯು ನನಗಿದ್ದಿತು.

ಆದರೆ ಇದರ ಜೊತೆಗೆ ಸಾಹಿತ್ಯಶಿಕ್ಷಣದ ಆವಶ್ಯಕತೆಯನ್ನು ನಾನು ಚೆನ್ನಾಗಿ ತಿಳಿದಿದ್ದುದರಿಂದ ಮಿ. ಕಾಲನ್‌ಬಾಕರು ಮತ್ತು

ಶ್ರೀ ಪ್ರಾಗ್ಜೀ ದೇಶಾಯಿ ಇವರ ಸಹಾಯದಿಂದ ಕೆಲವು ವರ್ಗಗಳನ್ನು ಆರಂಭಿಸಿದೆನು. ಶರೀರವ್ಯವಸಾಯಕ್ಕೆ ಕೂಡ ನಾನೇನೂ ಕಡಿಮೆಯಾಗಿ ಬೆಲೆ ಕಟ್ಟಲಿಲ್ಲ. ಇದು ಅವರಿಗೆ ತಮ್ಮ ದಿನಚರಿಯಲ್ಲಿಯೇ ಒದಗುತ್ತಿದ್ದಿತು. ಏಕೆಂದರೆ ಆಶ್ರಮದಲ್ಲಿ ಸೇವಕರಾರೂ ಇರಲಿಲ್ಲ. ಅಡಿಗೆಯಿಂದ ಮೊದಲುಗೊಂಡು ಕಕ್ಕಸ ಬಳಿಯುವವರೆಗೂ ಕೆಲಸಗಳನ್ನೆಲ್ಲಾ ಆಶ್ರಮನಿವಾಸಿಗಳೇ ಮಾಡುತ್ತಿದ್ದರು. ನೋಡಿಕೊಳ್ಳುವದಕ್ಕೆ ಬೇಕಾದಷ್ಟು ಹಣ್ಣಿನ ಮರಗಳಿದ್ದುವು; ಮಾಡುವದಕ್ಕೆ ಸಾಕಾದಷ್ಟು ತೋಟದ ಕೆಲಸವೂ ಇರುತ್ತಿದ್ದಿತು. ಮಿ. ಕಾಲನ್‌ಬಾಕರಿಗೆ ತೋಟದ ಕೆಲಸವೆಂದರೆ ಇಷ್ಟ. ಸರಕಾರದ ಆದರ್ಶಕ್ಷೇತ್ರ (ಮಾಡಲ್ ಫಾರ್ಮ್) ವೊಂದರಲ್ಲಿ ಅವರು ಈ ಕೆಲಸದಲ್ಲಿ ಸ್ವಲ್ಪ ಪರಿಶ್ರಮವನ್ನು ಪಡೆದಿದ್ದರು. ಅಡಿಗೆಯ ಮನೆಯಲ್ಲಿ ಕೆಲಸಮಾಡುತ್ತಿದ್ದವರೆಲ್ಲರೂ—ಹುಡುಗರೂ ಮುದುಕರೂ—ಈ ಕೆಲಸವನ್ನು ಸ್ವಲ್ಪ ಹೊತ್ತು ಮಾಡಬೇಕಾಗಿದ್ದಿತು. ಇದರಲ್ಲಿ ಹೆಚ್ಚುಪಾಲು ಹುಡುಗರಿಗೇ ಬೀಳುತ್ತಿದ್ದಿತು. ಪಾತಿ ಅಗೆಯುವದು, ಮರ ಕಡಿಯುವದು, ಹೊರೆ ಹೊರುವದು, ಇವೆಲ್ಲವೂ ಇದರಲ್ಲಿ ಸೇರಿದ್ದುವು. ಇದರಿಂದ ಅವರಿಗೆ ಬೇಕಾದಷ್ಟು ವ್ಯಾಯಾಮವಾಗುತ್ತಿದ್ದಿತು. ಈ ಕೆಲಸದಲ್ಲಿ ಅವರು ಆನಂದಪಡುತ್ತಿದ್ದರು. ಆದುದರಿಂದ ಅವರಿಗೆ ಬೇರೆ ವ್ಯಾಯಾಮ ಅಥವಾ ಆಟಪಾಟದ ಆವಶ್ಯಕತೆಯಿರಲಿಲ್ಲ. ಅವರಲ್ಲಿ ಕೆಲವರು, ಒಂದೊಂದುವೇಳೆ ಎಲ್ಲರೂ, ಕೆಲಸ ಮಾಡಲು ಹಿಂದೇಟುಹಾಕುತ್ತಿದ್ದರು, ಕಾಟಾಚಾರಕ್ಕೆ ಮಾಡುತ್ತಿದ್ದರು. ಕೆಲವುವೇಳೆ ನಾನೂ ಅವರೊಡನೆ ಸೇರಿ ಚಿನ್ನಾಟವಾಡುತ್ತಿದ್ದೆನು. ಅನೇಕವೇಳೆ ಖಂಡಿತದಿಂದ ಅವರ ಕೈಯಲ್ಲಿ ಕೆಲಸಮಾಡಿಸುತ್ತಿದ್ದೆನು. ನನ್ನ ಖಂಡಿತ ವೃತ್ತಿಯು ಅವರ ಇಷ್ಟಕ್ಕೆ ಬರದೆ ಇದ್ದಿರಬಹುದು. ಆದರೆ ಅದನ್ನು ಅವರು ಇದಿರಿಸಿದುದು ನನಗೆ ನೆನಪಿಲ್ಲ. ನಾನು ಹೀಗೆ ಖಂಡಿತವಾಗಿದ್ದಾಗ ಆಟವಾಡುತ್ತಾ ಕೆಲಸಮಾಡುವದು ಸರಿಯಲ್ಲವೆಂದು ಸಕಾರಣವಾಗಿ ಅವರಿಗೆ

ತಿಳಿಯಹೇಳಲು ಯತ್ನಿಸುತ್ತಿದ್ದೆನು. ಆದರೆ ಇದರಿಂದ ಹುಟ್ಟಿದ ಶ್ರದ್ಧೆಯು ಒಂದು ಕ್ಷಣಕ್ಕೆ ಮಾಯವಾಗಿ ಮರುಕ್ಷಣವೇ ಅವರು ಕೆಲಸವನ್ನು ಬಿಟ್ಟು ಆಟಕ್ಕೆ ಹೋಗುತ್ತಿದ್ದರು. ಅದು ಏನೇ ಆಗಲಿ ನಾವು ಹೊಂದಿಕೊಂಡು ಹೋಗುತ್ತಿದ್ದೆವು. ಅವರು ಕಾಯಪುಷ್ಟಿಯನ್ನು ಸಂಪಾದಿಸಿದರು. ಒಳ್ಳೆಯ ಗಾಳಿಯೂ ನೀರೂ ಗೊತ್ತಾದ ಕಾಲಕ್ಕೆ ಸರಿಯಾಗಿ ಊಟವೂ ಇದರ ಜೊತೆಗೆ ಸೇರಿ ಆಶ್ರಮದಲ್ಲಿ ಕಾಹಿಲೆಯ ಸುಳಿವೇ ಇಲ್ಲದಂತೆ ಮಾಡಿದು ವೆನ್ನಬಹುದು.

ಈ ಸಂದರ್ಭದಲ್ಲಿ ಔದ್ಯೋಗಿಕ ಶಿಕ್ಷಣದ ವಿಚಾರವಾಗಿಯೂ ಒಂದೆರಡು ಮಾತನ್ನು ಹೇಳಬಯಸುತ್ತೇನೆ. ಈ ಹುಡುಗರಲ್ಲಿ ಪ್ರತಿಯೊಬ್ಬರಿಗೂ ಯಾವುದಾದರೊಂದು ಉಪಯೋಗಕರವಾದ ಕೈಗೆಲಸವನ್ನು ಕಲಿಸಬೇಕೆಂಬುದು ನನ್ನ ಉದ್ದೇಶವಾಗಿದ್ದಿತು. ಇದಕ್ಕಾಗಿ ಮಿ. ಕಾಲನ್‌ಬಾಕರು ಒಂದು 'ಟ್ರಾಪಿಸ್ಟ್ ಮೋನಾಸ್ಟರಿ'(ಒಂದು ಈಸಾಯಿಪಂಗಡದ ಮಠ)ಗೆ ಹೋಗಿ ಅಲ್ಲಿ ಜೋಡು ಹೊಲಿಯುವದನ್ನು ಕಲಿತುಕೊಂಡು ಹಿಂತಿರುಗಿ ದರು. ಅವರಿಂದ ನಾನು ಕಲಿತುಕೊಂಡು ಅದನ್ನು ಅಭ್ಯಸಿಸಲು ಸಿದ್ಧರಾಗಿದ್ದವರಿಗೆ ಆ ವಿದ್ಯೆಯನ್ನು ಕಲಿಸಿಕೊಟ್ಟೆನು. ಮಿ. ಕಾಲನ್‌ಬಾಕರಿಗೆ ಬಡಗಿಯ ಕೆಲಸದ ಅನುಭವವು ಕೊಂಚ ಮಟ್ಟಿಗೆ ಇದ್ದಿತು. ಇದನ್ನು ತಿಳಿದ ಇನ್ನೊಬ್ಬಾತನೂ ಆಶ್ರಮ ದಲ್ಲಿದ್ದುದರಿಂದ ನಾವು ಒಂದು ಸಣ್ಣ ಬಡಗಿ ಕೆಲಸದ ವರ್ಗವನ್ನು ಆರಂಭಿಸಿದೆವು. ಅಡಿಗೆಯಂತು ಹೆಚ್ಚು ಕಡಿಮೆ ಎಲ್ಲಾ ಹುಡು ಗರಿಗೂ ಬರುತ್ತಿದ್ದಿತು.

ಇದೆಲ್ಲವೂ ಅವರಿಗೆ ಹೊಸದಾಗಿದ್ದಿತು. ಈ ವಿಷಯಗಳನ್ನು ಎಂದಾದರೂ ಒಂದುದಿನ ಕಲಿತುಕೊಳ್ಳಬೇಕಾಗುವದೆಂದು ಅವರು ಸ್ವಪ್ನದಲ್ಲಿಯೂ ಕಂಡಿರಲಿಲ್ಲ. ಏಕೆಂದರೆ ದಕ್ಷಿಣ ಆಫ್ರಿಕದಲ್ಲಿ ಭಾರತೀಯ ಹುಡುಗರಿಗೆ ಸಾಮಾನ್ಯವಾಗಿ ದೊರಕುತ್ತಿದ್ದುದು ಕೇವಲ ಅಕ್ಷರಜ್ಞಾನ ಮತ್ತು ಗಣಿತದ ಶಿಕ್ಷಣ.

ಶಿಕ್ಷಕರು ಸ್ವತಃ ಮಾಡದೆ ಇದ್ದುದಾವುದನ್ನೂ ಹುಡುಗರಿಗೆ ಮಾಡಲಿಕ್ಕೆ ಹೇಳಕೂಡದೆಂಬ ನಿಯಮವನ್ನು ನಾವು 'ಟಾಲ್ಸ್ಟಾಯ್ ಫಾರ್ಮ್'ನಲ್ಲಿ ಇಟ್ಟುಕೊಂಡಿದ್ದೆವು. ಆದುದರಿಂದ ಅವರಿಗೆ ಏನಾದರೂ ಕೆಲಸವನ್ನು ಹೇಳಿದರೆ ಯಾವಾಗಲೂ ಅವರೊಡನೆ ಕೆಲಸಮಾಡುತ್ತಾ ಯಾರಾದರೊಬ್ಬರು ಶಿಕ್ಷಕರು ಇದ್ದೇ ಇರುತ್ತಿದ್ದರು. ಈ ಕಾರಣದಿಂದ ಹುಡುಗರು, ತಾವು ಏನನ್ನೇ ಕಲಿಯಲಿ, ಸಂತೋಷದಿಂದ ಕಲಿಯುತ್ತಿದ್ದರು.

ಅವರ ಸೌಶೀಲ್ಯಸಂಪಾದನೆಯ ವಿಷಯವಾಗಿಯೂ ಅಕ್ಷರ ಶಿಕ್ಷಣದ ವಿಚಾರವಾಗಿಯೂ ಮುಂದೆ ಬರೆಯೋಣ.



## ೩೩
# ಅಕ್ಷರಶಿಕ್ಷಣ

ಟಾಲ್‌ಸ್ಟಾಯ್ ಫಾರ್ಮಿನಲ್ಲಿ ಶಾರೀರಿಕ ಶಿಕ್ಷಣಕ್ಕೂ ಅದರೊಡನೆಯೇ ಔದ್ಯೋಗಿಕ ಶಿಕ್ಷಣಕ್ಕೂ ಹೇಗೆ ಏರ್ಪಡಿಸಿದೆವೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಈ ಏರ್ಪಾಟು ನನಗೆ ತೃಪ್ತಿಯಾಗುವ ರೀತಿಯಲ್ಲಿ ಮಾಡಲ್ಪಟ್ಟಿದ್ದಿತೆಂದು ಹೇಳಲಾಗುವದಿಲ್ಲವಾದರೂ ಅದು ಹೆಚ್ಚು ಕಡಿಮೆ ಸಫಲವಾಯಿತೆನ್ನಬಹುದು. ಆದರೆ ಅಕ್ಷರಶಿಕ್ಷಣವು ಹೆಚ್ಚು ಕಷ್ಟದ ವಿಷಯವಾಗಿದ್ದಿತು. ಇದಕ್ಕೆ ಬೇಕಾದ ಅನುಕೂಲವಾಗಲಿ ಪಾಂಡಿತ್ಯವಾಗಲಿ ನನ್ನಲ್ಲಿರಲಿಲ್ಲ. ಮತ್ತು ಈ ವಿಷಯಕ್ಕೆ ಉಪಯೋಗಿಸಲು ನಾನು ಇಷ್ಟಪಡುವಷ್ಟು ವಿರಾಮವು ನನಗಿರಲಿಲ್ಲ. ನಾನು ಪಡುತ್ತಿದ್ದ ದೇಹಶ್ರಮದಿಂದ ಕೆಲಸದ ಕೊನೆಯಲ್ಲಿ ದಿನವೂ ನಾನು ದಣಿದಿರುತ್ತಿದ್ದೆನು. ನನಗೆ ವಿಶ್ರಾಂತಿಯು ಅತ್ಯಾವಶ್ಯಕವಿದ್ದಾಗಲೇ ನಾನು ಪಾಠ ಹೇಳಿಕೊಡುತ್ತಿದ್ದೆನು. ಆದುದರಿಂದ ನಾನು ಉತ್ಸಾಹದಿಂದ ಶಾಲೆಗೆ ಹೋಗುವದರ ಬದಲು ಅಲ್ಲಿ ಎಚ್ಚರವಾಗಿರುವದೇ ಕಷ್ಟವಾಗಿರುತ್ತಿದ್ದಿತು. ಬೆಳಿಗ್ಗೆ ಹೊಲದ ಕೆಲಸವನ್ನೂ ಮನೆಗೆಲಸವನ್ನೂ ಮಾಡಬೇಕಾಗಿದ್ದಿತು. ಇದರಿಂದ ಮಧ್ಯಾಹ್ನದ ಊಟವಾದಮೇಲೆ ಪಾಠವನ್ನು ಹೇಳಿಕೊಡಬೇಕಾಗಿದ್ದಿತು. ಇದನ್ನು ಬಿಟ್ಟು ಶಾಲೆಗೆ ಅನುಕೂಲವಾದ ಸಮಯವೇ ದೊರಕುತ್ತಿರಲಿಲ್ಲ.

ಅಕ್ಷರಶಿಕ್ಷಣಕ್ಕೆ ಹೆಚ್ಚೆಂದರೆ ಮೂರು ತಾಸನ್ನು ವಿನಿಯೋಗಿಸುತ್ತಿದ್ದೆವು. ಹಿಂದೀ, ತಮಿಳು, ಗುಜರಾತೀ, ಮತ್ತು ಉರ್ದು, ಇವೆಲ್ಲವನ್ನೂ ಹೇಳಿಕೊಡುತ್ತಿದ್ದೆವು. ಈ ಶಿಕ್ಷಣವು ಹುಡುಗರ ತಾಯ್ನುಡಿಗಳಲ್ಲಿ ನಡೆಯುತ್ತಿದ್ದಿತು. ಇಂಗ್ಲಿಷನ್ನೂ ಕಲಿಸುತ್ತಿದ್ದೆವು. ಮತ್ತು ಗುಜರಾತಿ ಹಿಂದೂ ಹುಡುಗರಿಗೆ

ಸ್ವಲ್ಪ ಸಂಸ್ಕೃತದ ಜ್ಞಾನವನ್ನೂ ಎಲ್ಲಾ ಹುಡುಗರಿಗೂ ಚರಿತ್ರೆ, ಭೂಗೋಳ ಮತ್ತು ಅಂಕಗಣಿತಗಳ ಪರಿಚಯವನ್ನೂ ಮಾಡಿಕೊಡಬೇಕಾಗಿದ್ದಿತು. ತಮಿಳು ಮತ್ತು ಉರ್ದೂ ಭಾಷೆಗಳನ್ನು ಹೇಳಿಕೊಡಲು ನಾನು ಒಪ್ಪಿಕೊಂಡಿದ್ದೆನು. ನನಗಿದ್ದ ಅಲ್ಪಸ್ವಲ್ಪ ತಮಿಳು ಜ್ಞಾನವು ನಾನು ಸಮುದ್ರಯಾನಗಳಲ್ಲಿಯೂ ಬಂದೀಖಾನೆಯಲ್ಲಿಯೂ ಸಂಪಾದಿಸಿದುದಾಗಿದ್ದಿತು. ಪೋಪನ ಅತ್ಯುತ್ತಮವಾದ 'ತಮಿಳು ಕೈಪಿಡಿ'ಗಿಂತ ಹೆಚ್ಚಾಗಿ ನನ್ನ ಓದು ಸಾಗಿರಲಿಲ್ಲ. ನಾನು ಸಂಪಾದಿಸಿದ್ದ ಉರ್ದೂಲಿಪಿಯ ಜ್ಞಾನವೆಲ್ಲವೂ ಒಂದೇ ಒಂದು ಸಮುದ್ರಯಾನದಲ್ಲಿ ಕಲಿತುಕೊಂಡುದಾಗಿದ್ದಿತು. ಆ ಭಾಷೆಯ ಪರಿಚಯವಂತು ಮುಸಲ್ಮಾನ ಮಿತ್ರರ ಸಂಪರ್ಕದಿಂದ ನನ್ನ ರೂಢಿಗೆ ಬಂದಿದ್ದ ಅರಬ್ಬೀ ಮತ್ತು ಪಾರಸೀ ಶಬ್ದಗಳಷ್ಟಕ್ಕೇ ನಿಂತುಹೋಗಿದ್ದಿತು. ಹೈಸ್ಕೂಲಿನಲ್ಲಿ ಕಲಿತುಕೊಂಡುದಕ್ಕಿಂತ ಹೆಚ್ಚಾಗಿ ನನಗೆ ಸಂಸ್ಕೃತವು ಬರುತ್ತಿರಲಿಲ್ಲ. ನನ್ನ ಗುಜರಾತೀ ಭಾಷಾಜ್ಞಾನವು ಕೂಡ ಯಾರಾದರೂ ಶಾಲೆಯಲ್ಲಿ ಕಲಿತುಕೊಳ್ಳುವದಕ್ಕಿಂತ ಹೆಚ್ಚಾಗಿರಲಿಲ್ಲ.

ನಾನು ನನ್ನ ಕೆಲಸವನ್ನು ನಿರ್ವಹಿಸಬೇಕಾಗಿದ್ದುದು ಈ ಬಂಡವಾಳದ ಮೇಲೆಯೇ. ಭಾಷಾಜ್ಞಾನ ದಾರಿದ್ರ್ಯದಲ್ಲಿ ನನ್ನ ಜೊತೆಯವರು ನನಗಿಂತ ಒಂದು ಕೈ ಮಿಗಿಲಾಗಿದ್ದರು. ಆದರೆ ನನ್ನ ತಾಯ್ನಾಡಿನ ನುಡಿಗಳಲ್ಲಿ ನನಗಿದ್ದ ಮಮತೆಯೂ ನಾನು ಪಾಠ ಹೇಳಿಕೊಡಬಲ್ಲೆನೆಂದು ನನಗಿದ್ದ ಧೈರ್ಯವೂ ನನ್ನ ಶಿಷ್ಯರ ಅಜ್ಞಾನವೂ ಇದಕ್ಕಿಂತ ಹೆಚ್ಚಾಗಿ ಅವರ ಔದಾರ್ಯವೂ ನನಗೆ ಬೆಂಬಲಕೊಟ್ಟುವು.

ತಮಿಳು ಹುಡುಗರೆಲ್ಲಾ ದಕ್ಷಿಣ ಆಫ್ರಿಕದಲ್ಲಿಯೇ ಹುಟ್ಟಿದವರಾಗಿದ್ದುದರಿಂದ ಅವರಿಗೆ ತಮಿಳು ಚೆನ್ನಾಗಿ ಬರುತ್ತಿರಲಿಲ್ಲ. ತಮಿಳು ಲಿಪಿಯ ಗಂಧವಂತು ಅವರಿಗೆ ಇರಲೇ ಇಲ್ಲ. ಆದುದರಿಂದ ನಾನು ಅವರಿಗೆ ಬರಹವನ್ನೂ ವ್ಯಾಕರಣದ ಪ್ರಥಮಾಂಶ

ಗಳನ್ನೂ ಹೇಳಿಕೊಡಬೇಕಾಗಿದ್ದಿತು. ಇದೆಲ್ಲಾ ಸುಲಭವಾಗಿಯೇ ಇದ್ದಿತು. ತಮಿಳಿನಲ್ಲಿ ಮಾತುಕತೆಯಾಡುವದರಲ್ಲಿ ನನ್ನನ್ನು ಎಂದುಬೇಕಾದರೂ ಸೋಲಿಸಬಲ್ಲೆವೆಂದು ನನ್ನ ಶಿಷ್ಯರಿಗೆ ಗೊತ್ತಿದ್ದಿತು. ಇಂಗ್ಲಿಷನ್ನು ಅರಿಯದ ತಮಿಳರು ನನ್ನನ್ನು ನೋಡಲಿಕ್ಕೆ ಬಂದಾಗ ಇವರು ನನ್ನ ಮಾತಿನ ಅರ್ಥವನ್ನು ಅವರಿಗೆ ಹೇಳುತ್ತಿದ್ದರು. ನನ್ನ ಅಜ್ಞಾನವನ್ನು ನನ್ನ ಶಿಷ್ಯರಿಂದ ಮುಚ್ಚಿಡಲು ನಾನು ಯಾವಾಗಲೂ ಪ್ರಯತ್ನಪಡಲಿಲ್ಲವಾದುದರಿಂದ ನನ್ನ ಕೆಲಸವು ಸರಾಗವಾಗಿ ಜರುಗಿತು. ನಾನು ನಿಜವಾಗಿಯೂ ಇದ್ದಂತೆಯೇ ಅವರಿಗೆ ಎಲ್ಲ ವಿಷಯದಲ್ಲಿಯೂ ತೋರ್ಪಡಿಸಿಕೊಂಡೆನು. ನನಗೆ ಭಾಷೆಯ ಜ್ಞಾನವು ಕೇವಲ ಕಡಿಮೆಯಾಗಿದ್ದರೂ ನಾನು ಅವರ ಪ್ರೇಮವನ್ನೂ ಗೌರವವನ್ನೂ ಕಳೆದುಕೊಳ್ಳಲಿಲ್ಲ. ಮುಸಲ್ಮಾನ ಹುಡುಗರಿಗೆ ಉರ್ದುವನ್ನು ಕಲಿಸಿಕೊಡುವದು ಇದಕ್ಕಿಂತ ಸುಲಭವಾಗಿದ್ದಿತು. ಅವರಿಗೆ ಲಿಪಿಯು ಗೊತ್ತಿದ್ದಿತು. ಓದುವದರಲ್ಲಿ ಆಸಕ್ತಿ ಹುಟ್ಟಿಸುವದು ಮತ್ತು ಅವರ ಬರಹವನ್ನು ಉತ್ತಮಗೊಳಿಸುವದು, ಇಷ್ಟನ್ನು ಮಾತ್ರ ನಾನು ಮಾಡಬೇಕಾಗಿದ್ದಿತು.

ಈ ಹುಡುಗರಲ್ಲಿ ಹೆಚ್ಚುಮಂದಿ ನಿರಕ್ಷರರಾಗಿಯೂ ಶಾಲೆಗೆ ಹೋಗಿಲ್ಲದವರಾಗಿಯೂ ಇದ್ದರು. ಆದರೆ ಅವರ ಸೋಮಾರಿತನವನ್ನು ಹೋಗಲಾಡಿಸುವದು ಮತ್ತು ಅವರು ಅಭ್ಯಾಸ ಮಾಡುತ್ತಿರುವಾಗ ಅವರನ್ನು ವಿಚಾರಿಸಿಕೊಳ್ಳುವದು, ಇದನ್ನು ಬಿಟ್ಟು ಅವರಿಗೆ ಹೇಳಿಕೊಡಬೇಕಾದುದು ಅತ್ಯಲ್ಪವೆಂದು ನನಗೆ ಕೆಲಸಮಾಡುತ್ತಾ ಮಾಡುತ್ತಾ ಗೊತ್ತಾಯಿತು. ನನಗೆ ಇದಕ್ಕಿಂತ ಹೆಚ್ಚಾಗಿ ಏನೂ ಬೇಕಾಗಿರಲಿಲ್ಲವಾದುದರಿಂದ ಬೇರೆಬೇರೆ ವಯಸ್ಸಿನ, ಬೇರೆಬೇರೆ ಪಾಠಗಳನ್ನು ಕಲಿಯುತ್ತಿರುವ ಹುಡುಗರನ್ನೆಲ್ಲಾ ಒಂದೇ ಕೊಠಡಿಯಲ್ಲಿಟ್ಟುಕೊಂಡು ಶಿಕ್ಷಣವನ್ನು ಸಡೆಸುವದು ನನಗೆ ಸಾಧ್ಯವಾಯಿತು.

ಈಗ ನಾವು ಪಠ್ಯಪುಸ್ತಕಗಳ ವಿಷಯವಾಗಿ ಅಷ್ಟು ಕೇಳು ತ್ತೇವೆ. ಆಗ ಅವುಗಳ ಅಭಾವವೇ ನನಗೆ ತೋರಲಿಲ್ಲ. ದೊರ ಕುತ್ತಿದ್ದ ಪುಸ್ತಕಗಳನ್ನು ಕೂಡ ಹೆಚ್ಚಾಗಿ ಉಪಯೋಗಿಸಿ ದಂತೆ ನನಗೆ ನೆನಪಿಲ್ಲ. ಪುಸ್ತಕಗಳ ಹೊರೆಯನ್ನು ಹುಡುಗರ ಮೇಲೆ ಹೊರಿಸುವದರ ಆವಶ್ಯಕತೆಯೇ ನನಗೆ ಕಾಣಲಿಲ್ಲ. ನನಗೆ ಸದಾ ಕಂಡುಬಂದಿರುವದೇನೆಂದರೆ: ಗುರುವೇ ಶಿಷ್ಯನಿಗೆ ಸಹಜವಾದ ಪಠ್ಯಪುಸ್ತಕ. ನನ್ನ ಶಿಕ್ಷಕರು ಪುಸ್ತಕಗಳಿಂದ ಹೇಳಿ ಕೊಟ್ಟುದರಲ್ಲಿ ನನಗೆ ನೆನಪಿರುವ ಭಾಗವು ಅತ್ಯಲ್ಪ. ಪುಸ್ತಕ ಗಳಿಲ್ಲದೆ ಅವರು ಹೇಳಿಕೊಟ್ಟ ವಿಷಯಗಳ ಜ್ಞಾಪಕವು ನನಗೆ ಈಗಲೂ ಸ್ಪಷ್ಟವಾಗಿದೆ. ಓದುವದರಿಂದ ಗ್ರಹಿಸುವದಕ್ಕಿಂತಲೂ ಹೆಚ್ಚು ವಿಷಯಗಳನ್ನು ಹುಡುಗರು ಕೇಳುವದರ ಮೂಲಕ ಕಡಿಮೆ ಶ್ರಮದಿಂದ ಗ್ರಹಿಸುತ್ತಾರೆ. ಹುಡುಗರೊಡನೆ ಮೊದ ಲಿನಿಂದ ಕೊನೆಯವರೆಗೂ ಬಂದು ಪುಸ್ತಕವನ್ನು ಕೂಡ ಓದಿದೆ ನೆಂದು ನನಗೆ ನೆನಪಿಲ್ಲ. ಆದರೆ ಅನೇಕ ಪುಸ್ತಕಗಳನ್ನು ಓದಿ ಮುಂದಟ್ಟುಮಾಡಿಕೊಂಡಿದ್ದುದನ್ನೆಲ್ಲಾ ನಾನು ಅವರಿಗೆ ನನ್ನ ಮಾತಿನಲ್ಲಿಯೇ ಹೇಳುತ್ತಿದ್ದೆನು. ಇದನ್ನು ಅವರು ಇನ್ನೂ ತಮ್ಮ ಸ್ಮರಣೆಯಲ್ಲಿಟ್ಟುಕೊಂಡಿರುವರೆಂದು ನಾನು ಹೇಳಬಲ್ಲೆನು. ತಾವು ಪುಸ್ತಕಗಳಲ್ಲಿ ಕಲಿತುಕೊಂಡುದನ್ನು ನೆನಪಿನಲ್ಲಿಟ್ಟುಕೊ ಳ್ಳುವದು ಅವರಿಗೆ ಕ್ಲೇಶದ ಕೆಲಸವಾಗಿದ್ದಿತು. ಆದರೆ ನಾನು ಬಾಯಲ್ಲಿ ಹೇಳಿಕೊಟ್ಟುದನ್ನು ಅವರು ಅತಿಸುಲಭವಾಗಿ ಒಪ್ಪಿಸಿ ಬಿಡುತ್ತಿದ್ದರು. ಓದುವದು ಅವರಿಗೊಂದು ಕೆಲಸವಾಗಿದ್ದಿತು. ಆದರೆ ನಾನು ಹೇಳುವ ವಿಷಯವನ್ನು ನೀರಸವಾಗಿ ಮಾಡಿ ಅವ ರಿಗೆ ಬೇಸರಪಡಿಸದಿರುವಾಗ ನನ್ನ ಮಾತನ್ನು ಆಲಿಸುತ್ತಿರುವದು ಅವರಿಗೆ ಸಂತೋಷದಾಯಕವಾಗಿರುತ್ತಿದ್ದಿತು. ಇದಲ್ಲದೆ ನಾನು ಹೇಳಿದುದರ ವಿಷಯವಾಗಿ ಅವರು ಕೇಳುವ ಪ್ರಶ್ನೆಗ ಳಿಂದ ಅವರ ಗ್ರಹಣಶಕ್ತಿಯ ಅಳತೆಯು ನನಗೆ ತಿಳಿಯುತ್ತಿ ದ್ದಿತು.

೩೪

# ಆಧ್ಯಾತ್ಮಿಕ ಶಿಕ್ಷಣ

ಹುಡುಗರ ಶಾರೀರಿಕ ಮಾನಸಿಕ ಶಿಕ್ಷಣಗಳಿಗಿಂತಲೂ ಅವರ ಆಧ್ಯಾತ್ಮಿಕ ಶಿಕ್ಷಣವು ಕಷ್ಟತರ ವಿಷಯವಾಗಿದ್ದಿತು. ಅವರ ಆತ್ಮವನ್ನು ವಿಕಾಸಗೊಳಿಸುವದಕ್ಕೆ ನಾನು ಧರ್ಮಗ್ರಂಥಗಳ ಮೇಲೆ ಹೆಚ್ಚು ಭಾರವನ್ನು ಹಾಕಲಿಲ್ಲ. ಪ್ರತಿಯೊಬ್ಬ ವಿದ್ಯಾರ್ಥಿಗೂ ತನ್ನ ಧರ್ಮದ ಮೂಲತತ್ವಗಳು ತಿಳಿದಿರಬೇಕೆಂದೂ ತನ್ನ ಧರ್ಮಗ್ರಂಥಗಳ ಸಾಮಾನ್ಯ ಜ್ಞಾನವಿರಬೇಕೆಂದೂ ನಾನು ತಿಳಿದಿದ್ದುದೇನೋ ನಿಜ. ಆದುದರಿಂದ ನನ್ನ ಕೈಲಾದ ಮಟ್ಟಿಗೆ ಅವರಿಗೆ ಅಂತಹ ತಿಳಿವಳಿಕೆಯುಂಟಾಗಲು ಅನುಕೂಲಪಡಿಸಿದೆನು. ಆದರೆ ಇದು ಬುದ್ಧಿಯ ಶಿಕ್ಷಣದ ಒಂದು ಭಾಗವೆಂದೇ ನನ್ನ ಎಣಿಕೆಯಾಗಿದ್ದಿತು. ಟಾಲ್‌ಸ್ಟಾಯ್ ಫಾರ್ಮಿನ ಬಾಲಕರ ಶಿಕ್ಷಣವನ್ನು ಕೈಗೊಳ್ಳುವದಕ್ಕೆ ಬಹುಕಾಲ ಮುಂಚೆಯೇ ನನಗೆ ಆಧ್ಯಾತ್ಮಿಕ ಶಿಕ್ಷಣವೇ ಬೇರೆ ವಸ್ತುವೆಂಬ ಮನವರಿಕೆಯುಂಟಾಗಿದ್ದಿತು. ಆತ್ಮವನ್ನು ವಿಕಾಸಗೊಳಿಸುವದೆಂದರೆ ಸೌಶೀಲ್ಯಾರ್ಜನೆ, ದೇವರ ಅರಿವನ್ನು ಸಂಪಾದಿಸುವದು ಮತ್ತು ಆತ್ಮಜ್ಞಾನವನ್ನು ಹೊಂದುವದು. ಬಾಲಕರ ಶಿಕ್ಷಣದಲ್ಲಿ ಇದೂ ಮುಖ್ಯವಾದ ಭಾಗವೆಂದೂ ಇದಿಲ್ಲದೆ ಇತರ ಶಿಕ್ಷಣವು ವ್ಯರ್ಥವೆಂದೂ ಒಂದು ವೇಳೆ ಹಾನಿಕರವಾದರೂ ಆಗಬಹುದೆಂದೂ ನನ್ನ ಅಭಿಪ್ರಾಯವಾಗಿದ್ದಿತು.

ಆತ್ಮಜ್ಞಾನವನ್ನು ಹೊಂದುವದು ನಾಲ್ಕನೆಯ ಆಶ್ರಮದಲ್ಲಿಯೇ, ಎಂದರೆ ಸನ್ಯಾಸಾಶ್ರಮದಲ್ಲಿಯೇ, ಸಾಧ್ಯವೆಂಬ ಮೂಢ ತಿಳುವಳಿಕೆಯು ನನಗೆ ಚೆನ್ನಾಗಿ ಗೊತ್ತು. ಆದರೆ ಈ ಅಮೂಲ್ಯವಾದ ಅನುಭವಕ್ಕೆ ಸಿದ್ಧಪಡಿಸಿಕೊಳ್ಳಲು ತಮ್ಮ ಜೀವನದ ಕಡೆಯ ಭಾಗದವರೆಗೂ ಯಾರು ತಡಮಾಡುತ್ತಾರೋ ಅವರು ಪಡೆಯು

ವುದು ಆತ್ಮಜ್ಞಾನವಲ್ಲ; ಕರುಣಾಜನಕವಾದ ಎರಡನೆಯ ಶೈಶವದಂತಿರುವ, ಭೂಮಿಗೆ ಭಾರವಾಗಿ ಬಾಳುವಂತೆ ಮಾಡುವ, ವೃದ್ಧಾಪ್ಯ. ಇದು ಸಾಮಾನ್ಯವಾಗಿ ತಿಳಿದ ವಿಷಯ. ನಾನು ಪಾಠ ಹೇಳಿಕೊಡುತ್ತಿದ್ದಾಗ ಕೂಡ, ಎಂದರೆ ೧೯೧೧–೧೨ರಲ್ಲಿ, ಒಂದುವೇಳೆ ಆಗ ಇದನ್ನು ಇವೇ ಈ ಮಾತುಗಳಲ್ಲಿಯೇ ವ್ಯಕ್ತಪಡಿಸುತ್ತಿರಲಿಲ್ಲವೇ ಹೊರತು ನಾನು ಇದೇ ಅಭಿಪ್ರಾಯವುಳ್ಳವನಾಗಿದ್ದೆನೆಂದು ನನಗೆ ಚೆನ್ನಾಗಿ ನೆನಪಿದೆ.

ಹಾಗಾದರೆ ಈ ಆಧ್ಯಾತ್ಮಿಕ ಶಿಕ್ಷಣವನ್ನು ಕೊಡುವದೆಂತು? ನಾನು ಹುಡುಗರು ಸ್ತೋತ್ರಗಳನ್ನು ಗಟ್ಟಿಮಾಡಿ ಹೇಳುವಂತೆ ಮಾಡಿದೆನು. ನೀತಿಶಿಕ್ಷಣದ ಮೇಲಿನ ಪುಸ್ತಕಗಳಿಂದ ಅವರಿಗೆ ಓದಿದೆನು. ಆದರೆ ಇದರಿಂದ ನನಗೆ ಎಳ್ಳಷ್ಟೂ ತೃಪ್ತಿಯಾಗಲಿಲ್ಲ. ಅವರೊಡನೆ ಸಂಬಂಧವು ನಿಕಟವಾಗುತ್ತಾ ಬಂದಂತೆ ಆಧ್ಯಾತ್ಮಿಕ ಶಿಕ್ಷಣವನ್ನು ಕೊಡಲಾಗುವದು ಪುಸ್ತಕಗಳ ಮೂಲಕವಲ್ಲವೆಂಬುದನ್ನು ನಾನು ಕಂಡೆನು; ಶಾರೀರಿಕ ಶಿಕ್ಷಣವನ್ನು ಶರೀರ ವ್ಯಾಯಾಮದ ಮೂಲಕವೂ ಮಾನಸಿಕ ಶಿಕ್ಷಣವನ್ನು ಮನೋವ್ಯವಸಾಯದ ಮೂಲಕವೂ ಕೊಡುವಂತೆಯೇ ಆಧ್ಯಾತ್ಮಿಕ ಶಿಕ್ಷಣವು ಕೂಡ ಆಧ್ಯಾತ್ಮಿಕ ಅಭ್ಯಾಸಗಳಿಂದಲೇ ಸಾಧ್ಯ. ಈ ಆತ್ಮವ್ಯವಸಾಯಕ್ಕೆ ಶಿಕ್ಷಕನ ಜೀವನದ ರೀತಿ ಮತ್ತು ಅವನ ಶೀಲವೇ ಆಧಾರ. ಶಿಕ್ಷಕನು ಹುಡುಗರ ಮಧ್ಯದಲ್ಲಿರಲಿ ಇಲ್ಲದಿರಲಿ ತನ್ನ ನಡತೆಯ ಸೂಕ್ಷ್ಮಾಂಶಗಳ ವಿಷಯವಾಗಿ ಸದಾ ಜಾಗರೂಕನಾಗಿರಬೇಕು. ನೂರಾರು ಮೈಲಿ ದೂರ ಇರುವ ಗುರುವಿಗೆ ತನ್ನ ಜೀವನದ ರೀತಿಯಿಂದ ತನ್ನ ಶಿಷ್ಯರ ಆತ್ಮದ ಮೇಲೆ ಪರಿಣಾಮವನ್ನುಂಟುಮಾಡುವದು ಸಾಧ್ಯ. ನಾನು ಸುಳ್ಳುಗಾರನಾಗಿದ್ದು ನನ್ನ ಹುಡುಗರಿಗೆ ಸತ್ಯಹೇಳುವದನ್ನು ಕಲಿಸಲೆಳಸುವದು ವ್ಯರ್ಥ. ಹೇಡಿಯಾದ ಶಿಕ್ಷಕನು ತನ್ನ ಶಿಷ್ಯರನ್ನು ಎಂದಿಗೂ ಧೈರ್ಯವಂತರನ್ನಾಗಿ ಮಾಡಲಾರನು. ಇಂದ್ರಿಯನಿಗ್ರಹದ ಗಂಧವನ್ನರಿಯದವನು ತನ್ನ ಬಳಿಯಲ್ಲಿರುವ

ವಿದ್ಯಾರ್ಥಿಗಳಿಗೆ ಸಂಯಮದ ಬೆಲೆಯನ್ನು ಕಲಿಸುವದೆಂತು ? ಆದುದರಿಂದ ನಾನು ನನ್ನ ಬಳಿಯಲ್ಲಿದ್ದ ಹುಡುಗಹುಡುಗಿಯರಿಗೆ ಸದಾ ಆದರ್ಶಪ್ರಾಯನಾಗಿರಬೇಕೆಂಬುದನ್ನು ಕಂಡೆನು. ಹೀಗೆ ನನ್ನ ಶಿಷ್ಯರು ನನ್ನ ಶಿಕ್ಷಕರಾದರು. ಅವರ ಸಲುವಾಗಿಯಾದರೂ ನಾನು ಒಳ್ಳೆಯವನಾಗಿಯೂ ಆರ್ಜವದಿಂದಲೂ ಬಾಳಬೇಕೆಂಬುದನ್ನು ಕಲಿತುಕೊಂಡೆನು. ಟಾಲ್‌ಸ್ಟಾಯ್ ಫಾರ್ಮಿನಲ್ಲಿ ನಾನು ಬರಬರುತ್ತಾ ಹೆಚ್ಚುಹೆಚ್ಚಾಗಿ ಕಟ್ಟಿಗೂ ಸಂಯಮಕ್ಕೂ ನನ್ನನ್ನು ಅಧೀನನನ್ನಾಗಿ ಮಾಡಿಕೊಂಡುದು ಬಹುಮಟ್ಟಿಗೆ ಈ ನನ್ನ ಶಿಷ್ಯರಿಂದಲೇ ಎಂದು ಹೇಳಬಹುದು.

ಇವರಲ್ಲಿ ಒಬ್ಬನು ಅಸಭ್ಯನಾಗಿಯೂ ಅಂಕೆಯಿಲ್ಲದವನಾಗಿಯೂ ಜಗಳಗಂಟನಾಗಿಯೂ ಇದ್ದನು. ಒಂದು ಸಲ ಇವನು ಅತ್ಯಂತವಾಗಿ ಅಂಕೆತಪ್ಪಿದನು. ಇದರಿಂದ ನಾನು ತಾಳ್ಮೆಗೆಟ್ಟೆನು. ನಾನು ನನ್ನ ಹುಡುಗರನ್ನು ಎಂದೂ ಶಿಕ್ಷಿಸುತ್ತಿರಲಿಲ್ಲ. ಆದರೆ ಈ ಸಲ ನನಗೆ ಬಹುಸಿಟ್ಟು ಬಂದಿತು. ನಾನು ಅವನಿಗೆ ಬುದ್ಧಿಹೇಳಲು ಪ್ರಯತ್ನಪಟ್ಟೆನು. ಆದರೆ ಅವನು ಕದಲಲಿಲ್ಲ. ಅಷ್ಟೇ ಅಲ್ಲದೆ ಅವನು ನನ್ನನ್ನು ಮೋಸಗೊಳಿಸಲು ಕೂಡ ಯತ್ನಿಸಿದನು. ಕಡೆಗೆ ನಾನು ಹತ್ತಿರದಲ್ಲಿಯೇ ಇದ್ದ ಗೆರೆಯೆಳೆಯುವ ದುಂಡುಕೋಲೊಂದನ್ನು (ರೂಲರ್) ತೆಗೆದುಕೊಂಡು ಅವನ ತೋಳಿಗೆ ಒಂದು ಏಟು ಕೊಟ್ಟೆನು. ಅವನನ್ನು ಹೊಡೆಯುವಾಗ ನಾನು ಕಂಪಿಸುತ್ತಿದ್ದೆನು. ಇದನ್ನು ಅವನು ನೋಡಿರಬೇಕು. ಇದು ಅವರೆಲ್ಲರಿಗೂ ಕೇವಲ ಹೊಸ ಅನುಭವವಾಗಿದ್ದಿತು. ಆ ಹುಡುಗನು ಅತ್ತು ಕ್ಷಮಾಪಣೆ ಬೇಡಿದನು. ಅವನು ಅತ್ತುದಕ್ಕೆ ಕಾರಣವು ಏಟಿನ ನೋವಲ್ಲ—ಹದಿನೇಳು ವರ್ಷದ ದೃಢಕಾಯನಾದ ಯುವಕನಾಗಿದ್ದುದರಿಂದ ಅವನು ಇಷ್ಟ ತೋರಿದ್ದರೆ ನನ್ನ ಮೇಲೆ ಮುಯ್ಯಿ ತೀರಿಸಿಕೊಳ್ಳಬಹುದಾಗಿದ್ದಿತು—ಈ ಹಿಂಸೆಯ ಉಪಾಯವನ್ನು ಅವಲಂಬಿಸಬೇಕಾಗಿ ಬಂದುದರಿಂದ ನನಗುಂಟಾದ ದುಃಖವನ್ನು ಅವನು ಮನಗಂ

ಡನು. ಈ ಘಟನೆಯಾದಮೇಲೆ ಅವನು ಇನ್ನೆಂದೂ ನನಗೆ ಅವಿಧೇಯನಾಗಿ ನಡೆಯಲಿಲ್ಲ. ಆದರೆ ಆ ಹಿಂಸೆಗಾಗಿ ನಾನು ಇಂದು ಕೂಡ ಪಶ್ಚಾತ್ತಾಪಪಡುತ್ತೇನೆ. ಅಂದು ನಾನು ಅವನಿದಿರಿಗೆ ತೋರಿಸಿದುದು ನನ್ನಲ್ಲಿರುವ ಆತ್ಮಶಕ್ತಿಯನ್ನಲ್ಲ, ನನ್ನ ಪಾಶವಿಕ ವೃತ್ತಿಯನ್ನು—ಇದೇ ನನ್ನ ಶಂಕೆ.

ನಾನು ಯಾವಾಗಲೂ ದೇಹದಂಡನೆಯ ವಿರೋಧಿಯಾಗಿದ್ದೇನೆ. ನಾನು ನನ್ನ ಮಕ್ಕಳಲ್ಲಿ ಒಬ್ಬನಿಗೆ ದೇಹದಂಡನೆಯನ್ನು ಕೊಟ್ಟ ಒಂದೇ ಒಂದು ಸಂದರ್ಭವು ನನಗೆ ನೆನಪಿದೆ. ಆದುದರಿಂದ ದುಂಡುಕೋಲನ್ನು ಉಪಯೋಗಿಸಿದುದು ಸರಿಯೋ ತಪ್ಪೋ ಎಂಬುದನ್ನು ನಿರ್ಣಯಿಸಲು ನನಗೆ ಇಂದಿನವರೆಗೂ ಸಾಧ್ಯವಾಗಿಲ್ಲ. ಪ್ರಾಯಶಃ ಅದು ಅನುಚಿತವಾಗಿದ್ದಿತು. ಏಕೆಂದರೆ ಸಿಟ್ಟೂ ದಂಡಿಸಬೇಕೆಂಬ ಇಚ್ಛೆಯೂ ಇದಕ್ಕೆ ಕಾರಣವಾಗಿದ್ದುವು. ಅದು ಕೇವಲ ನನ್ನ ದುಃಖದ ಸೂಚನೆಯಾಗಿದ್ದರೆ ಅದನ್ನು ನಾನು ಉಚಿತವೆಂದೆಣಿಸುತ್ತಿದ್ದೆನು. ಆದರೆ ಈ ಸಂದರ್ಭದಲ್ಲಿ ಉದ್ದೇಶವು ಮಿಶ್ರವಾಗಿದ್ದಿತು.

ಈ ಪ್ರಸಂಗವು ನಾನು ಯೋಚಿಸುವಂತೆ ಮಾಡಿ ಹುಡುಗರನ್ನು ತಿದ್ದುವವಕ್ಕೆ ಇದಕ್ಕಿಂತ ಉತ್ತಮವಾದ ಮಾರ್ಗವನ್ನು ಕಲಿಸಿಕೊಟ್ಟಿತು. ಹಿಂದೆ ಹೇಳಿದ ಸಂದರ್ಭದಲ್ಲಿ ಈ ಮಾರ್ಗದ ಉಪಯೋಗವು ಎಷ್ಟುಮಟ್ಟಿಗೆ ಸಫಲವಾಗುತ್ತಿದ್ದಿತೋ ನಾನರಿಯೆ. ಆ ಯುವಕನು ಆ ಪ್ರಸಂಗವನ್ನು ಕೆಲವು ದಿವಸದಲ್ಲಿ ಮರೆತನು. ಅವನು ಎಂದೇ ಆಗಲಿ ಹೆಚ್ಚು ಮಾರ್ಪಟ್ಟಂತೆ ಕಾಣೆ. ಆದರೆ ಈ ಘಟನೆಯಿಂದ ನನಗೆ ವಿದ್ಯಾರ್ಥಿಗಳನ್ನು ಕುರಿತು ಉಪಾಧ್ಯಾಯರ ಕರ್ತವ್ಯವು ಮೊದಲಿಗಿಂತ ಚೆನ್ನಾಗಿ ತಿಳಿಯಿತು. ಇದಾದಮೇಲೆ ಹುಡುಗರು ಎಷ್ಟೋ ಸಲ ತಪ್ಪು ಮಾಡಿದರು. ಆದರೆ ನಾನು ದಂಡನೀತಿಯನ್ನೆಂದೂ ಅನುಸರಿಸಲಿಲ್ಲ. ಹೀಗೆ

ನನ್ನ ಕೈಕೆಳಗಿದ್ದ ಬಾಲಕಬಾಲಕಿಯರಿಗೆ ಆಧ್ಯಾತ್ಮಿಕ ಶಿಕ್ಷಣ ವನ್ನು ಕೊಡುವ ಪ್ರಯತ್ನದಲ್ಲಿ ನಾನು ಆತ್ಮಬಲವನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳುತ್ತಾ ಬಂದೆನು.

---

೩೫

# ಗಟ್ಟಿಯೂ ಟೊಳ್ಳೂ

ಮಿ. ಕಾಲನ್‌ಬಾಕರು ಹಿಂದೆ ಎಂದೂ ನನ್ನ ದೃಷ್ಟಿಗೆ ಬೀಳದಿದ್ದ ಪ್ರತಿಯೊಂದರ ಕಡೆಗೂ ಟಾಲ್‌ಸ್ಟಾಯ್ ಫಾರ್ಮ್‌ನಲ್ಲಿ ನನ್ನ ಲಕ್ಷ್ಯವನ್ನು ತಿರುಗಿಸಿದರು. ನಾನು ಆಗಲೇ ಹೇಳಿರುವಂತೆ ಆಶ್ರಮದಲ್ಲಿನ ಕೆಲವು ಹುಡುಗರು ಕೆಟ್ಟವರಾಗಿಯೂ ಅಂಕೆಯಿಲ್ಲದವರಾಗಿಯೂ ಇದ್ದರು. ಇವರಲ್ಲಿ ಕೆಲವು ಮಂದಿ ಸ್ವಚ್ಛಂದವರ್ತಿಗಳು ಕೂಡ ಇದ್ದರು. ಇವರೊಡನೆ ನನ್ನ ಮೂರು ಜನ ಮಕ್ಕಳೂ ಮತ್ತು ಇದೇ ರೀತಿಯ ಇತರ ಹುಡುಗರೂ ಸೇರುತ್ತಿದ್ದರು. ಇದರಿಂದ ಕಾಲನ್‌ಬಾಕರಿಗೆ ಚಿಂತೆಗೆ ಕಾರಣವಾಯಿತು. ಆದರೆ ಅವರ ಲಕ್ಷ್ಯವು ಮುಖ್ಯವಾಗಿ ನನ್ನ ಮಕ್ಕಳನ್ನು ಆ ನಿರಂಕುಶ ಬಾಲಕರೊಡನೆ ಇಟ್ಟಿದ್ದುದರ ಅಯುಕ್ತತೆಯ ಮೇಲೆ ನಟ್ಟಿದ್ದಿತು.

ಒಂದು ದಿನ ಅವರು "ನಿಮ್ಮ ಮಕ್ಕಳನ್ನು ಈ ರೀತಿಯಾಗಿ ಕೆಟ್ಟ ಹುಡುಗರೊಡನೆ ಸೇರಿಸುವದು ನನ್ನ ಮನಸ್ಸಿಗೆ ಒಪ್ಪುವದಿಲ್ಲ. ಅದರಿಂದ ಒಂದೇ ಒಂದು ಪರಿಣಾಮವು ಸಾಧ್ಯ, ಅವರು ಈ ದುಸ್ಸಹವಾಸದಿಂದ ಕೆಟ್ಟುಹೋಗುವರು." ಎಂದು ಬಾಯಿಬಿಟ್ಟು ಹೇಳಿದರು.

ಆಗ ನನಗೆ ಈ ಪ್ರಶ್ನೆಯು ತೊಡಕಾಗಿ ಕಂಡಿತೋ ಇಲ್ಲವೋ ನನಗೆ ಜ್ಞಾಪಕವಿಲ್ಲ. ಆದರೆ ನಾನು ಅವರಿಗೆ ಹೀಗೆ ಹೇಳಿದುದು ನೆನಪಿದೆ:—

"ನನ್ನ ಮಕ್ಕಳಿಗೂ ಈ ಸ್ವೇಚ್ಛಾವೃತ್ತಿಯ ಹುಡುಗರಿಗೂ ನಾನು ಭೇದವನ್ನು ಕಲ್ಪಿಸುವದೆಂತು? ಇಬ್ಬರ ಜವಾಬ್ದಾರಿಯೂ ನನ್ನ ಮೇಲೆ ಒಂದೇ ಸಮನಾಗಿದೆ. ನಾನು ಕರೆದುದರಿಂದಲೇ ಈ ಹುಡುಗರು ಇಲ್ಲಿಗೆ ಬಂದಿರುವದು. ನಾನು ಅವರ ಕೈಗೆ

ಸ್ವಲ್ಪ ಹಣವನ್ನು ಕೊಟ್ಟು ಕಳಿಸಿಬಿಟ್ಟರೆ ಅವರು ಒಡನೆಯೇ ಜೋಹಾನ್ಸ್‌ಬರ್ಗಿಗೆ ಓಡಿಹೋಗಿ ಅಲ್ಲಿ ತಮ್ಮ ಹಳೆಯ ದಾರಿಗೆ ಬೀಳುವರು. ನಿಜ ಹೇಳಬೇಕೆಂದರೆ ತಾವು ಇಲ್ಲಿ ಬಂದಿರುವದರಿಂದ ನನ್ನ ಮೇಲೆ ಉಪಕಾರವನ್ನು ಹೊರಿಸಿರುವೆವೆಂದು ಅವರೂ ಅವರ ಹಿರಿಯರೂ ತಿಳಿದುಕೊಂಡಿರುವದೇನೂ ಅಸಂಭವದ ಮಾತಲ್ಲ. ಇಲ್ಲಿ ಅವರು ಅನೇಕ ಅನಾನುಕೂಲಗಳನ್ನು ಸಹಿಸಬೇಕೆಂಬುದು ನಿಮಗೂ ನನಗೂ ಚೆನ್ನಾಗಿ ತಿಳಿದ ವಿಷಯವೇ. ಆದರೆ ನನ್ನ ಕರ್ತವ್ಯವು ಸ್ಪಷ್ಟವಾಗಿದೆ. ನಾನು ಅವರನ್ನು ಇಲ್ಲಿ ಇಟ್ಟುಕೊಂಡೇ ಇರಬೇಕು. ಆದುದರಿಂದ ನನ್ನ ಮಕ್ಕಳು ಅವಶ್ಯಕವಾಗಿ ಅವರೊಡನೆ ವಾಸಿಸಬೇಕು. ಮತ್ತು ತಾವು ಇತರ ಹುಡುಗರಿಗಿಂತ ಹೆಚ್ಚಿನವರೆಂದು ಇಂದಿನಿಂದ ನನ್ನ ಮಕ್ಕಳು ತಿಳಿದುಕೊಳ್ಳುವದನ್ನು ನಾನು ಅವರಿಗೆ ಕಲಿಸಬೇಕೆಂದು ನೀವೆಂದಿಗೂ ಇಷ್ಟಪಡಲಾರಿರಿ! ಅವರ ಮನಸ್ಸಿನಲ್ಲಿ ಅಂತಹ ಹೆಚ್ಚುಗಾರಿಕೆಯ ಭಾವವನ್ನುಂಟುಮಾಡುವದರಿಂದ ಅವರನ್ನು ತಪ್ಪು ದಾರಿಗೆ ಎಳೆದಂತಾಗುತ್ತದೆ. ಇತರ ಹುಡುಗರೊಡನೆ ಹೀಗೆ ಸೇರುವದು ಅವರಿಗೆ ಒಳ್ಳೆಯ ಶಿಕ್ಷಣವಾಗಿ ಅವರು ತಾವಾಗಿ ತಾವೇ ಒಳಿತನ್ನೂ ಕೆಡಕನ್ನೂ ವಿಂಗಡಿಸಲು ಕಲಿಯುತ್ತಾರೆ. ನಿಜವಾಗಿಯೂ ಅವರಲ್ಲಿ ಒಳ್ಳೆಯ ಅಂಶವೇನಾದರೂ ಇದ್ದರೆ ಅದರ ಪ್ರಭಾವವು ಅವರ ಸಂಗಾತಿಗಳಲ್ಲಿ ತೋರಿಸಿಕೊಳ್ಳುವದೆಂದು ನಾವು ನಂಬಕೂಡದೇಕೆ? ಅದು ಏನೇ ಆಗಿರಲಿ ಆ ಹುಡುಗರನ್ನು ಇಲ್ಲಿ ಇಟ್ಟುಕೊಳ್ಳುವದಲ್ಲದೆ ಬೇರೆ ಮಾರ್ಗವಿಲ್ಲ. ಅದರಲ್ಲಿ ಏನಾದರೂ ಅಪಾಯವಿದ್ದರೆ ನಾವು ಅದನ್ನು ಅನುಭವಿಸಬೇಕು."

ಕಾಲನ್‌ಬಾಕರು ತಲೆಯಲ್ಲಾಡಿಸಿದರು.

ಇದರ ಪರಿಣಾಮವು ಕೆಟ್ಟದಾಯಿತೆಂದು ಹೇಳಲಾಗುವದಿಲ್ಲ. ವಾಸ್ತವಿಕವಾಗಿ ಅವರಿಗೆ ಕೊಂಚಮಟ್ಟಿಗೆ ಲಾಭವಾಯಿತೆಂದು ನನಗೆ ಸ್ಪಷ್ಟವಾಗಿದೆ. ಅವರಲ್ಲಿ ತಾವು ಹೆಚ್ಚಿನವರೆಂಬ

ಭಾವದ ಸುಳಿವೇನಾದರೂ ಇದ್ದಿದ್ದರೆ ಅದು ಅಳಿಸಿಹೋಗಿ ಅವರು ಎಲ್ಲ ತೆರದ ಹುಡುಗರೊಂದಿಗೆ ಬೆರೆಯುವದನ್ನು ಕಲಿತುಕೊಂಡರು. ಇದು ಅವರನ್ನು ಶೀಲಶಿಕ್ಷಣಕ್ಕೆ ಗುರಿಮಾಡಿ ಪರೀಕ್ಷಿಸಿತು. ಒಳ್ಳೆಯ ಹುಡುಗರನ್ನು ಕೆಟ್ಟ ಹುಡುಗರ ಸಹವಾಸದಲ್ಲಿಟ್ಟು ಶಿಕ್ಷಣ ಕೊಡುವದರಿಂದ ಅವರಿಗೇನೂ ಕೆಡಕಾಗುವದಿಲ್ಲವೆಂದು ಈ ಮತ್ತು ಇದೇ ರೀತಿಯ ಇತರ ಅನುಭವಗಳಿಂದ ನನ್ನ ಗೋಚರಕ್ಕೆ ಬಂದಿದೆ. ಆದರೆ ಇಂತಹ ಕಾರ್ಯವನ್ನು ಕೈಕೊಂಡಾಗ ಹುಡುಗರ ತಾಯಿತಂದೆಗಳೂ ಹಿರಿಯರೂ ಅವರನ್ನು ಜಾಗರೂಕತೆಯಿಂದ ಕಾಯುತ್ತಿರಬೇಕು.

ಇದರಿಂದ ಬಾಳೆಯ ಹಣ್ಣಿನ ಗುಡಾಣದಲ್ಲಿ ಬೆಳೆದ ಹುಡುಗರು ಮೋಹದೂರರಾಗಿ ದೋಷರಹಿತವಾಗಿರುವರೆಂಬುದು ನಿತ್ಯಸಿದ್ಧವಲ್ಲ. ಆದರೆ ಬೇರೆ ಬೇರೆ ರೀತಿಯಲ್ಲಿ ಬೆಳೆದ ಹುಡುಗಹುಡುಗಿಯರಿಗೆ ಒಟ್ಟಿಗೆ ಶಿಕ್ಷಣ ಕೊಡುವಾಗ ಅವರ ತಾಯಿತಂದೆಗಳೂ ಶಿಕ್ಷಕರೂ ಅತ್ಯಂತ ಕಠಿಣ ಪರೀಕ್ಷೆಗೆ ಗುರಿಯಾಗುವದೇನೋ ನಿಜ. ಅವರು ಸದಾ ಎಚ್ಚರಿಕೆಯಿಂದಿರಬೇಕು.



೩೬

# ಪ್ರಾಯಶ್ಚಿತ್ತರೂಪವಾದ ಉಪವಾಸ

ಹುಡುಗರನ್ನೂ ಮಕ್ಕಳನ್ನೂ ಸರಿಯಾದ ದಾರಿಯಲ್ಲಿ ಮುಂದಕ್ಕೆ ತಂದು ಅವರಿಗೆ ಶಿಕ್ಷಣವನ್ನು ಕೊಡುವದು ಎಷ್ಟು ಕಷ್ಟವಾದುದೆಂದು ನನಗೆ ದಿನದಿನವೂ ಹೆಚ್ಚುಹೆಚ್ಚು ಸ್ಪಷ್ಟವಾಗಿ ತೋರುತ್ತಾಬಂದಿತು. ನಾನು ನಿಜವಾಗಿಯೂ ಅವರ ಶಿಕ್ಷಕನೂ ಪಾಲಕನೂ ಆಗಿರಬೇಕಾದರೆ ನಾನು ಅವರ ಹೃದಯುವನ್ನು ಪ್ರವೇಶಿಸಬೇಕು. ಅವರ ಸುಖದುಃಖಗಳಲ್ಲಿ ಭಾಗಿಯಾಗಬೇಕು. ಅವರಿದಿರಿಗಿರುವ ತೊಡಕುಗಳನ್ನು ಬಿಡಿಸಲು ಅವರಿಗೆ ನೆರವೀಯಬೇಕು. ಅವರ ಯೌವನದ ಆಸೆಯ ಪ್ರವಾಹವನ್ನು ಯೋಗ್ಯಭೂಮಿಯಲ್ಲಿ ಒಯ್ಯಬೇಕು.

ಸತ್ಯಾಗ್ರಹಿಗಳಲ್ಲಿ ಕೆಲವರಿಗೆ ಬಂದೀಖಾನೆಯಿಂದ ಬಿಡುವಾಗುತ್ತಲು ಟಾಲ್ಸ್ಟಾಯ್ ಫಾರ್ಮ್ ಹೆಚ್ಚು ಕಡಿಮೆ ನಿರ್ಜನವಾಯಿತು. ಅಲ್ಲಿದ್ದವರಲ್ಲಿ ಬಹುಮಂದಿ ಫೀನಿಕ್ಸ್ ಆಶ್ರಮಕ್ಕೆ ಸೇರಿದವರಾಗಿದ್ದರು. ಆದುದರಿಂದ ನಾನು ಅವರನ್ನು ಫೀನಿಕ್ಸಿಗೆ ಕಳಿಸಿದೆನು. ಇಲ್ಲಿ ನಾನು ಒಂದು ಉಗ್ರ ಪರೀಕ್ಷೆಗೊಳಗಾದೆನು. ನಾನು ಜೋಹಾನ್ಸಬರ್ಗಿಗೂ ಫೀನಿಕ್ಸಿಗೂ ಮಧ್ಯೆ ಓಡಾಡುತ್ತಿರಬೇಕಾಗಿದ್ದಿತು. ಒಂದು ಸಲ ನಾನು ಜೋಹಾನ್ಸಬರ್ಗಿನಲ್ಲಿರುವಾಗ ನನಗೆ ಆಶ್ರಮನಿವಾಸಿಗಳಿಬ್ಬರ ನೀತಿಪತನದ ವರ್ತಮಾನವು ಮುಟ್ಟಿತು. ಸತ್ಯಾಗ್ರಹಯುದ್ಧದಲ್ಲಿ ನಮಗೆ ಸೋಲಾದಂತೆ ಕಂಡುಬಂದಿತೆಂಬ ವರ್ತಮಾನವು ಬಂದಿದ್ದರೆ ನನಗೇನೂ ಗಾಬರಿಯಾಗುತ್ತಿರಲಿಲ್ಲ, ಆದರೆ ಈ ಸಂಗತಿಯನ್ನು ಕೇಳಿ ನನಗೆ ಸಿಡಿಲು ಬಡಿದಂತಾಯಿತು. ಆ ದಿನವೇ ನಾನು ರೈಲುಗಾಡಿಯಲ್ಲಿ ಫೀನಿಕ್ಸಿಗೆ ಹೊರಟೆನು. ಕಾಲ್

ಬಾಕರು ನನ್ನೊಡನೆ ಬರುವೆನೆಂದು ಆಗ್ರಹಮಾಡಿದರು. ನಾನೊಬ್ಬನೇ ಹೋಗುವ ಮಾತನ್ನು ಅವರು ಕೇಳಲಿಲ್ಲ. ಏಕೆಂದರೆ ನನ್ನ ಬುದ್ಧಿಭ್ರಮಣೆಗೆ ಕಾರಣವಾದ ಈ ಸಮಾಚಾರವನ್ನು ತಂದವರು ಅವರೇ ಆಗಿದ್ದರು.

ದಾರಿಯಲ್ಲಿ ನನ್ನ ಕರ್ತವ್ಯವು ನನಗೆ ಸ್ಪಷ್ಟವಾಯಿತು— ಅಥವಾ ಸ್ಪಷ್ಟವಾಯಿತೆಂದು ನಾನು ಎಣಿಸಿದೆನು. ತನ್ನ ಪೋಷಣೆಯಲ್ಲಿ ಅಥವಾ ಮೇಲ್ವಿಚಾರಣೆಯಲ್ಲಿರುವ ಹುಡುಗನ ತಪ್ಪಿಗೆ ಯಜಮಾನನು ಅಥವಾ ಶಿಕ್ಷಕನು ಸ್ವಲ್ಪಮಟ್ಟಿಗಾದರೂ ಜವಾಬ್ದಾರನೆಂದು ನನಗೆ ತೋರಿತು. ಆದುದರಿಂದ ಈ ಸಂದರ್ಭದಲ್ಲಿ ನನ್ನ ಬಾಧ್ಯತೆಯು ನನಗೆ ಸ್ಫಟಿಕದಂತೆ ಸ್ಪಷ್ಟವಾಗಿದ್ದಿತು. ನನ್ನ ಹೆಂಡತಿಯು ನನಗೆ ಈ ವಿಷಯವಾಗಿ ಆಗಲೇ ಎಚ್ಚರಿಕೆ ಕೊಟ್ಟಿದ್ದಳು. ಆದರೆ ನಂಬಿಕೆಯ ಸ್ವಭಾವದವನಾದುದರಿಂದ ನಾನು ಅವನ್ನು ಗಮನಿಸಿರಲಿಲ್ಲ. ಆ ತಪ್ಪಿನಲ್ಲಿ ಭಾಗಿಗಳಾದವರು ನನ್ನ ಖೇದವನ್ನೂ ತಮ್ಮ ದೋಷದ ಅಗಾಧತೆಯನ್ನೂ ಮನಗಾಣಲು ನಾನು ಅವರ ತಪ್ಪಿಗಾಗಿ ಪ್ರಾಯಶ್ಚಿತ್ತಮಾಡಿಕೊಳ್ಳುವದೊಂದೇ ಮಾರ್ಗವೆಂದು ನನಗೆ ತೋರಿತು. ಆದುದರಿಂದ ನಾನು ಒಂದು ವಾರ ಉಪವಾಸ ಮಾಡಲೂ ಆಮೇಲೆ ನಾಲ್ಕುವರೆ ತಿಂಗಳು ಒಂದು ಹೊತ್ತು ಮಾತ್ರ ಊಟ ಮಾಡಲೂ ಪ್ರತಿಜ್ಞೆ ಮಾಡಿದೆನು. ಕಾಲನ್‌ಬಾಕರು ನನ್ನನ್ನು ತಡೆಯಲು ಪ್ರಯತ್ನಪಟ್ಟರು. ಆದರೆ ಅದರಿಂದ ಫಲವಾಗಲಿಲ್ಲ. ಕೊನೆಗೆ ಅವರು ಈ ಪ್ರಾಯಶ್ಚಿತ್ತದ ಯುಕ್ತತೆಯನ್ನು ಒಪ್ಪಿಕೊಂಡು ತಾವೂ ಇದರಲ್ಲಿ ನನ್ನೊಡನೆ ಭಾಗಿಗಳಾಗುವದಾಗಿ ಹಟಮಾಡಿದರು. ಅವರ ಸುವಿಮಲ ಪ್ರೇಮದ ಬಲವನ್ನು ನಾನು ಇದಿರಿಸಲಾಗಲಿಲ್ಲ.

ಈ ನಿಶ್ಚಯದಿಂದ ನನ್ನ ಮನಸ್ಸಿನ ಮೇಲಿದ್ದ ದೊಡ್ಡ ಹೊರೆಯು ಉರುಳಿ ನನ್ನ ಚಿಂತೆಯು ಬಹುಮಟ್ಟಿಗೆ ಇಳಿಯಿತು. ತಪ್ಪಿತ

ಸ್ತರ ಮೇಲೆ ನನಗಿದ್ದ ಕ್ರೋಧವು ಅಡಗಿ ಅದು ಅವರ ವಿಷಯದಲ್ಲಿ ನಿಷ್ಕಲ್ಮಷವಾದ ಕರುಣೆಗೆ ಎಡೆಗೊಟ್ಟಿತು. ಹೀಗೆ ಬಹುಮಟ್ಟಿಗೆ ಶಾಂತಮನಸ್ಕನಾಗಿ ನಾನು ಫೀನಿಕ್ಸನ್ನು ತಲಪಿದೆನು. ಇನ್ನೂ ವಿಮರ್ಶಿಸಿ ನಾನು ತಿಳಿಯಬೇಕಾಗಿದ್ದ ಉಳಿದ ಕೆಲವು ವಿವರಗಳನ್ನು ತಿಳಿದುಕೊಂಡೆನು.

ನನ್ನ ಪ್ರಾಯಶ್ಚಿತ್ತದಿಂದ ಎಲ್ಲರೂ ದುಃಖಿತರಾದುದೇನೋ ನಿಜ. ಆದರೆ ಅದು ಅಲ್ಲಿಯ ವಾತಾವರಣವನ್ನು ನಿರ್ಮಲಗೊಳಿಸಿತು. ಪಾಪಕಾರ್ಯವನ್ನೆಸಗುವದು ಎಷ್ಟು ಭಯಂಕರ ವಿಷಯವೆಂಬುದರ ಮನವರಿಕೆಯನ್ನು ಪ್ರತಿಯೊಬ್ಬರೂ ಪಡೆದರು. ಅಲ್ಲಿನ ಹುಡುಗಹುಡುಗಿಯರೊಂದಿಗೆ ನನ್ನನ್ನು ಕೂಡಿಸಿದ್ದ ಸಂಬಂಧವು ಇನ್ನೂ ನಿಕಟವೂ ನೈಜವೂ ಆಯಿತು.

ಈ ಘಟನೆಯಲ್ಲಿಯೋ ಅಂಕುರಿಸಿದ ಪ್ರಸಂಗವೊಂದರಿಂದ ನಾನು ಇದಾದ ಸ್ವಲ್ಪದಿನದ ನಂತರ ಹದಿನಾಲ್ಕು ದಿವಸದ ಉಪವಾಸವನ್ನು ಕೈಕೊಳ್ಳಬೇಕಾಗಿ ಬಂದಿತು. ಇದರಿಂದುಂಟಾದ ಪರಿಣಾಮವು ನನ್ನ ನಿರೀಕ್ಷಣೆಯನ್ನು ಕೂಡ ಮೀರಿಸಿತು.

ತನ್ನ ಶಿಷ್ಯರು ತಪ್ಪುಮಾಡಿದಾಗಲೆಲ್ಲಾ ಉಪವಾಸಮಾಡುವದು ಶಿಕ್ಷಕನ ಕರ್ತವ್ಯವೆಂದು ಈ ಘಟನೆಗಳಿಂದ ಸಾಧಿಸುವದು ನನ್ನ ಆಶಯವಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಈ ಕಟು ಕಷಾಯವೇ ಮದ್ದೆಂದು ನನ್ನ ಅಭಿಪ್ರಾಯ. ಆದರೆ ಇದಕ್ಕೆ ದೃಷ್ಟಿಸೌಷ್ಠವವೂ ಆಧ್ಯಾತ್ಮಿಕ ಯೋಗ್ಯತೆಯೂ ಇದ್ದೇ ತೀರಬೇಕು. ಗುರುಶಿಷ್ಯರಿಗೆ ನೈಜವಾದ ಪ್ರೇಮವಿಲ್ಲದಿದ್ದಲ್ಲಿ, ವಿದ್ಯಾರ್ಥಿಯ ಪಾಪಕರ್ಮವು ಶಿಕ್ಷಕನ ಅಂತಃಕರಣವನ್ನು ತಟ್ಟದಿದ್ದಲ್ಲಿ, ಶಿಷ್ಯನಿಗೆ ಗುರುವಿನಲ್ಲಿ ಭಕ್ತಿಯಿಲ್ಲದಿರುವಲ್ಲಿ, ಉಪವಾಸವು ಯುಕ್ತವಲ್ಲ. ಅಂತಹ ಸಂದರ್ಭದಲ್ಲಿ ಅದರಿಂದ ಹಾನಿಯುಂಟಾದರೂ ಆಗಬಹುದು. ಈ ರೀತಿಯ ಪ್ರಸಂಗಗಳಿಗೆ ಹೀಗೆ ಉಪವಾಸಗಳ

ಸಾಫಲ್ಯದ ವಿಷಯವಾಗಿ ಸಂಶಯಕ್ಕೆಡೆಯಿರುವುದಾದರೂ ಶಿಷ್ಯನ ದೋಷಗಳಿಗೆ ಶಿಕ್ಷಕನ ಜವಾಬ್ದಾರಿಯನ್ನು ಕುರಿತು ಎಳ್ಳಷ್ಟೂ ಸಂದೇಹವಿಲ್ಲ.

ಮೊದಲನೆಯ ಪ್ರಾಯಶ್ಚಿತ್ತವು ನಮ್ಮಲ್ಲಿ ಯಾರಿಗೂ ದುಸ್ಸಹವಾಗಿ ತೋರಲಿಲ್ಲ. ನನ್ನ ದಿನಚರಿಯಲ್ಲಿ ಯಾವ ಕಾರ್ಯವನ್ನೂ ನಿಲ್ಲಿಸಬೇಕಾಗಿ ಬರಲಿಲ್ಲ. ಮತ್ತು ಈ ಪ್ರಾಯಶ್ಚಿತ್ತವು ಮುಗಿಯುವವರೆಗೂ ನಾನು ಕೇವಲ ಹಣ್ಣುಗಳನ್ನೇ ಸೇವಿಸುತ್ತಿದ್ದೆನೆಂಬ ವಿಷಯವನ್ನು ವಾಚಕರ ಗಮನಕ್ಕೆ ತರಬಹುದು. ಎರಡನೆಯ ಉಪವಾಸದ ಕಡೆಯ ಭಾಗವು ನನಗೆ ಕಷ್ಟತರವಾಯಿತು. ಆಗ ನಾನಿನ್ನೂ ರಾಮನಾಮದ ಮಹಾಮಹಿಮೆಯನ್ನರಿತಿರಲಿಲ್ಲ. ಕಷ್ಟವನ್ನು ಸಹಿಸುವ ಶಕ್ತಿಯು ನನ್ನಲ್ಲಿ ಅದಕ್ಕೆ ತಕ್ಕಂತೆ ಕಡಿಮೆಯಾಗಿಯೇ ಇದ್ದಿತು. ಇದಲ್ಲದೆ ನನಗೆ ಉಪವಾಸ ಕಲೆಯ ಜ್ಞಾನವೂ ಇರಲಿಲ್ಲ. ಅದರಲ್ಲಿಯೂ ವಿಶೇಷವಾಗಿ ನೀರು ಎಷ್ಟೇ ಸಪ್ಪೆಯಾಗಿ ಅಸಹ್ಯವಾಗಿ ತೋರಲಿ ಅದನ್ನು ಹೆಚ್ಚಾಗಿ ಕುಡಿಯಬೇಕೆಂಬುದು ನನಗೆ ಗೊತ್ತಿರಲಿಲ್ಲ. ಮತ್ತು ಮೊದಲನೆಯ ಉಪವಾಸವು ಸುಲಭವಾಗಿ ಕಂಡಿದ್ದುದರಿಂದ ನಾನು ಎರಡನೆಯದರ ವಿಷಯದಲ್ಲಿ ಸ್ವಲ್ಪ ಅಜಾಗರೂಕನಾಗಿದ್ದೆನು. ಹೇಗೆಂದರೆ ಮೊದಲನೆಯ ಉಪವಾಸದಲ್ಲಿ ನಾನು ಪ್ರತಿದಿನವೂ ಕ್ಯೂನೆಯವರ ಕ್ರಮದಂತೆ ಸ್ನಾನಮಾಡುತ್ತಿದ್ದೆನು. ಎರಡನೆಯ ಸಲ ಉಪವಾಸ ಮಾಡಿದಾಗ ನಾನು ಎರಡು ಮೂರು ದಿನಗಳಾದ ಮೇಲೆ ಈ ಸ್ನಾನವನ್ನು ಬಿಟ್ಟುಬಿಟ್ಟೆನು. ನೀರು ಕುಡಿದರೆ ಅದು ಅರುಚಿಯಾಗಿ ತೋರಿ ವಾಕರಿಕೆ ಬರುತ್ತಿದ್ದುದರಿಂದ ನಾನು ಅದನ್ನು ಬಹು ಕಡಿಮೆ ಮಾಡಿದೆನು. ಗಂಟಲು ಒಣಗಿ ಧ್ವನಿಯು ಕ್ಷೀಣವಾಗಿ ನಾನು ಕಡೆಕಡೆಗೆ ಕೇವಲ ಉಸಿರಿನಲ್ಲಿ ಮಾತನಾಡುವಂತಾದೆನು. ಹೀಗಾದರೂ ಬರೆವಣಿಗೆಯು ಆವಶ್ಯಕವಿದ್ದಾಗ ನಾನು ಹೇಳಿ ಬರೆಯಿಸಿ ನನ್ನ ಕೆಲಸವನ್ನು ನಡೆಸುತ್ತಿದ್ದೆನು. ರಾಮಾ

ಯಣ ಮುಂತಾದ ಪವಿತ್ರ ಗ್ರಂಥಗಳನ್ನು ದಿನವೂ ತಪ್ಪದೆ ಶ್ರವಣ ಮಾಡುತ್ತಿದ್ದೆನು. ಅತ್ಯಗತ್ಯ ವಿಷಯಗಳನ್ನು ಕುರಿತು ವಿಚಾರ ಮಾಡಿ ಸಲಹೆ ಕೊಡಲು ಸಾಕಾದಷ್ಟು ಚೈತನ್ಯವು ಕೂಡ ನನ್ನಲ್ಲಿದ್ದಿತು.



೩೭

# ಗೋಖಲೆಯವರನ್ನು ನೋಡುವದಕ್ಕಾಗಿ

ದಕ್ಷಿಣ ಆಫ್ರಿಕಕ್ಕೆ ಸಂಬಂಧಪಟ್ಟ ಅನೇಕ ನೆನಹುಗಳನ್ನು ನಾನು ಬಿಟ್ಟುಬಿಡಬೇಕು.

೧೯೧೪ರಲ್ಲಿ ಸತ್ಯಾಗ್ರಹ ಕದನವು ಮುಗಿದಮೇಲೆ ಗೋಖಲೆಯವರಿಂದ ನಾನು ಲಂಡನಿನ ಮೂಲಕ ಸ್ವದೇಶಕ್ಕೆ ಹಿಂತಿರುಗಬೇಕೆಂದು ಆಜ್ಞಾಪತ್ರವು ತಲಪಿತು. ಆದುದರಿಂದ ಕಸ್ತೂರಿಬಾಯಿಯೂ ಕಾಲನ್‌ಬಾಕರೂ ನಾನೂ ಜುಲೈ ತಿಂಗಳಲ್ಲಿ ಸೀಮೆಗೆ ಪಯಣ ಬೆಳೆಸಿದೆವು.

ಸತ್ಯಾಗ್ರಹಯುದ್ಧಕಾಲದಲ್ಲಿ ನಾನು ಮೂರನೆಯ ದರ್ಜೆಯಲ್ಲಿ ಪ್ರಯಾಣಮಾಡತೊಡಗಿದ್ದೆನು. ಆದುದರಿಂದ ನಾನು ಈ ಯಾನಕ್ಕೆ ಮೂರನೆಯ ತರಗತಿಯ ಟಿಕೆಟನ್ನೇ ಕೊಂಡೆನು. ಆದರೆ ಈ ಸಂಚಾರಪಥದ ಜಹಜಿನಲ್ಲಿ ಮೂರನೆಯ ತರಗತಿಯವರಿಗೆ ಮಾಡಿದ್ದ ಏರ್ಪಾಟಿಗೂ ಹಿಂದುಸ್ತಾನದ ಸಮುದ್ರತೀರದಲ್ಲಿ ಸಂಚರಿಸುವ ಹಡಗುಗಳಲ್ಲಾಗಲಿ ಅಲ್ಲಿನ ರೈಲುಗಳಲ್ಲಾಗಲಿ ಈ ದರ್ಜೆಯ ಪ್ರಯಾಣಿಕರಿಗೆ ಕೊಡುವ ಸೌಕರ್ಯಕ್ಕೂ ಬಹು ಭೇದವುಂಟು. ಹಿಂದುಸ್ತಾನದ ಪ್ರಯಾಣದಲ್ಲಾದರೋ ಕುಳಿತುಕೊಳ್ಳುವದಕ್ಕೇ ಸಾಕಾದಷ್ಟು ಸ್ಥಳವಿರುವದಿಲ್ಲ. ಇನ್ನು ಮಲಗಿಕೊಳ್ಳುವದರ ಮಾತೇನು? ಶುಚಿಯೂ ಬಹು ಕಡಿಮೆ. ಆದರೆ ನಾವು ಲಂಡನಿಗೆ ಪಯಣಮಾಡಿದಾಗ ಸಾಕಾದಷ್ಟು ಸ್ಥಳವಿದ್ದಿತು. ಅದು ಶುಚಿಯಾಗಿಯೂ ಇದ್ದಿತು. ಇದಲ್ಲದೆ ಜಹಜಿನ ಸಂಸ್ಥೆಯವರು ನಮಗೆ ಪ್ರತ್ಯೇಕವಾಗಿ ಅನುಕೂಲಗಳನ್ನು ಒದಗಿಸಿದ್ದರು. ನಮಗಾಗಿ ಪ್ರತ್ಯೇಕವಾದ ಕಕ್ಕಸವನ್ನು ಏರ್ಪಡಿಸಿದ್ದರು. ನಾವು ಹಣ್ಣುಗಳನ್ನು ಮಾತ್ರ ತಿನ್ನುತ್ತಿದ್ದುದರಿಂದ ನಮಗೆ

ಹಣ್ಣುಗಳನ್ನೂ ಬಾದಾಮಿ ಖರ್ಜೂರ ಮುಂತಾದವನ್ನೂ ಒದಗಿಸಬೇಕೆಂದು ಜಹಜಿನ ಪಾರುಪತ್ಯೇಗಾರನಿಗೆ ಆಜ್ಞಾಪಿಸಿದ್ದರು. ಸಾಧಾರಣವಾಗಿ ಮೂರನೆಯ ದರ್ಜೆಯ ಪ್ರಯಾಣಿಕರಿಗೆ ಹಣ್ಣುಹಂಪಲುಗಳನ್ನು ಕೊಡುವದೇ ಅಪೂರ್ವ. ಈ ಸೌಕರ್ಯಗಳಿಂದ ನಾವು ಜಹಜಿನಲ್ಲಿದ್ದ ಹದಿನೆಂಟು ದಿವಸಗಳು ಸುಖವಾಗಿ ಕಳೆದುವು.

ಈ ಯಾನದಲ್ಲಿ ನಡೆದ ಕೆಲವು ಘಟನೆಗಳು ಬರೆಯುತಕ್ಕವಾಗಿವೆ. ಕಾಲನ್‌ಬಾಕರಿಗೆ ದುರ್ಬೀನುಗಳೆಂದರೆ ಬಹು ಇಷ್ಟ ಅವರ ಬಳಿ ಬೆಲೆಬಾಳುವ ಒಂದೆರಡು ದುರ್ಬೀನುಗಳಿದ್ದುವು. ಇವುಗಳಲ್ಲಿ ಒಂದರ ವಿಷಯವಾಗಿ ನಾವು ದಿನವೂ ಚರ್ಚಿಸುತ್ತಿದ್ದೆವು ಇದನ್ನಿಟ್ಟುಕೊಂಡಿರುವದು ನಾವು ಸಾಧಿಸಬೇಕೆಂದಿದ್ದ ಸರಳ ಜೀವನದ ಆದರ್ಶದೊಡನೆ ಒಪ್ಪುವದಿಲ್ಲವೆಂದು ನಾನು ಅವರಿಗೆ ತಿಳಿಯಹೇಳಲು ಯತ್ನಿಸುತ್ತಿದ್ದೆನು. ಒಂದು ದಿನ ನಾವು ನಮ್ಮ ಕೊಠಡಿಯ ಸಮುದ್ರದ ಕಡೆಯ ಕಿಟಕಿಯ ಬಳಿ ನಿಂತಿರುವಾಗ ನಮ್ಮ ಚರ್ಚೆಯು ಅತಿ ತೀಕ್ಷ್ಣವಾಗಿ ನಾನು

"ಇದು ನಮ್ಮ ಮಧ್ಯೆ ಜಗಳಕ್ಕೆ ಕಾರಣವಾಗಿರಗೊಡುವದಕ್ಕಿಂತ ಇದನ್ನು ಸಮುದ್ರಕ್ಕೆ ಬಿಸುಟು ತೊಲಗಿಸಬಾರದೇಕೆ?" ಎಂದೆನು.

"ಅವಶ್ಯವಾಗಿ ಆ ಹಾಳು ಪದಾರ್ಥವನ್ನು ಎಸೆದುಬಿಡಿರಿ." ಎಂದರು ಕಾಲನ್‌ಬಾಕರು.

"ನಾನು ಹೇಳುವದು ಬರಿಯ ಮಾತಲ್ಲ."

"ನಾನು ಹೇಳುವದೂ ಹಾಗೆಯೇ." ಎಂದು ಅವರು ಒಡನೆಯೇ ಉತ್ತರವಿತ್ತರು.

ಮರುಕ್ಷಣವೇ ನಾನು ಅದನ್ನು ಸಮುದ್ರಕ್ಕೆ ಬಿಸುಟೆನು. ಅದರ ಕ್ರಯ ಸುಮಾರು ಏಳು ಪೌಂಡು. ಅದರ ಬೆಲೆಯಿದ್ದುದು

ಅದರ ಕ್ರಿಯದಲ್ಲಲ್ಲ, ಕಾಲನ್‌ಬಾಕರಿಗೆ ಅದರಲ್ಲಿದ್ದ ಮೋಹದಲ್ಲಿ. ಆದರೆ ಅದು ತೊಲಗಿದಮೇಲೆ ಅವರು ಅದಕ್ಕೆ ಎಂದೂ ಪಶ್ಚಾತ್ತಾಪಪಡಲಿಲ್ಲ.

ಕಾಲನ್‌ಬಾಕರಿಗೂ ನನಗೂ ಮಧ್ಯೆ ನಡೆದ ಅನೇಕ ಘಟನೆಗಳಲ್ಲಿ ಇದು ಒಂದು.

ಪ್ರತಿ ದಿನವೂ ನಾವು ಈ ರೀತಿಯಾಗಿ ಏನಾದರೂ ಹೊಸ ಅರಿವನ್ನು ಪಡೆಯಬೇಕಾಗಿದ್ದಿತು. ಏಕೆಂದರೆ ನಾವಿಬ್ಬರೂ ಸತ್ಯಪಥಗಾಮಿಗಳಾಗಿರಲು ಪ್ರಯತ್ನಪಡುತ್ತಿದ್ದೆವು. ಸತ್ಯಾನ್ವೇಷಣದಲ್ಲಿ ಕ್ರೋಧ, ಸ್ವಾರ್ಥ, ದ್ವೇಷ ಮುಂತಾದುವೆಲ್ಲಾ ಸ್ವಾಭಾವಿಕವಾಗಿಯೇ ನಶಿಸುತ್ತವೆ. ಏಕೆಂದರೆ ಹಾಗಿಲ್ಲದೆ ಸತ್ಯವನ್ನು ಸಾಧಿಸಲಾಗುವದಿಲ್ಲ. ರಾಗದ್ವೇಷಗಳಿಗೀಡಾದ ಮನುಷ್ಯನಿಗೆ ಸದಾಶಯಗಳಿರಬಹುದು, ಅವನು ಸತ್ಯಭಾಷಿಯಾಗಿಯೇ ಇರಬಹುದು. ಆದರೂ ಅವನಿಗೆ ಸ್ವತಂತ್ರ ಸತ್ಯವೆಂದಿಗೂ ದೊರಕುವದಿಲ್ಲ. ಸಫಲವಾದ ಸತ್ಯಾನ್ವೇಷಣಕ್ಕೆ ರಾಗದ್ವೇಷ, ಸುಖದುಃಖ ಮುಂತಾದ ದ್ವಂದ್ವಗಳಿಂದ ಬಿಡುಗಡೆಯಾಗಬೇಕು.

ನಾವು ಪಯಣ ಬೆಳೆಸಿದಾಗ ನನ್ನ ಉಪವಾಸವು ಮುಗಿದು ಬಹುಕಾಲವಾಗಿರಲಿಲ್ಲ. ನನಗೆ ಇನ್ನೂ ನನ್ನ ಸಾಮಾನ್ಯವಾದ ಶಕ್ತಿಯು ಬಂದಿರಲಿಲ್ಲ. ವ್ಯಾಯಾಮದಿಂದ ಹಸಿವಾಗುವದಕ್ಕಾಗಿ ನಾನು ಜಹಜಿನ ಕೈಸಾಲೆಯಲ್ಲಿ ತಿರುಗಾಡುತ್ತಿದ್ದೆನು. ಆದರೆ ಈ ವ್ಯಾಯಾಮವು ಕೂಡ ನನ್ನ ಯೋಗ್ಯತೆಗೆ ಮೀರಿದುದಾಗಿದ್ದು ನನ್ನ ಕಾಲಿನ ಮೀನುಖಂಡಗಳು ನೋಯುತ್ತಿದ್ದುವು. ಲಂಡನ್ ನಗರವನ್ನು ತಲಪಿದಾಗ ಈ ಬಾಧೆಯು ಕುಂದುವದಕ್ಕೆ ಬದಲಾಗಿ ಹೆಚ್ಚಿತು. ಅಲ್ಲಿ ನನಗೆ ಡಾ. ಜೀವರಾಜ ಮಹೆತಾರವರ ಪರಿಚಯವಾಯಿತು. ಅವರಿಗೆ ನಾನು ಉಪವಾಸಮಾಡಿದುದನ್ನೂ ಆಮೇಲೆ ನನಗೆ ಕಾಲುನೋವು ಉಂಟಾದುದನ್ನೂ ಹೇಳಿದೆನು. ಅದಕ್ಕೆ ಅವರು "ನೀನು ಇನ್ನು ಕೆಲವು ದಿವಸ ಪೂರ್ಣವಿಶ್ರಾಂತಿ ಪಡೆಯ

ದಿದ್ದರೆ ನಿನ್ನ ಕಾಲುಗಳು ಪೂರ್ತಿಯಾಗಿ ಊನವಾಗುವ ಸಂಭವ ಏದೆ." ಎಂದರು.

ದೀರ್ಘೋಪವಾಸದಿಂದ ಏಳುತ್ತಿರುವವನು ಶಕ್ತಿಯನ್ನು ಪುನಃ ಸಂಪಾದಿಸಲು ಆತುರನಾಗಿರಕೂಡದೆಂದೂ ಅವನು ತನ್ನ ಹಸಿವಿನಮೇಲೆ ಅಂಕೆಯನ್ನಿಟ್ಟುಕೊಂಡಿರಬೇಕೆಂದೂ ನನಗೆ ತಿಳಿದುದು ಆಗಲೇ. ಉಪವಾಸಮಾಡುವದಕ್ಕಿಂತ ಅದನ್ನು ಮುರಿಯುವದಕ್ಕೆ ಹೆಚ್ಚು ಎಚ್ಚರಿಕೆಯೂ ಬಹುಶಃ ಹೆಚ್ಚು ಅಂಕೆಯೂ ಆವಶ್ಯಕ.

ಮಹಾಯುದ್ಧವು ಯಾವ ಕ್ಷಣವಾದರೂ ಮೊದಲಾಗಬಹುದೆಂಬ ಸಮಾಚಾರವನ್ನು ನಾವು ಮೆಡೀರಾ [ಪೋರ್ಚುಗಲ್ ದೇಶಕ್ಕೆ ಸೇರಿ ಅಟ್ಲಾಂಟಿಕ್ ಸಾಗರದಲ್ಲಿರುವ ದ್ವೀಪಸ್ತೋಮ] ದಲ್ಲಿ ಕೇಳಿದೆವು. ಇಂಗ್ಲಿಷ್ ಕಾಲುವೆ (ಇಂಗ್ಲೆಂಡಿಗೂ ಫ್ರಾನ್ಸ್ ದೇಶಕ್ಕೂ ಮಧ್ಯೆ ಇರುವ ಜಲಸಂಧಿ)ಯನ್ನು ಒಳಹೋಗುತ್ತಲೇ ನಮಗೆ ಮಹಾಯುದ್ಧವು ವಾಸ್ತವಿಕವಾಗಿ ಪ್ರಾರಂಭವಾದ ಸಂಗತಿಯು ತಿಳಿಯಿತು. ನಮ್ಮನ್ನು ಅಲ್ಲಿ ಸ್ವಲ್ಪಕಾಲ ತಡೆದರು. ಕಾಲುವೆಯಲ್ಲೆಲ್ಲಾ ಗುಪ್ತವಾಗಿ ಹರಡಿದ್ದ ಮದ್ದಿನ ಗುಂಡುಗಳಿಗೆ ತಾಕದಂತೆ ಜಹಜನ್ನು ನಡೆಸುವದು ಕಷ್ಟದ ಕೆಲಸವಾಗಿದ್ದಿತು. ಸೌಥಾಂಪ್ಟನಿಗೆ ಸೇರಲು ಎರಡು ದಿವಸ ಹಿಡಿಯಿತು.

ಯುದ್ಧಘೋಷವಾದುದು ಆಗಸ್ಟ್ ೪ರಲ್ಲಿ. ನಾವು ೬ನೆಯ ತಾರೀಖು ಲಂಡನನ್ನು ಮುಟ್ಟಿದೆವು.



೩೮

# ಯುದ್ಧದಲ್ಲಿ ನಾನು ಭಾಗಿಯಾದುದು

ಗೋಖಲೆಯವರು ಪ್ಯಾರಿಸಿಗೆ ಹೋಗಿದ್ದರು. ಅವರು ಸದ್ಯಕ್ಕೆ ಅಲ್ಲಿಯೇ ನಿಲ್ಲಬೇಕಾಗಿರುವದೆಂದು ನಾನು ವಿಲಾಯತಿಯನ್ನು ಮುಟ್ಟಿದಮೇಲೆ ನನಗೆ ತಿಳಿಯಬಂದಿತು. ಮತ್ತು ಲಂಡನಿಗೂ ಪ್ಯಾರಿಸಿಗೂ ಮಧ್ಯೆ ಓಡಾಟವು ನಿಲಿಸಲ್ಪಟ್ಟಿದ್ದುದರಿಂದ ಅವರು ಯಾವಾಗ ಹಿಂತಿರುಗುವರೆಂಬುದು ಗೊತ್ತಾಗುವಂತಿರಲಿಲ್ಲ. ಅವರನ್ನು ನೋಡದೆಯೇ ಸ್ವದೇಶಕ್ಕೆ ಹಿಂತಿರುಗಲು ನನಗೆ ಇಷ್ಟವಿರಲಿಲ್ಲ. ಆದರೆ ಅವರು ಯಾವಾಗ ಬರುವರೆಂಬುದನ್ನು ನಿಶ್ಚಯಪೂರ್ವಕವಾಗಿ ಯಾರೂ ತಿಳಿಸುವಂತಿರಲಿಲ್ಲ.

ಹಾಗಾದರೆ ಈ ಮಧ್ಯೆ ನಾನು ಮಾಡುವದೇನು ? ಯುದ್ಧದ ವಿಷಯದಲ್ಲಿ ನನ್ನ ಕರ್ತವ್ಯವೇನು ? ಕಾರಾಗೃಹದಲ್ಲಿ ನನ್ನ ಜೊತೆಯ ಬಂದಿಯಾಗಿದ್ದ ಮತ್ತು ಸತ್ಯಾಗ್ರಹಿಗಳಾಗಿದ್ದ ಸೊರಾಬ್ಜೀ ಅಡಾಜಣಿಯಾರವರು ಆಗ ಲಂಡನಿನಲ್ಲಿ ಬ್ಯಾರಿಸ್ಟರ್ ಪರೀಕ್ಷೆಗೆ ಓದುತ್ತಿದ್ದರು. ಅತ್ಯುತ್ತಮ ಸತ್ಯಾಗ್ರಹಿಗಳಲ್ಲಿ ಇವರೊಬ್ಬರಾಗಿದ್ದುದರಿಂದ ಇವರು ದಕ್ಷಿಣ ಆಫ್ರಿಕಕ್ಕೆ ಹಿಂತಿರುಗಿದಮೇಲೆ ನನ್ನ ಸ್ಥಾನವನ್ನು ವಹಿಸಬೇಕೆಂಬ ಉದ್ದೇಶದಿಂದ ಇವರು ಸೀಮೆಗೆ ಬ್ಯಾರಿಸ್ಟರ್ ಆಗುವದಕ್ಕಾಗಿ ಕಳಿಸಲ್ಪಟ್ಟಿದ್ದರು. ಡಾ. ಪ್ರಾಣಜೀವನ ಮಹೆತಾರವರು ಇವರ ವೆಚ್ಚವನ್ನು ವಹಿಸುತ್ತಿದ್ದರು. ವಿಲಾಯತಿಯಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದ ಡಾ. ಜೀವರಾಜ ಮಹೆತಾರವರೇ ಮುಂತಾದವರೊಡನೆ ಇವರ ಮೂಲಕವಾಗಿ ಮತ್ತು ಇವರ ಜೊತೆಯಲ್ಲಿ ಸಂಭಾಷಣೆಯನ್ನು ನಡೆಸಿದೆನು. ಅವರೆಲ್ಲರ ಸಲಹೆಯನ್ನೂ ತೆಗೆದುಕೊಂಡು ಬ್ರಿಟಿಷ್ ದ್ವೀಪಗಳಲ್ಲಿರುವ ಭಾರತೀಯರ ಸಭೆಯೊಂದನ್ನು ಏರ್ಪಡಿಸಿದುದಾಯಿತು. ಆ ಸಭೆಗೆ ನನ್ನ ಅಭಿಪ್ರಾಯವನ್ನು ತಿಳಿಸಿದೆನು.

ವಿಲಾಯತಿಯಲ್ಲಿರುವ ಭಾರತೀಯರು ಯುದ್ಧದಲ್ಲಿ ತಮ್ಮ ಭಾಗವನ್ನು ಹೊರಬೇಕೆಂದು ನನಗೆ ತೋರುತ್ತಿದ್ದಿತು. ಆಂಗ್ಲ ವಿದ್ಯಾರ್ಥಿಗಳು ಸೈನ್ಯಕ್ಕೆ ಸೇರಲು ತಾವಾಗಿಯೇ ಮುಂದೆ ಬಂದಿದ್ದರು. ಭಾರತೀಯರು ಇವರ ಹಿಂದೆ ಬೀಳುವದು ಸರಿಯಲ್ಲವೆಂದು ನನ್ನ ಅಭಿಪ್ರಾಯವಾಗಿದ್ದಿತು. ಈ ರೀತಿಯ ತರ್ಕಕ್ಕೆ ಅನೇಕ ಆಕ್ಷೇಪಣೆಗಳನ್ನು ತಂದರು: "ಭಾರತೀಯರೆಲ್ಲಿ, ಆಂಗ್ಲೇಯರೆಲ್ಲಿ! ನಾವು ಗುಲಾಮರು, ಅವರು ಒಡೆಯರು. ಒಡೆಯನಿಗೆ ಸಂಕಟವೊದಗಿದಾಗ ಗುಲಾಮನು ಅವನಿಗೆ ಸಹಾಯಮಾಡುವದೆಂತು? ಸ್ವಾತಂತ್ರ್ಯವನ್ನು ಬಯಸುತ್ತಿರುವ ಗುಲಾಮನು ತನ್ನ ಒಡೆಯನ ಸಂಕಟಕಾಲದಲ್ಲಿ ತನ್ನ ಬಂಧವಿಮೋಚನೆಯನ್ನೆಸಗುವದು ಅವನ ಕರ್ತವ್ಯವಲ್ಲವೇನು?" ಎಂದು ವಾದಿಸಿದರವರು. ಆಗ ಈ ತರ್ಕವು ನನ್ನ ಮನಸ್ಸಿಗೆ ಒಪ್ಪಲಿಲ್ಲ. ಭಾರತೀಯನಿಗೂ ಆಂಗ್ಲೇಯನಿಗೂ ದೊಡ್ಡಸ್ತಿಕೆಯಲ್ಲಿರುವ ವ್ಯತ್ಯಾಸವನ್ನು ನಾನು ಅರಿತಿದ್ದೆನು. ಆದರೆ ಅವರು ನಮ್ಮನ್ನು ಕೇವಲ ದಾಸ್ಯಸ್ಥಿತಿಯಲ್ಲಿಟ್ಟಿದ್ದರೆಂದು ನಾನು ಎಣಿಸಿರಲಿಲ್ಲ. ಈ ಸ್ಥಿತಿಗೆ ಬ್ರಿಟಿಷರ ರಾಜ್ಯಪದ್ಧತಿಗಿಂತ ಕೆಲವು ಬ್ರಿಟಿಷ್ ಅಧಿಕಾರಿಗಳೇ ಹೆಚ್ಚಾಗಿ ಕಾರಣರೆಂದೂ ಅವರನ್ನು ನಾವು ಪ್ರೇಮದಿಂದ ಪರಿವರ್ತಿಪಬಹುದೆಂದೂ ನನಗೆ ತೋರುತ್ತಿದ್ದಿತು. ಬ್ರಿಟಿಷರ ಸಹಾಯಸಹಕಾರಗಳಿಂದ ನಾವು ನಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕೆಂದಿದ್ದರೆ ಅವರ ಕಷ್ಟಕಾಲದಲ್ಲಿ ಅವರಿಗೆ ನೆರವಿತ್ತು ಅವರ ಸಹಾಯವನ್ನು ಗೆಲ್ಲುವದು ನಮ್ಮ ಕರ್ತವ್ಯವೆಂದು ನನ್ನ ಅಭಿಪ್ರಾಯವಾಗಿದ್ದಿತು. ಅವರ ರಾಜ್ಯಪದ್ಧತಿಯು ದೋಷಯುತವಾಗಿ ಇದ್ದಿತಾದರೂ ಅದು ಇಂದು ಕಾಣುವಂತೆ ಆಗ ನನಗೆ ಸಹನಾತೀತವಾಗಿ ಕಾಣಬರಲಿಲ್ಲ. ಆದರೆ ಇಂದು ನನಗೆ ಆ ಪದ್ಧತಿಯಲ್ಲಿದ್ದ ವಿಶ್ವಾಸವು ಮಾಯವಾಗಿ ನಾನು ಬ್ರಿಟಿಷ್ ಸರಕಾರದೊಡನೆ ಸಹಕರಿಸಲು ಒಪ್ಪದಿದ್ದರೆ ಆಗ ಈ ಪದ್ಧತಿಯಲ್ಲಿ ಮಾತ್ರವೆ ಅಲ್ಲದೆ ಅಧಿಕಾರಿಗಳಲ್ಲಿ ಕೂಡ ನಂಬಿಕೆಗೆಟ್ಟ ಆ ಮಿತ್ರರು ಹೇಗೆ ಸಹಕರಿಸಿಯಾರು?

ಇದಿರು ಪಕ್ಷದ ಮಿತ್ರರು ಭಾರತೀಯರಿಗೆ ಕೊಡಬೇಕಾದ ಹಕ್ಕುಗಳನ್ನು ಉದ್ಘೋಷಿಸಲೂ ಭಾರತೀಯರ ಪರಿಸ್ಥಿತಿಯನ್ನು ಉತ್ತಮಗೊಳಿಸಲೂ ಇದೇ ಸಮಯವೆಂದು ಅಭಿಪ್ರಾಯಪಟ್ಟರು.

ಇಂಗ್ಲೆಂಡಿನ ಆಪತ್ತಿನಿಂದ ನಾವು ಲಾಭಪಡೆಯಬಾರದೆಂದೂ ಯುದ್ಧ ನಡೆಯುತ್ತಿರುವಾಗ ನಮ್ಮ ಹಕ್ಕುಗಳಿಗಾಗಿ ಬ್ರಿಟಿಷರನ್ನು ಒತ್ತಾಯಮಾಡದೆ ಇರುವದೇ ಹೆಚ್ಚು ಯೋಗ್ಯವಾದ ಮತ್ತು ದೂರದೃಷ್ಟಿಯ ನಡೆವಳಿಕೆಯೆಂದೂ ನಾನು ಯೋಚಿಸಿದೆನು. ಆದುದರಿಂದ ನನ್ನ ಸಲಹೆಗನುಸಾರವಾಗಿ ನಾನು ಇಷ್ಟವಿದ್ದವರು ಸ್ವಯಂಸೇವಕರಾಗಿ ಸೇರಬಹುದೆಂದು ಆಹ್ವಾನವಿತ್ತೆನು. ಅನೇಕ ಜನರು ತಮ್ಮ ಹೆಸರುಗಳನ್ನು ಕೊಟ್ಟರು. ಇವರಲ್ಲಿ ಎಲ್ಲಾ ಪ್ರಾಂತದವರೂ ಎಲ್ಲಾ ಧರ್ಮದವರೂ ಇದ್ದರು. ಈ ವಿಷಯಗಳನ್ನೂ ಮತ್ತು ನಮ್ಮ ಪ್ರಾರ್ಥನೆಯನ್ನು ಸ್ವೀಕರಿಸುವದಕ್ಕಿಂತ ಮುಂಚೆ ನಾವು ಶಶ್ರೂಷಾಕ್ರಮದಲ್ಲಿ ಶಿಕ್ಷಣ ಪಡೆಯಬೇಕೆಂದು ಸರ್ಕಾರವಾದರೆ ನಾವು ಹಾಗೆ ಶಿಕ್ಷಿತರಾಗಲು ಸಿದ್ಧರಾಗಿರುವೆವೆಂಬುದನ್ನೂ ತಿಳಿಸಿ ನಾನು ಲಾರ್ಡ್ ಕ್ರ್ಯೂ*ರವರಿಗೆ ಕಾಗದವನ್ನು ಬರೆದೆನು.

ಮೊದಲು ನಿರ್ದ್ಯಥರಾಗಿ ಆಮೇಲೆ ಅವರು ನಮ್ಮ ಸಹಾಯವನ್ನು ಅಂಗೀಕರಿಸಿ ಸಾಮ್ರಾಜ್ಯಕ್ಕೆ ಸಂಕಟವೊದಗಿರುವಾಗ ನೆರವೀಯಲು ಸಿದ್ಧರಾಗಿದ್ದುದಕ್ಕಾಗಿ ನಮಗೆ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಸ್ವಯಂಸೇವಕರು ಗಾಯ ಹೊಂದಿದವರಿಗೆ ಚಿಕಿತ್ಸೆಮಾಡುವ ಕ್ರಮದ ಅಭ್ಯಾಸವನ್ನು ಪ್ರಸಿದ್ಧರಾದ ಡಾ. ಕ್ಯಾಂಟ್ಲಿಯವರ ಬಳಿ ಕಲಿಯತೊಡಗಿದರು. ಈ

---

* ಲಾರ್ಡ್ ಕ್ರ್ಯೂ : ಇವರು ಆ ಸಮಯದಲ್ಲಿ ಬ್ರಿಟಿಷ್ ಮಂತ್ರಿಮಂಡಲದಲ್ಲಿ ಹಿಂದುಸ್ತಾನದ ಮೇಲ್ವಿಚಾರಣೆಯನ್ನು ವಹಿಸಿದ್ದ ಸಚಿವರು.

ಅಭ್ಯಾಸವು ಆರು ವಾರ ಮಾತ್ರ ನಡೆದರೂ ಪ್ರಥಮ ಚಿಕಿತ್ಸೆಯ ಕೆಲಸಗಳನ್ನೆಲ್ಲಾ ಒಳಗೊಂಡಿದ್ದಿತು.

ನಮ್ಮ ತರಗತಿಯಲ್ಲಿ ಸುಮಾರು ೮೦ ಮಂದಿ ಇದ್ದರು. ಆರು ವಾರಗಳಲ್ಲಿ ನಮ್ಮೆಲ್ಲರಿಗೂ ಪರೀಕ್ಷೆಯಾಗಿ ಒಬ್ಬನನ್ನುಳಿದು ಎಲ್ಲರೂ ತೇರ್ಗಡೆಯಾದರು. ಇವರಿಗೆ ಸರಕಾರದವರು ಸೈನಿಕರ ಕವಾತನ್ನೂ ಇತರ ಶಿಕ್ಷಣವನ್ನೂ ಹೇಳಿಕೊಡಲು ಏರ್ಪಾಟು ಮಾಡಿದರು. ಈ ಕೆಲಸವು ಕರ್ನಲ್ ಬೇಕರರಿಗೆ ವಹಿಸಲ್ಪಟ್ಟಿತು.

ಆ ಕಾಲದಲ್ಲಿ ಲಂಡನಿನ ದೃಶ್ಯವು ನೋಡತಕ್ಕುದಾಗಿದ್ದಿತು. ಜನರು ಗಾಬರಿಗೊಂಡಿರಲಿಲ್ಲ. ಎಲ್ಲರೂ ಯಥಾಶಕ್ತಿ ಸಹಾಯ ಮಾಡುವದರಲ್ಲಿ ಉದ್ಯುಕ್ತರಾಗಿದ್ದರು. ದೃಢಕಾಯರಾದ ಯುವಕರೇನೋ ಸೈನಿಕರಾಗಿ ಯುದ್ಧದ ವಿದ್ಯೆಯನ್ನು ಕಲಿಯಲು ಹೊರಟರು. ಆದರೆ ವೃದ್ಧರೂ ಅಶಕ್ತರೂ ಹೆಂಗಸರೂ ಮಾಡುವದೇನು? ಇಷ್ಟವೊಂದಿದ್ದರೆ ಅವರಿಗೂ ಬೇಕಾದಷ್ಟು ಕೆಲಸ ವಿದ್ದಿತು. ಆದುದರಿಂದ ಅವರು ಬಟ್ಟೆಯನ್ನು ಕತ್ತರಿಸಿ ಉಡುಪನ್ನೂ ಗಾಯಕ್ಕೆ ಕಟ್ಟುವ ಪಟ್ಟಿಗಳನ್ನೂ ತಯಾರು ಮಾಡ ತೊಡಗಿದರು.

'ದಿ ಲೈಸಿಯುಮ್' ಎಂಬ ಮಹಿಳೆಯರ ಸಮಾಜವು ಸೈನಿಕರಿಗೆ ತಮ್ಮ ಕೈಯಲ್ಲಾದಷ್ಟು ಬಟ್ಟೆಗಳನ್ನು ಹೊಲಿದುಕೊಡುವ ಭಾರವನ್ನು ಹೊತ್ತುಕೊಂಡಿತು. ಶ್ರೀ. ಸರೋಜಿನೀ ದೇವಿಯವರು ಆ ಸಮಾಜದ ಸದಸ್ಯರಾಗಿದ್ದರು. ಅವರು ಉತ್ಸಾಹಪೂರ್ವಕವಾಗಿ ಆ ಕೆಲಸವನ್ನು ಮಾಡತೊಡಗಿದರು. ಇದೇ ಅವರೊಡನೆ ನನ್ನ ಪ್ರಥಮ ಪರಿಚಯ. ಅವರು ಮಾದರಿಯನ್ನನುಸರಿಸಿ ಕತ್ತರಿಸಿದ್ದ ಬಟ್ಟೆಯ ರಾಸಿಯನ್ನು ನನ್ನ ಮುಂದಿಟ್ಟು ಅವುಗಳನ್ನು ಹೊಲಿಸಿ ತಂದುಕೊಡಬೇಕೆಂದು ನನಗೆ ಹೇಳಿದರು. ಈ ಆಜ್ಞೆ

ಯನ್ನು ನಾನು ಆನಂದದಿಂದ ಶಿರಸಾವಹಿಸಿ ಮಿತ್ರರ ಸಹಾಯ ದಿಂದ ಪ್ರಥಮಚಿಕಿತ್ಸಾಶಿಕ್ಷಣದ ಮಧ್ಯೆ ನನಗೆ ಸಾಧ್ಯವಾದಷ್ಟು ಬಟ್ಟೆಗಳನ್ನು ಹೊಲಿಸಿಕೊಟ್ಟೆನು.



೩೯

# ಧಾರ್ಮಿಕ ಸಮಸ್ಯೆ

ಇತರ ಭಾರತೀಯರೊಡನೆ ನಾನು ಯುದ್ಧದಲ್ಲಿ ಸೇವೆಗೈಯುಲು ಸಿದ್ಧನಾಗಿರುವೆನೆಂದು ಸರಕಾರಕ್ಕೆ ನಮ್ಮ ಹೆಸರನ್ನು ಕೊಟ್ಟಿರುವೆನೆಂಬ ವರ್ತಮಾನವು ದಕ್ಷಿಣ ಆಫ್ರಿಕಕ್ಕೆ ಮುಟ್ಟಿದೊಡನೆಯೇ ನನಗೆ ಎರಡು ತಾರುಗಳು ಬಂದುವು. ಇವುಗಳಲ್ಲಿ ಒಂದು ಪೋಲಕರು ಕಳಿಸಿದುದು—"ನೀವು ಮಾಡಿರುವ ಈ ಕೆಲಸವು ನಿಮ್ಮ ಅಹಿಂಸಾತತ್ವಕ್ಕೆ ವಿರೋಧವಲ್ಲವೆ ?" ಎಂದು.

ನಾನು ಈ ಆಕ್ಷೇಪಣೆಯನ್ನು ಸ್ವಲ್ಪಮಟ್ಟಿಗೆ ನಿರೀಕ್ಷಿಸಿಯೇ ಇದ್ದೆನು. ಏಕೆಂದರೆ ನಾನು ಈ ಪ್ರಶ್ನೆಯನ್ನು ನನ್ನ 'ಹಿಂದೀಯ ಸ್ವರಾಜ್ಯ' ಎಂಬ ಪುಸ್ತಕದಲ್ಲಿ ವಿಮರ್ಶಿಸಿದ್ದೆನಲ್ಲದೆ ಈ ವಿಷಯವನ್ನು ದಕ್ಷಿಣ ಆಫ್ರಿಕದಲ್ಲಿ ಹಗಲಿರುಳು ಮಿತ್ರರೊಡನೆ ಚರ್ಚಿಸುತ್ತಿದ್ದೆನು. ಯುದ್ಧವು ಅನೀತಿಮಯವಾದುದೆಂದು ನಾವೆಲ್ಲರೂ ಒಪ್ಪುತ್ತಿದ್ದೆವು. ನನ್ನನ್ನು ಹೊಡೆದವನ ಮೇಲೆ ಕ್ರಮ ಜರುಗಿಸುವದಕ್ಕೇ ನಾನು ಸಿದ್ಧನಾಗಿಲ್ಲದಿರುವಾಗ ಯುದ್ಧದಲ್ಲಿ ಭಾಗಿಯಾಗುವದಕ್ಕೆ, ಅದರಲ್ಲಿಯೂ ನನಗೆ ಪಕ್ಷವಿಪಕ್ಷದವರ ಧರ್ಮಾಧರ್ಮವು ತಿಳಿಯದಿರುವಾಗ, ನಾನು ಒಪ್ಪುವದೆಂತು ? ನಾನು ಬೋಅರ್ ಯುದ್ಧದಲ್ಲಿ ಭಾಗಿಯಾಗಿದ್ದೆನೆಂಬುದೇನೋ ನನ್ನ ಮಿತ್ರರಿಗೆ ಗೊತ್ತಿದ್ದಿತು. ಆದರೆ ಈಚೆಗೆ ನನ್ನ ಅಭಿಪ್ರಾಯವು ಮಾರ್ಪಟ್ಟಿದ್ದಿತೆಂದು ಅವರು ಎಣಿಸಿದ್ದರು.

ವಸ್ತುತಃ ಬೋಅರ್ ಯುದ್ಧದಲ್ಲಿ ಕಾಲಿಡಲು ನನ್ನನ್ನು ಪ್ರೇರಿಸಿದ್ದ ವಿಚಾರಸರಣಿಯೇ ಈ ಸಂದರ್ಭದಲ್ಲಿಯೂ ನನ್ನನ್ನು ಒಡಂಬಡಿಸಿದ್ದಿತು. ಯುದ್ಧದಲ್ಲಿ ಸೇರುವದು ಅಹಿಂಸಾಧರ್ಮದೊಂದಿಗೆ ಎಂದಿಗೂ ಸರಿಹೋಗದೆಂಬುದು ನನಗೆ ಅತ್ಯಂತ ಸ್ಪಷ್ಟ

ವಾಗಿದ್ದಿತು. ಆದರೆ ತನ್ನ ಕರ್ತವ್ಯವು ಸದಾ ಇಷ್ಟುಮಟ್ಟಿಗೆ ಸ್ಪಷ್ಟವಾಗಿರುವದು ಮನುಷ್ಯನ ಹಣೆಯಲ್ಲಿ ಬರೆದಿಲ್ಲ. ಸತ್ಯೋಪಾಸಕನು ಅನೇಕವೇಳೆ ಕತ್ತಲಿನಲ್ಲಿ ಮಾರ್ಗಕ್ಕಾಗಿ ತಡಕಾಡಬೇಕಾಗುತ್ತದೆ.

ಅಹಿಂಸಾತತ್ತ್ವವು ಅನಂತವ್ಯಾಪನೆಯುಳ್ಳುದು. ನಾವು ಹಿಂಸೆಯ ದಳ್ಳುರಿಯಲ್ಲಿ ಸಿಕ್ಕಿರುವ ಕೈಲಾಗದ ಅನಿತ್ಯಜೀವಿಗಳು. ಜೀವಕ್ಕೆ ಜೀವವು ಆಹಾರವೆಂಬ ಹೇಳಿಕೆಯಲ್ಲಿ ಆಳವಾದ ಅರ್ಥವಿದೆ. ಮನುಷ್ಯನು ಅರಿತಾಗಲಿ ಅರಿಯದಾಗಲಿ ಬಾಹ್ಯ ಹಿಂಸೆಯನ್ನು ಮಾಡದೆ ಕ್ಷಣಕಾಲವೂ ಜೀವಿಸಿರಲಾರನು. ಅವನು ಬದುಕಿರುವದೇ—ತಿನ್ನುವದು, ಕುಡಿಯುವದು, ಚಲಿಸುವದು—ಹಿಂಸಾತ್ಮಕವಾದುದು; ಎಷ್ಟೇ ಅಲ್ಪವಾಗಿರಲಿ ಪ್ರಾಣಹಾನಿಕರವಾದುದು. ಆದುದರಿಂದ ಅಹಿಂಸೋಪಾಸಕನ ಕ್ರಿಯೆಯೆಲ್ಲಾ ಅನುಕಂಪಾತ್ಮಕವಾಗಿದ್ದರೆ, ಅವನು ಅತ್ಯಲ್ಪ ಜಂತುವಿನ ಪ್ರಾಣಹಾನಿಗೆ ಕೂಡ ಕಾರಣನಾಗದಿರಲು ತನ್ನ ಕೈಲಾದಷ್ಟು ಪ್ರಯತ್ನಪಟ್ಟರೆ, ಅದನ್ನುಳಿಸಲು ಪ್ರಯತ್ನಿಸಿದರೆ, ಹೀಗೆ ಎಡೆಬಿಡದೆ ಹಿಂಸೆಯ ಯಮಪಾಶದಿಂದ ಬಿಡುಗಡೆ ಹೊಂದಲು ಶ್ರಮಪಟ್ಟರೆ, ಅವನು ತನ್ನ ಧರ್ಮವನ್ನು ಕಾಪಾಡಿದಂತಾಗುತ್ತದೆ. ಅವನು ಸದಾ ಆತ್ಮನಿಗ್ರಹದಲ್ಲಿಯೂ ಕಾರುಣ್ಯವೃತ್ತಿಯಲ್ಲಿಯೂ ಪ್ರವರ್ತಿಸುತ್ತಿರುತ್ತಾನೆ. ಆದರೆ ಅವನು ಬಾಹ್ಯ ಹಿಂಸೆಯಿಂದ ಎಂದಿಗೂ ಸಂಪೂರ್ಣವಾಗಿ ಬಿಡುಗಡೆ ಹೊಂದಲಾರನು.

ಇದಲ್ಲದೆ ಅಹಿಂಸಾತತ್ತ್ವದ ಮೂಲದಲ್ಲಿ ಸಕಲ ಜೀವದ ಐಕ್ಯತೆಯು ಇರುವದರಿಂದ ಒಬ್ಬನ ದೋಷವು ಎಲ್ಲರನ್ನೂ ತಟ್ಟದಿರಲಾರದು. ಆದುದರಿಂದ ಮನುಷ್ಯನು ಹಿಂಸೆಯ ಸಂಪರ್ಕವೇ ಇಲ್ಲದೆ ಇರಲಾರನು. ಅವನು ಸಾಮಾಜಿಕ ವ್ಯಕ್ತಿಯಾಗಿರುವವರೆಗೂ ಸಮಾಜದ ಅಸ್ತಿತ್ವಕ್ಕೇ ಹೊಂದಿದ ಹಿಂಸೆಯಲ್ಲಿ ಭಾಗಿಯಾಗದಿರಲಾರನು. ಎರಡು ಜನಾಂಗಗಳು ಯುದ್ಧಮಾಡುತ್ತಿ

ರುವಾಗ ಅಹಿಂಸೋಪಾಸಕನ ಕರ್ತವ್ಯವು ಯುದ್ಧವನ್ನು ನಿಲ್ಲಿಸುವದು. ಈ ಕರ್ತವ್ಯವನ್ನು ಪಾಲಿಸಲಾರದವನು, ಯುದ್ಧವನ್ನು ಇದಿರಿಸಲಾರದವನು, ಯುದ್ಧವನ್ನು ಇದಿರಿಸಲು ಯೋಗ್ಯತೆಯಿಲ್ಲದವನು, ಯುದ್ಧದಲ್ಲಿ ಭಾಗಿಯಾಗಬಹುದು ; ಆದರೂ ತನ್ನನ್ನೂ ತನ್ನ ಜನಾಂಗವನ್ನೂ ಲೋಕವನ್ನೂ ಯುದ್ಧದಿಂದ ಬಿಡುಗಡೆ ಮಾಡಲು ಮನಃಪೂರ್ವಕವಾಗಿ ಪ್ರಯತ್ನಿಸಬಹುದು.

ನಾನು ಬ್ರಿಟಿಷ್ ಚಕ್ರಾಧಿಪತ್ಯದ ಮೂಲಕ ನನ್ನ ಮತ್ತು ನನ್ನ ದೇಶದ ಅಂತಸ್ತನ್ನು ಹೆಚ್ಚಿಸುವ ಆಸೆಯನ್ನಿಟ್ಟುಕೊಂಡಿದ್ದೆನು. ನಾನು ಇಂಗ್ಲೆಂಡಿನಲ್ಲಿದ್ದಾಗ ಬ್ರಿಟಿಷರ ನೌಕಾಬಲದ ಸಂರಕ್ಷಣೆಗೊಳಗಾಗಿದ್ದೆನು. ನಾನು ಅದರ ಆಯುಧಬಲದ ಆಶ್ರಯದಲ್ಲಿದ್ದುದರಿಂದ ನಾನು ಅದರಲ್ಲಡಗಿರುವ ಹಿಂಸಾವೃತ್ತಿಯಲ್ಲಿ ಸ್ವತಃ ಭಾಗಿಯಾಗಿಯೇ ಇದ್ದೆನು. ಆದುದರಿಂದ ನಾನು ಚಕ್ರಾಧಿಪತ್ಯದ ಸಂಬಂಧವನ್ನು ಬಿಡದೆ ಅದರ ಛತ್ರಚ್ಛಾಯೆಯಲ್ಲಿರಬೇಕೆಂದೆಣಿಸಿದರೆ ಈ ಮೂರು ಮಾರ್ಗಗಳಲ್ಲಿ ಒಂದನ್ನು ಆರಿಸಬೇಕಾಗಿದ್ದಿತು: ಯುದ್ಧವನ್ನು ಕಂಠಾಘೋಷವಾಗಿ ವಿರೋಧಿಸಿ ಚಕ್ರಾಧಿಪತ್ಯವು ಯುದ್ಧನೀತಿಯನ್ನು ತ್ಯಜಿಸುವವರೆಗೂ ಸತ್ಯಾಗ್ರಹದ ನಿಯಮದ ಪ್ರಕಾರ ಚಕ್ರಾಧಿಪತ್ಯಕ್ಕೆ ಬಹಿಷ್ಕಾರ ಹಾಕುವದು ; ಅಥವಾ ಯೋಗ್ಯತೋರಿದ ಕಾನೂನುಗಳನ್ನು ಸವಿನಯವಾಗಿ ಭಂಗಪಡಿಸಿ ಕಾರಾಗೃಹವನ್ನರಸುವದು ; ಅಥವಾ ಚಕ್ರಾಧಿಪತ್ಯದ ಪರವಾಗಿ ಯುದ್ಧದಲ್ಲಿ ತೊಡಗಿ ಆ ಮೂಲಕ ಯುದ್ಧದ ಹಿಂಸೆಯನ್ನಿದಿರಿಸುವ ಯೋಗ್ಯತೆಯನ್ನೂ ಸಿದ್ಧತೆಯನ್ನೂ ಪಡೆಯುವದು. ನನ್ನಲ್ಲಿ ಈ ಯೋಗ್ಯತೆಯು ಇಲ್ಲದಿದ್ದುದರಿಂದ ಯುದ್ಧದಲ್ಲಿ ಭಾಗಿಯಾಗಿರುವದಲ್ಲದೆ ನನಗೆ ಬೇರೆ ಮಾರ್ಗವಿಲ್ಲವೆಂದು ನಾನು ಯೋಚಿಸಿದೆನು.

ಯುದ್ಧದಲ್ಲಿ ಹೋರಾಡುವವರಿಗೂ ಹೋರಾಡದಿರುವವರಿಗೂ ಮಧ್ಯೆ ನನಗೆ ಅಹಿಂಸಾದೃಷ್ಟಿಯಿಂದ ಯಾವ ಭೇದವೂ ಕಾಣುವದಿಲ್ಲ. ಕಳ್ಳರು ಡಕಾಯತಿ ಮಾಡುತ್ತಿರುವಾಗ ಅವರ

ಕೂಲಿಯಂತಾಗಲಿ ಅವರ ಕಾವಲುಗಾರನಂತಾಗಲಿ ಅಥವಾ ಅವರು ಗಾಯಹೊಂದಿದಾಗ ಅವರ ಶುಶ್ರೂಷೆಮಾಡುವವನಂತಾಗಲಿ ಅವರಿಗೆ ಸೇವೆ ಮಾಡಲು ಒಪ್ಪಿರುವವನು ಡಕಾಯಿತರಷ್ಟೇ ತಪ್ಪಿತಸ್ಥನಾಗಿರುತ್ತಾನೆ. ಇದೇ ರೀತಿಯಾಗಿ ಯುದ್ಧದಲ್ಲಿ ಗಾಯಹೊಂದಿದವರ ಸೇವಾಕಾರ್ಯದಲ್ಲಿ ಮಾತ್ರ ತೊಡಗಿರುವವರು ಕೂಡ ಯುದ್ಧದ ದೋಷದಿಂದ ತಪ್ಪಿಸಿಕೊಳ್ಳಲಾಗುವದಿಲ್ಲ

ಪೋಲಕರ ತಾರು ಬರುವದಕ್ಕೆ ಮುಂಚೆ ನನ್ನಲ್ಲಿಯೇ ನಾನು ಇದನ್ನೆಲ್ಲಾ ಹೀಗೆ ವಿಚಾರಮಾಡಿದ್ದೆನು. ಅದು ಬಂದ ಸ್ವಲ್ಪ ಕಾಲದಲ್ಲಿಯೇ ಈ ನನ್ನ ಅಭಿಪ್ರಾಯಗಳನ್ನು ಕೆಲವು ಮಿತ್ರರೊಂದಿಗೆ ಚರ್ಚಿಸಿ ಯುದ್ಧದಲ್ಲಿ ಭಾಗಿಯಾಗಲು ಮುಂದಾಗುವದೇ ನನ್ನ ಧರ್ಮವೆಂದು ನಿಶ್ಚಯಿಸಿದೆನು. ಇಂದು ಕೂಡ ಆ ವಿಚಾರಸರಣಿಯಲ್ಲಿ ನನಗೆ ಹುಳುಕೇನೂ ಕಾಣುವದಿಲ್ಲ. ಬ್ರಿಟಿಷ್ ಸಾಮ್ರಾಜ್ಯದ ವಿಷಯವಾಗಿ ನಾನು ಒಳ್ಳೆಯ ಅಭಿಪ್ರಾಯವುಳ್ಳವನಾಗಿದ್ದುದರಿಂದ ಆಗ ನಾನು ಮಾಡಿದುದಕ್ಕಾಗಿ ಪಶ್ಚಾತ್ತಾಪಪಡುವದೂ ಇಲ್ಲ.

ನನ್ನ ಅಭಿಪ್ರಾಯವು ಸರಿಯೆಂದು ಆಗ ಕೂಡ ನನ್ನ ಮಿತ್ರರೆಲ್ಲರನ್ನೂ ಒಪ್ಪಿಸಲು ನಾನು ಶಕ್ತನಾಗಿರಲಿಲ್ಲವೆಂದು ನನಗೆ ತಿಳಿದಿದೆ. ಇದು ಅತಿ ಸೂಕ್ಷ್ಮವಾದ ಸಮಸ್ಯೆ. ಇದರಲ್ಲಿ ಮತಭೇದಕ್ಕೆಡೆಯುಂಟು. ಆದುದರಿಂದ ಅಹಿಂಸೆಯಲ್ಲಿ ನಂಬಿಕೆಯುಳ್ಳವರಿಗೂ ಆ ಧರ್ಮವನ್ನು ಜೀವನದ ಪ್ರತಿಯೊಂದು ಭಾಗದಲ್ಲಿಯೂ ಅನುಸರಿಸಲು ಶ್ರದ್ಧಾಯುತವಾದ ಪ್ರಯತ್ನವನ್ನೆಸಗುತ್ತಿರುವವರಿಗೂ ನನ್ನ ಈ ಮನೋವಿಚಾರವನ್ನು ಸಾಧ್ಯವಾದಷ್ಟು ಸ್ಪಷ್ಟವಾಗಿ ಹೇಳಿದ್ದೇನೆ. ಸತ್ಯೋಪಾಸಕನು ವಾಡಿಕೆಗೆ ತಲೆಬಾಗಿ ಯಾವ ಕೆಲಸವನ್ನೂ ಮಾಡಲಾಗುವದಿಲ್ಲ. ತನ್ನ ತಪ್ಪನ್ನು ತಿದ್ದಿಕೊಳ್ಳಲು ಸದಾ ಸಿದ್ಧನಾಗಿದ್ದು ದೋಷವು ತಿಳಿದೊಡನೆಯೇ ಆದುದಾಗಲಿ ಎಂದು ಅದನ್ನು ಒಪ್ಪಿಕೊಂಡು ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

೪೦

# ಸಣ್ಣ ಸತ್ಯಾಗ್ರಹ

ನಾನು ಹೀಗೆ ಧರ್ಮದ ದೃಷ್ಟಿಯಿಂದ ಯುದ್ಧದಲ್ಲಿ ಪ್ರವೇಶಿಸಿದರೂ ಅದೃಷ್ಟವಶಾತ್ ನಾನು ಅದರಲ್ಲಿ ಸ್ವಂತವಾಗಿ ಭಾಗಿಯಾಗಲು ಆಗಲಿಲ್ಲವಷ್ಟೇ ಅಲ್ಲದೆ ಅಂತಹ ಇಕ್ಕಟ್ಟಿನ ಸಮಯದಲ್ಲಿಯೂ ಸಣ್ಣ ಸತ್ಯಾಗ್ರಹವನ್ನು ನಡೆಸಬೇಕಾಗಿ ಬಂದಿತು.

ನಮ್ಮ ಹೆಸರುಗಳನ್ನು ನೋಡಿ ಒಪ್ಪಿ ಪಟ್ಟಿಗೆ ಸೇರಿಸಿದೊಡನೆಯೇ ನಮಗೆಲ್ಲಾ ಕವಾತವನ್ನು ಕಲಿಸಲು ಒಬ್ಬ ಅಧಿಕಾರಿಯನ್ನು ನೇಮಿಸಿದರೆಂದು ನಾನು ಆಗಲೇ ಹೇಳಿದ್ದೇನೆ. ಕೇವಲ ಯುದ್ಧಶಿಕ್ಷಣಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಮಾತ್ರ ಆ ಅಧಿಕಾರಿಯು ನಮ್ಮ ಒಡೆಯನೆಂದೂ ಉಳಿದ ವಿಚಾರಗಳಲ್ಲೆಲ್ಲಾ ನಾನೇ ನಮ್ಮ ದಳದ ನಾಯಕನೆಂದೂ ಒಳಸಿಯಮಗಳಿಗೆಲ್ಲಾ ದಳದವರು ನನಗೆ ಜವಾಬ್ದಾರರೆಂದೂ, ಎಂದರೆ ಅಧಿಕಾರಿಯು ದಳದೊಡನೆ ವ್ಯವಹಾರವನ್ನು ನನ್ನಮೂಲಕ ನಡೆಸಬೇಕೆಂದೂ, ನಾವೆಲ್ಲರೂ ತಿಳಿದುಕೊಂಡಿದ್ದೆವು. ಆದರೆ ಮೊಟ್ಟಮೊದಲಿನಿಂದ ಆ ಅಧಿಕಾರಿಯು ಅಂತಹ ಭ್ರಮೆಗೇನೂ ಅವಕಾಶ ಕೊಡಲಿಲ್ಲ.

ಸೊರಾಬ್ಜೀ ಅಡಾಜಣಿಯರು ಚತುರರಾಗಿದ್ದರು. ಅವರು ನನಗೆ ಹೀಗೆ ಎಚ್ಚರಿಕೆ ಕೊಟ್ಟರು: '' ಈ ಮನುಷ್ಯನ ವಿಚಾರದಲ್ಲಿ ಜೋಪಾನದಿಂದಿರಿ. ಈತನು ನಮ್ಮ ಮೇಲೆ ದರ್ಬಾರು ನಡೆಸಬೇಕೆಂದಿರುವಂತೆ ತೋರುತ್ತದೆ. ಈತನ ಆಜ್ಞೆಗಳು ನಮಗೆ ಬೇಕಿಲ್ಲ. ಈತನನ್ನು ನಮ್ಮ ಶಿಕ್ಷಕನೆಂದು ಭಾವಿಸಲು ನಾವು ಸಿದ್ಧರಾಗಿದ್ದೇವೆ. ಆದರೆ ನಮಗೆ ಕವಾತು ಕಲಿಸಲು ಈತನು ನೇಮಿಸಿರುವ ಯುವಕರು ಕೂಡ ತಾವು ನಮ್ಮ ಧಣಿಗಳಾಗಿ ಬಂದಿರುವೆವೆಂದು ತಿಳಿದುಕೊಂಡಿದ್ದಾರೆ. ''

ಈ ಯುವಕರು ಆಕ್ಸ್‌ಫರ್ಡ್ ವಿಶ್ವವಿದ್ಯಾಸಲಯದ ವಿದ್ಯಾರ್ಥಿಗಳಾಗಿದ್ದರು. ಅವರು ನಮಗೆ ಶಿಕ್ಷಣಕೊಡಲು ಬಂದಿದ್ದರು. ಮುಖ್ಯಾಧಿಕಾರಿಯು ಅವರನ್ನು ನಮ್ಮ ದಳವಿಭಾಗಗಳ ನಾಯಕರನ್ನಾಗಿ ನೇಮಿಸಿದ್ದನು.

ನಾನು ಕೂಡ ಅಧಿಕಾರಿಯು ಮಿತಿಮೀರಿದ ದರ್ಪವನ್ನು ಲಕ್ಷಿಸದೆ ಇರಲಿಲ್ಲ. ಆದರೆ ನಾನು ಸೊರಾಬ್ಜಿಯವರಿಗೆ ಚಿಂತಿಸಬೇಡಿರೆಂದು ಹೇಳಿ ಅವರನ್ನು ಸಮಾಧಾನಪಡಿಸಲು ಯತ್ನಿಸಿದೆನು. ಆದರೆ ಅವರು ಸುಲಭವಾಗಿ ಒಪ್ಪುವ ಮನುಷ್ಯರಾಗಿರಲಿಲ್ಲ.

"ನೀವು ಅತಿ ವಿಶ್ವಾಸಶೀಲರು. ಈ ಮನುಷ್ಯರು ಹಾಳು ಮಾತಿನಿಂದ ನಿಮ್ಮ ಕಣ್ಣಿಗೆ ಮಣ್ಣೆರಚುತ್ತಾರೆ. ಕಡೆಗೆ ನೀವು ಕಣ್ತೆರೆದಾಗ 'ನಡೆಯಿರಿ ಸತ್ಯಾಗ್ರಹಮಾಡೋಣ' ಎಂದು ಹೇಳಿ ನೀವು ತೊಳಲುವದಲ್ಲದೆ ನಿಮ್ಮ ಜೊತೆಗೆ ನಮ್ಮನ್ನೂ ತೊಳಲಿಸುತ್ತೀರಿ." ಎಂದು ಅವರು ನಸುನಗುತ್ತಾ ಹೇಳಿದರು.

"ನನ್ನ ಸಹವಾಸಕ್ಕೆ ಸಿಕ್ಕಿದಮೇಲೆ ತೊಳಲುವದಲ್ಲದೆ ಮತ್ತೇನನ್ನು ನಿರೀಕ್ಷಿಸುತ್ತೀರಿ? ಸತ್ಯಾಗ್ರಹಿಗಳು ಹುಟ್ಟಿರುವದೇ ಕಣ್ಣಿಗೆ ಮಣ್ಣೆರಚಿಸಿಕೊಳ್ಳುವದಕ್ಕೆ. ಅಧಿಕಾರಿಯು ನಮ್ಮನ್ನು ಮೋಸಪಡಿಸಲಿ. ಮೋಸಗಾರನು ಅಂತ್ಯದಲ್ಲಿ ತನ್ನನ್ನು ತಾನೇ ಮೋಸಪಡಿಸಿಕೊಳ್ಳುವನೆಂದು ನಾನು ನಿಮಗೆ ಸಾವಿರ ಬಾರಿ ಹೇಳಿಲ್ಲವೆ?"

ಇದನ್ನು ಕೇಳಿ ಸೊರಾಬ್ಜಿಯವರು ಗಟ್ಟಿಯಾಗಿ ನಕ್ಕು "ಸರಿ ಸರಿ, ಕಣ್ಣಿಗೆ ಮಣ್ಣೆರಚಿಸಿಕೊಳ್ಳುತ್ತಾ ಇರಿ. ಒಂದಲ್ಲ ಒಂದು ದಿನ ನೀವು ಸತ್ಯಾಗ್ರಹದಲ್ಲಿ ಮರಣ ಹೊಂದಿ ನಮ್ಮಂತಹ ನಿರ್ಭಾಗ್ಯರನ್ನೂ ಜೊತೆಗೆಳೆದುಕೊಂಡು ಹೋಗುತ್ತೀರಿ." ಎಂದರು.

ಈ ಮಾತುಗಳು ಅಸಹಕಾರದ ವಿಷಯವಾಗಿ ದಿವಂ. ಮಿಸ್ ಎಮಿಲಿ ಹಾಬ್‌ಹೌಸರು ನನಗೆ ಬರೆದುದನ್ನು ಸ್ಮರಣೆಗೆ

ತರುತ್ತ್ತವೆ: "ಸತ್ಯದ ಸಲುವಾಗಿ ಇಂದೋ ನಾಳೆಯೋ ನೀವು ಗಲ್ಲಿ ನಲ್ಲಿ ತಲೆ ಕಳೆದುಕೊಂಡರೆ ನನಗೇನೂ ಅಚ್ಚರಿಯಾಗಲಾರದು. ಭಗವಂತನು ನಿಮಗೆ ಸತ್ಪಥವನ್ನು ತೋರಿಸಿ ನಿಮ್ಮನ್ನು ರಕ್ಷಿಸಲಿ."

ಸೊರಾಬ್ಜಿಯವರೊಡನೆ ಈ ಸಂವಾದವು ಅಧಿಕಾರಿಯು ನೇಮಕನಾದ ಸ್ವಲ್ಪ ಕಾಲದಲ್ಲಿಯೇ ನಡೆಯಿತು. ಕೆಲವು ದಿವಸ ಗಳಲ್ಲಿಯೇ ಅಧಿಕಾರಿಯೊಡನೆ ನಮ್ಮ ಸಂಬಂಧವು ಸಹನಾತೀತವಾಗಿ ಪರಿಣಮಿಸಿತು. ಹದಿನಾಲ್ಕು ದಿವಸದ ಉಪವಾಸವಾದ ಮೇಲೆ ನನ್ನ ಶರೀರಬಲವು ಯಥಾಸ್ಥಿತಿಗೆ ಬರುವದಕ್ಕೆ ಮುಂಚೆಯೇ ನಾನು ಕವಾತು ಮಾಡತೊಡಗಿದೆನು. ಇದಕ್ಕಾಗಿ ಅನೇಕವೇಳೆ ಮನೆಯಿಂದ ಗೊತ್ತಾದ ಸ್ಥಳಕ್ಕೆ ಸುಮಾರು ಎರಡು ಮೈಲಿ ದೂರ ನಡೆಯುತ್ತಿದ್ದೆನು. ಇದರಿಂದ ನನಗೆ ಪಕ್ಕೆಶೂಲೆಯುಂಟಾಗಿ ನಾನು ಹಾಸಿಗೆ ಹಿಡಿದು ಮಲಗಿದೆನು. ಈ ಸ್ಥಿತಿಯಲ್ಲಿರುವಾಗ ನಾನು ವಾರದ ಕೊನೆಯಲ್ಲಿ ಪ್ರವಾಸಶಿಕ್ಷಣಕ್ಕೆ ಹೋಗುತ್ತಿ ದ್ದೆನು. ಇಲ್ಲಿಯೇ ಸತ್ಯಾಗ್ರಹ ನಡೆಸುವ ಸಂದರ್ಭವೊದಗಿದುದು.

ಅಧಿಕಾರಿಯು ತನ್ನ ಆಟೋಪವನ್ನು ಮಿತಿಮೀರಿ ನಡೆಸ ತೊಡಗಿದನು. ಯುದ್ಧದ ವಿಚಾರಕ್ಕೆ ಸಂಬಂಧಪಟ್ಟ ವಿಷಯ ಗಳಲ್ಲಿಯೇ ಅಲ್ಲದೆ ಇತರ ವಿಷಯಗಳಲ್ಲಿ ಕೂಡ ತಾನೇ ನಮ್ಮ ಯಜಮಾನನೆಂದು ಖಂಡಿತದಿಂದ ತಿಳಿಸಿ ನಮಗೆ ತನ್ನ ಅಧಿಕಾರದ ರುಚಿಯನ್ನೂ ತೋರಿಸಿದನು. ಸೊರಾಬ್ಜಿಯವರು ನನ್ನ ಹತ್ತಿ ರಕ್ಕೆ ಓಡಿಬಂದರು. ಅವರು ಈ ನಿರಂಕುಶ ಪ್ರವರ್ತನೆಯನ್ನು ಸಹಿಸಲು ಸಿದ್ಧರಾಗಿರಲಿಲ್ಲ. ಅವರು "ಎಲ್ಲಾ ಆಜ್ಞೆಗಳೂ ನನಗೆ ನಿಮ್ಮ ಮೂಲಕವೇ ಬರಬೇಕು. ನಾವು ಇನ್ನೂ ಶಿಕ್ಷಣ ಶಿಬಿರದಲ್ಲಿಯೇ ಇದ್ದೇವೆ. ಆದರೂ ಎಲ್ಲಾ ವಿಧವಾದ ಅರ್ಥವಿ ಲ್ಲದ ಆಜ್ಞೆಗಳನ್ನು ಮಾಡುತ್ತಿದ್ದಾರೆ. ನಮಗೂ ನಮ್ಮ ಶಿಕ್ಷಣ ಕ್ಕಾಗಿ ನೇಮಿಸಲ್ಪಟ್ಟಿರುವ ಯುವಕರಿಗೂ ಮಧ್ಯೆ ಸಲ್ಲದ ಭೇದ ಗಳನ್ನು ಕಲ್ಪಿಸುತ್ತಿದ್ದಾರೆ. ಇದರ ವಿಷಯವಾಗಿ ನಾವು ಅಧಿ

ಕಾರಿಯೊಡನೆ ಕಡಾಖಂಡಿತವಾಗಿ ಮಾತನಾಡಬೇಕು. ಇಲ್ಲದಿದ್ದರೆ ಕೆಲಸ ನಡೆಯುವ ಹಾಗಿಲ್ಲ. ನಮ್ಮ ಜೊತೆಗೆ ದಳಕ್ಕೆ ಸೇರಿರುವ ಭಾರತೀಯ ವಿದ್ಯಾರ್ಥಿಗಳೂ ಇತರರೂ ಅರ್ಥವಿಲ್ಲದ ಆಣತಿಗಳನ್ನು ಮನ್ನಿಸುವದಿಲ್ಲ. ಆತ್ಮಗೌರವಕ್ಕೋಸ್ಕರ ಕೈಗೊಂಡಿರುವ ಕಾರ್ಯದಲ್ಲಿ ಮಾನಕ್ಕೆ ಚ್ಯುತಿ ಬಂದರೆ ತಡೆದುಕೊಂಡಿರಲಾಗುವದಿಲ್ಲ.'' ಎಂದು ಹೇಳಿದರು.

ನಾನು ಅಧಿಕಾರಿಯ ಬಳಿಗೆ ಹೋಗಿ ನನಗೆ ತಿಳಿದುಬಂದ ದೂರುಗಳನ್ನು ಆತನ ಲಕ್ಷ್ಯಕ್ಕೆ ತಂದೆನು. ಅವುಗಳನ್ನು ಬರಹದ ಮೂಲಕ ತಿಳಿಸಬೇಕೆಂದು ಆತನು ನನಗೆ ಕಾಗದ ಬರೆದನು. ಅದರಲ್ಲಿಯೇ ''ದೂರು ಹೇಳುವವರು ಈಗ ನೇಮಿಸಲ್ಪಟ್ಟಿರುವ ತಮ್ಮ ದಳ ವಿಭಾಗದ ನಾಯಕರ ಮೂಲಕ ಅವುಗಳನ್ನು ನನಗೆ ತಿಳಿಸುವದೇ ಸರಿಯಾದ ಮಾರ್ಗವೆಂದೂ ನಾಯಕರು ಶಿಕ್ಷಕರ ಮೂಲಕ ನನಗೆ ತಿಳಿಸುವರೆಂದೂ ಅವರಿಗೆ ಹೇಳಿ.'' ಎಂದು ಬರೆದನು.

ಇದಕ್ಕೆ ನಾನು ''ಯಾವ ಅಧಿಕಾರವೂ ನನ್ನದೆಂದು ಹೇಳುವದಿಲ್ಲ. ಸೈನಿಕರ ದೃಷ್ಟಿಯಿಂದ ನಾನು ಸಾಮಾನ್ಯ ಸಿಪಾಯಿಗಿಂತ ಹೆಚ್ಚಿನವನೇನೂ ಅಲ್ಲ. ಆದರೆ ನಾನು ಸ್ವಯಂಸೇವಕ ದಳದ ಅಧ್ಯಕ್ಷನಾದುದರಿಂದ ನನ್ನನ್ನು ಅನಧಿಕಾರಿಯಾದ ಅವರ ಪ್ರತಿನಿಧಿಯಾಗಿರಲು ಬಿಡುವಿರೆಂದು ತಿಳಿದುಕೊಂಡಿದ್ದೆನು.'' ಎಂದು ಉತ್ತರ ಕೊಟ್ಟೆನು. ಅದರಲ್ಲಿಯೇ ನಾನು ನನ್ನ ಲಕ್ಷ್ಯಕ್ಕೆ ಬಂದಿದ್ದ ಕೊರತೆಗಳನ್ನೂ ಕೋರಿಕೆಗಳನ್ನೂ, ಎಂದರೆ ದಳದವರ ಅಭಿಪ್ರಾಯವನ್ನು ಗಣಿಸದೆ ದಳವಿಭಾಗಗಳಿಗೆ ನಾಯಕರನ್ನು ನೇಮಿಸಿದುದರಿಂದ ಬಹು ಅತೃಪ್ತಿಗೆ ಕಾರಣವಾಗಿದ್ದಿತೆಂದೂ ಅವರನ್ನು ಹಿಂದಕ್ಕೆ ಕರೆಸಿ ದಳವು ಹೊಸನಾಯಕರನ್ನು ಚುನಾಯಿಸಲು ಬಿಡಬೇಕೆಂದೂ ಆದರೆ ಈ ಚುನಾವಣೆಯು ಅಧಿಕಾರಿಯ ಅನುಮತಿಯಿಲ್ಲದೆ ಕ್ರಮವಾಗುತಕ್ಕುದಲ್ಲವೆಂದೂ, ಬರೆದೆನು.

ಇದು ಅಧಿಕಾರಿಗೆ ಸರಿದೋರಲಿಲ್ಲ. ದಳವಿಭಾಗದ ನಾಯಕರನ್ನು ದಳದವರೇ ಚುನಾಯಿಸುವದು ಸೇನಾನಿಯಮಭಾವಕ್ಕೇ ವಿರುದ್ಧವೆಂದೂ ನೇಮಿಸಿದ ನಾಯಕರನ್ನು ಹಿಂದಕ್ಕೆ ಕರೆಸುವದರಿಂದ ದಳದ ಕಟ್ಟು ಸಡಿಲುವದೆಂದೂ ಆತನು ಹೇಳಿದನು.

ಆದುದರಿಂದ ನಾವು ಸಭೆಗೂಡಿ ಅದರಲ್ಲಿ ಹಿಂದಕ್ಕೆ ಬಂದು ಬಿಡಬೇಕೆಂದು ನಿರ್ಧರಿಸಿದೆವು. ನಾನು ಅಲ್ಲಿದ್ದವರಿಗೆ ಸತ್ಯಾಗ್ರಹದ ಗಂಭೀರ ಪರಿಣಾಮಗಳನ್ನು ತಿಳಿಸಿದೆನು. ಆದರೂ ಅಧಿಕಾರಿಯು ಗೊತ್ತುಮಾಡಿದ್ದ ದಳವಿಭಾಗಗಳ ನಾಯಕರನ್ನು ಹಿಂದಕ್ಕೆ ಕರೆದು ದಳದವರಿಗೇ ತಮ್ಮ ನಾಯಕರನ್ನು ಚುನಾಯಿಸುವ ಅವಕಾಶವನ್ನು ಕೊಡದಿದ್ದರೆ ದಳದವರು ಇನ್ನು ಮುಂದೆ ಕವಾತು ಮಾಡದೆಯೂ ವಾರದ ಕೊನೆಯಲ್ಲಿ ಪ್ರವಾಸ ಶಿಕ್ಷಣಕ್ಕೆ ಹೋಗದೆಯೂ ನಿಲ್ಲಬೇಕಾಗುವದು ಎಂಬ ಗೊತ್ತುವಳಿಯು ಬಹುಮತದಿಂದ ಸ್ವೀಕೃತವಾಯಿತು.

ಆಮೇಲೆ ನಾನು ಅಧಿಕಾರಿಗೆ ನನ್ನ ಸೂಚನೆಯನ್ನು ನಿರಾಕರಿಸಿ ಆತನು ಬರೆದ ಕಾಗದದಿಂದ ನನಗೆ ಎಷ್ಟು ಆಶಾಭಂಗವಾಯಿತೆಂಬುದನ್ನು ತಿಳಿಸಿ ಒಂದು ಕಾಗದವನ್ನು ಬರೆದೆನು. ಅಧಿಕಾರ ನಡೆಸಲು ನನಗೇನೂ ಆಸೆಯಿಲ್ಲವೆಂದೂ ಸೇವೆಮಾಡಬೇಕೆಂಬುದೇ ನನ್ನ ಪ್ರಬಲವಾದ ಇಚ್ಛೆಯೆಂದೂ ಆತನಿಗೆ ಭರವಸೆ ಹೇಳಿದೆನು. ಹಿಂದಿನ ಘಟನೆಯೊಂದನ್ನು ಆತನ ಲಕ್ಷ್ಯಕ್ಕೆ ತಂದೆನು. ಬೋಅರ್ ಯುದ್ಧದ ಕಾಲದಲ್ಲಿ ದಕ್ಷಿಣ ಆಫ್ರಿಕದ ಭಾರತೀಯರ ಶುಶ್ರೂಷಾದಳದಲ್ಲಿ ನನಗೆ ಯಾವ ಅಧಿಕಾರಸ್ಥಾನವಿಲ್ಲದಿದ್ದರೂ ನನಗೂ ನಮ್ಮ ಮುಖ್ಯಾಧಿಕಾರಿಗಳಾಗಿದ್ದ ಕರ್ನಲ್ ಗಾಲ್ವೆಯವರಿಗೂ ಮಧ್ಯೆ ಒಂದು ಸಲ ಕೂಡ ಅಸಮಾಧಾನಕ್ಕೆ ಕಾರಣವಾಗಿರಲಿಲ್ಲವೆಂದೂ ದಳದ ಇಷ್ಟವನ್ನು ತಿಳಿದುಕೊಳ್ಳುವದಕ್ಕಾಗಿ ನನ್ನನ್ನು ವಿಚಾರಿಸದೆ ಅವರು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲವೆಂದೂ ಆತನಿಗೆ ಹೇಳಿದೆನು. ಈ

ಕಾಗದದ ಜೊತೆಗೆ ಹಿಂದಿನ ಸಂಜೆ ನಾವು ಮಾಡಿದ್ದ ಗೊತ್ತುವಳಿಯ ಪ್ರತಿಯೊಂದನ್ನೂ ಇಟ್ಟು ಕಳಿಸಿದೆನು.

ಇದರಿಂದ ಅಧಿಕಾರಿಯ ಮೇಲೆ ಸತ್ಪರಿಣಾಮವೇನೂ ಉಂಟಾಗಲಿಲ್ಲ. ಸಭೆಯೂ ಗೊತ್ತುವಳಿಯೂ ದೊಡ್ಡ ನಿಯಮಭಂಗವೆಂದು ಆತನಿಗೆ ತೋರಿತು.

ಇದರಮೇಲೆ ನಾನು ಹಿಂದುಸ್ತಾನದ ಮೇಲ್ವಿಚಾರಕರಾದ ಸಚಿವರಿಗೆ ಎಲ್ಲಾ ವಿಷಯಗಳನ್ನೂ ವಿಶದಗೊಳಿಸಿ ಗೊತ್ತುವಳಿಯ ನಕಲೊಂದನ್ನು ಇಟ್ಟು ಕಾಗದ ಬರೆದೆನು. ಅವರು ದಕ್ಷಿಣ ಆಫ್ರಿಕದಲ್ಲಿನ ಪರಿಸ್ಥಿತಿಯು ಬೇರೆಯಾಗಿದ್ದಿತೆಂದೂ ದಳವಿಭಾಗಗಳ ನಾಯಕರನ್ನು ಸೇನಾನಿಯಮದ ಪ್ರಕಾರ ಮುಖ್ಯಾಧಿಕಾರಿಯೇ ನೇಮಿಸಬೇಕೆಂದೂ ಆದರೆ ಮುಂದೆ ಅವರನ್ನು ಗೊತ್ತುಮಾಡಬೇಕಾದಾಗ ಮುಖ್ಯಾಧಿಕಾರಿಯು ನನ್ನ ಸಲಹೆಗೂ ಗಮನ ಕೊಡುವರೆಂದೂ ಉತ್ತರಕೊಟ್ಟರು.

ಇದಾದಮೇಲೆ ನಮ್ಮಿಬ್ಬರಿಗೂ ಇನ್ನೂ ಬೇಕಾದಷ್ಟು ಪತ್ರವ್ಯವಹಾರ ನಡೆಯಿತು. ಆದರೆ ನನಗೆ ಈ ವಿಷಾದಪ್ರಸಂಗವನ್ನು ದೀರ್ಘವಾಗಿ ವರ್ಣಿಸಲು ಇಷ್ಟವಿಲ್ಲ. ಹಿಂದುಸ್ತಾನದಲ್ಲಿ ನಾವು ದಿನವೂ ಪಡೆಯುವ ಅನುಭವಕ್ಕೆ ತಕ್ಕಹಾಗೆ ಇದೂ ಇದ್ದಿತೆಂದು ಹೇಳಿದರೆ ಸಾಕು. ಬೆದರಿಕೆಯಿಂದಲೂ ಕೌಶಲದಿಂದಲೂ ಅಂತು ಅಧಿಕಾರಿಯು ನಮ್ಮ ದಳದಲ್ಲಿ ಭೇದವನ್ನು ಹುಟ್ಟಿಸಿದನು. ಗೊತ್ತುವಳಿಯ ಪರವಾಗಿ ಅಭಿಮತ ಕೊಟ್ಟವರಲ್ಲಿ ಕೆಲವರು ಅಧಿಕಾರಿಯ ಬೆದರಿಕೆಗೆ ಬಗ್ಗಿಯೋ ಮಾತಿಗೆ ಮರುಳಾಗಿಯೋ ತಮ್ಮ ವಚನಕ್ಕೆ ತಪ್ಪಿದರು.

ಸುಮಾರು ಈ ಸಮಯದಲ್ಲಿ ನೆಟ್ಲಿ ಆಸ್ಪತ್ರೆಗೆ ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚು ಮಂದಿ ಗಾಯಹೊಂದಿದ ಸಿಪಾಯಿಗಳು ಬಂದರು. ನಮ್ಮ ದಳದವರಿಗೆ ಅವರ ಸೇವೆಗೆ ಹೋಗಬೇಕೆಂದು ಆಜ್ಞೆಯಾ

ಯಿತು. ಅಧಿಕಾರಿಗೆ ಯಾರುಯಾರನ್ನು ಒಪ್ಪಿಸಲು ಸಾಧ್ಯವಾಯಿತೋ ಅವರು ನೆಟ್ಲಿಗೆ ಹೋದರು. ಉಳಿದವರು ಹೋಗುವದಿಲ್ಲವೆಂದು ಹೇಳಿದರು. ನಾನು ಹಾಸಿಗೆ ಹಿಡಿದು ಮಲಗಿದ್ದೆನು. ಆದರೂ ನಮ್ಮ ದಳದವರೊಡನೆ ವ್ಯವಹಾರ ನಡೆಸುತ್ತಿದ್ದೆನು. ಉಪಸಚಿವರಾಗಿದ್ದ ಎಂ. ರಾಬರ್ಟ್ಸರು ಆ ಕಾಲದಲ್ಲಿ ಅನೇಕ ಸಲ ನನ್ನನ್ನು ನೋಡಲು ಬಂದು ನನಗೆ ಮನ್ನಣೆ ಮಾಡಿದರು. ಇತರರೂ ಕೆಲಸಕ್ಕೆ ಹೋಗುವಂತೆ ನಾನು ಪ್ರೇರಿಸಬೇಕೆಂದು ಅವರು ನನ್ನನ್ನು ಒತ್ತಾಯಪಡಿಸಿದರು. ಇವರೆಲ್ಲರೂ ಸೇರಿ ಬೇರೆ ದಳವಾಗಬೇಕೆಂದೂ ನೆಟ್ಲಿ ಆಸ್ಪತ್ರೆಯಲ್ಲಿ ಅವರು ಅಲ್ಲಿಯ ಮುಖ್ಯಾಧಿಕಾರಿಗೆ ಮಾತ್ರ ಜವಾಬ್ದಾರರಾಗಿರಬಹುದೆಂದೂ ಹೀಗಿರುವದರಿಂದ ಆತ್ಮಗೌರವವು ಹಾನಿಯಾಗುವ ಸಂಭವವೇ ಇಲ್ಲವೆಂದೂ ಇದರಿಂದ ಸರಕಾರಕ್ಕೆ ಸಮಾಧಾನವಾಗುವದಲ್ಲದೆ ಆಸ್ಪತ್ರೆಯಲ್ಲಿದ್ದ ನೂರಾರು ಮಂದಿ ಗಾಯಹೊಂದಿದವರಿಗೆ ಸಹಾಯ ಮಾಡಿದಂತಾಗುವುದೆಂದೂ ಸೂಚಿಸಿದರು. ಈ ಸಲಹೆಯು ನನ್ನ ಸಂಗಾತಿಗಳಿಗೂ ನನಗೂ ಸರಿದೋರಿತು. ಇದರ ಫಲವಾಗಿ ಹಿಂದೆ ನಿಂತವರು ಕೂಡ ನೆಟ್ಲಿಗೆ ಹೋದರು.

ಆದರೆ ನಾನೊಬ್ಬನು ಮಾತ್ರ ಹಿಂದುಳಿದು ಹಾಸಿಗೆ ಹಿಡಿದು ಮಲಗಿ ಆ ದುಃಸ್ಥಿತಿಯಲ್ಲಿಯೇ ಗೆಲುವೊಗದಿಂದಿರಲು ಯತ್ನಿಸುತ್ತಿದ್ದೆನು.



ಳಿ೧

# ಗೋಖಲೆಯವರ ಔದಾರ್ಯ

ನನಗೆ ವಿಲಾಯತಿಯಲ್ಲಿ ಎದೆ ನೋವು ಬಂದುದನ್ನು ನಾನು ಆಗಲೇ ತಿಳಿಸಿದ್ದೇನೆ. ಇದಾದ ಸ್ವಲ್ಪ ದಿವಸದಲ್ಲಿಯೇ ಗೋಖಲೆ ಯವರು ಇಂಗ್ಲೆಂಡಿಗೆ ಬಂದರು. ಕಾಲನ್‌ಬಾಕರೂ ಅವರ ಬಳಿಗೆ ತಪ್ಪದೆ ಹೋಗುತ್ತಿದ್ದರು. ನಮ್ಮ ಮಾತುಕತೆಯು ಹೆಚ್ಚಾಗಿ ಯುದ್ಧಕ್ಕೆ ಸಂಬಂಧಪಟ್ಟುದಾಗಿರುತ್ತಿದ್ದಿತು. ಕಾಲನ್‌ಬಾಕರಿಗೆ ಜರ್ಮನಿದೇಶದ ಭೂಪಟವು ಬಹು ಚೆನ್ನಾಗಿ ತಿಳಿದಿದ್ದುದರಿಂದಲೂ ಮತ್ತು ಅವರು ಯೂರೋಪಿನಲ್ಲಿ ಹೆಚ್ಚಾಗಿ ಪ್ರಯಾಣಮಾಡಿದ್ದ ರಾದುದರಿಂದಲೂ ಅವರು ಯುದ್ಧಕ್ಕೆ ಸಂಬಂಧಪಟ್ಟ ಬೇರೆ ಬೇರೆ ಸ್ಥಳಗಳನ್ನು ನಕಾಶೆಯಲ್ಲಿ ತೋರಿಸುತ್ತಿದ್ದರು. ನನಗೆ ಪಕ್ಕೆಶೂಲೆ ಬಂದಾಗ ಅದೂ ದಿನವಹಿಯ ಚರ್ಚಾಸಾಮಗ್ರಿಯಾಯಿತು. ಆಗಲೂ ನಾನೂ ಆಹಾರ ವಿಷಯಕವಾದ ಪ್ರಯೋಗಗಳನ್ನು ನಡೆಸುತ್ತಿದ್ದೆನು. ನೆಲಗಡಲೆಕಾಯಿ, ಬಾಳೆಕಾಯಿ, ಬಾಳೆಹಣ್ಣು, ನಿಂಬೆಹಣ್ಣು, ಆಲಿವ್ ಎಣ್ಣೆ, ಚಪ್ಪರಬದನೆಹಣ್ಣು ಇದೇ ಮುಂತಾ ದುವನ್ನು ನಾನು ತೆಗೆದುಕೊಳ್ಳುತ್ತಿದ್ದೆನು. ಹಾಲು, ಧಾನ್ಯ, ಬೇಳೆ ಮೊದಲಾದುವನ್ನು ನಾನು ಸಂಪೂರ್ಣವಾಗಿ ಬಿಟ್ಟಿದ್ದೆನು.

ಡಾ. ಜೀವರಾಜ ಮಹೆತಾರವರು ನನಗೆ ಔಷಧ ಕೊಡು ತ್ತಿದ್ದರು. ನಾನು ಹಾಲನ್ನೂ ಧಾನ್ಯವನ್ನೂ ತೆಗೆದುಕೊಳ್ಳ ಬೇಕೆಂದು ಅವರು ಬಲವಂತಮಾಡಿದರು. ಆದರೆ ನಾನು ಕದಲ ಲಿಲ್ಲ. ಈ ಮಾತು ಗೋಖಲೆಯವರ ಕಿವಿಗೆ ಬಿದ್ದಿತು. ಹಣ್ಣಿನ ಆಹಾರವು ಉತ್ತಮವಾದುದೆಂಬ ನನ್ನ ವಾದಕ್ಕೆ ಅವರು ಹೆಚ್ಚಾದ ಮನ್ನಣೆಯನ್ನೇನೂ ಕೊಡುತ್ತಿರಲಿಲ್ಲ. ವೈದ್ಯರು ನನ್ನ ಆರೋ ಗ್ಯದ ಸಲುವಾಗಿ ಹೇಳಿದುದನ್ನೆಲ್ಲಾ ತೆಗೆದುಕೊಳ್ಳಬೇಕೆಂದು ಅವರು ಇಷ್ಟಪಟ್ಟರು.

ಗೋಖಲೆಯವರ ಬಲಾತ್ಕಾರಕ್ಕೆ ಬಗ್ಗದಿರುವದೇನೂ ನನಗೆ ಸುಲಭದ ಮಾತಾಗಿರಲಿಲ್ಲ. "ಆಗುವದಿಲ್ಲ ಎಂದು ನೀವು ಹೇಳ ಕೂಡದು." ಎಂದು ಅವರು ಆಗ್ರಹಮಾಡಲು ನಾನು ಈ ವಿಷಯವಾಗಿ ಯೋಚಿಸಲೋಸುಗ ೨೪ ಗಂಟೆಯ ಅವಕಾಶ ವನ್ನು ಬೇಡಿದೆನು. ಆ ದಿನ ಸಂಜೆ ಕಾಲನ್‌ಬಾಕರೂ ನಾನೂ ಮನೆಗೆ ಹಿಂತಿರುಗುತ್ತಿರುವಾಗ ಈ ವಿಷಯದಲ್ಲಿ ನನ್ನ ಕರ್ತವ್ಯವೇ ನೆಂಬುದನ್ನು ಕುರಿತು ನಾವು ಚರ್ಚಿಸಿದೆವು. ಈ ಪ್ರಯೋಗದಲ್ಲಿ ಅವರು ನನ್ನೊಡನೆ ಇದ್ದರು. ಇದು ಅವರ ಒಪ್ಪಿಗೆಗೆ ಬಂದಿದ್ದಿತು. ಆದರೂ ನನ್ನ ಆರೋಗ್ಯದ ಸಲುವಾಗಿ ಅಗತ್ಯ ತೋರಿದರೆ ಈ ಪ್ರಯೋಗವನ್ನು ಬಿಟ್ಟುಬಿಡುವದೇ ಸರಿಯೆಂದು ಅವರ ಅಭಿಮತ ವೆಂಬುದನ್ನು ನಾನು ಕಂಡೆನು. ಆದುದರಿಂದ ನಾನೊಬ್ಬನೇ ನನ್ನ ಅಂತರಾತ್ಮನ ಆಜ್ಞೆಯಂತೆ ಈ ವಿಷಯವನ್ನು ನಿರ್ಧರಿಸ ಬೇಕಾಯಿತು.

ಆ ಇರುಳೆಲ್ಲಾ ಈ ವಿಚಾರವಾಗಿ ಆಲೋಚಿಸುವದರಲ್ಲಿ ಕಳೆ ದೆನು. ಪ್ರಯೋಗವನ್ನು ಬಿಡುವದೆಂದರೆ ಆ ಸಂಬಂಧವಾಗಿ ನನಗಿದ್ದ ಅಭಿಪ್ರಾಯಗಳಿಗೆಲ್ಲಾ ತಿಲತರ್ಪಣ ಕೊಡಬೇಕಾಗಿದ್ದಿತು. ಆದರೆ ಅವುಗಳಲ್ಲಿ ನನಗೆ ದೋಷವೇನೂ ಕಂಡುಬರಲಿಲ್ಲ.

ಗೋಖಲೆಯವರ ಒಲವಿನ ಒತ್ತಾಯಕ್ಕೆ ಎಷ್ಟು ದೂರ ವಶ ನಾಗಬಹುದು, ಆರೋಗ್ಯದ ಸಲುವಾಗಿಯೆಂದು ಹೇಳುವ ಕಾರಣ ಗಳಿಗಾಗಿ ಈ ಪ್ರಯೋಗವನ್ನು ಎಷ್ಟರಮಟ್ಟಿಗೆ ಮಾರ್ಪಡಿಸ ಬಹುದು ಎಂಬುದೇ ಆಗಿನ ಪ್ರಶ್ನೆಯಾಗಿದ್ದಿತು. ಕಟ್ಟಕಡೆಗೆ ನಾನು ಪ್ರಯೋಗದ ಉದ್ದೇಶವು ಮುಖ್ಯವಾಗಿ ಧಾರ್ಮಿಕವಾಗಿರುವ ಮಟ್ಟಿಗೆ ಅದನ್ನು ನಡೆಸಬೇಕೆಂದೂ ಹಾಗಿಲ್ಲದೆ ಮಿಶ್ರಭಾವನೆ ಯಿರುವ ವಿಷಯದಲ್ಲಿ ವೈದ್ಯರ ಸಲಹೆಗೆ ಒಪ್ಪಬೇಕೆಂದೂ ನಿಶ್ಚಯಿ ಸಿದೆನು. ಹಾಲಿನ ತ್ಯಾಗದಲ್ಲಿ ಧಾರ್ಮಿಕ ದೃಷ್ಟಿಯೇ ಪ್ರಧಾನ ವಾಗಿದ್ದಿತು. ಕಲ್ಕತ್ತೆಯ ಗೊಲ್ಲರು ಆಕಳು ಎಮ್ಮೆಗಳಿಂದ

ಒಂದು ತೊಟ್ಟು ಹಾಲನ್ನೂ ಬಿಡದೆ ಎಲ್ಲವನ್ನೂ ಹಿಂಡಲು ನಡೆಸುತ್ತಿದ್ದ ದುಷ್ಟ ವಿಧಾನಗಳು ನನ್ನ ಕಣ್ಣಿಗೆ ಕಟ್ಟಿದ ಹಾಗೆ ನಿಂತಿದ್ದುವು. ಇದೂ ಅಲ್ಲದೆ ಮಾಂಸವು ಮನುಷ್ಯನ ಆಹಾರವಲ್ಲದಿರುವಂತೆಯೇ ದನದ ಹಾಲೂ ಅಲ್ಲವೆಂದು ನನಗೆ ತೋರುತ್ತಿದ್ದಿತು. ಆದುದರಿಂದ ಹಾಲನ್ನು ತ್ಯಜಿಸುವ ಸಂಕಲ್ಪದಲ್ಲಿ ದೃಢನಾಗಿರಬೇಕೆಂಬ ನಿಶ್ಚಯದಿಂದಲೇ ನಾನು ಬೆಳಿಗ್ಗೆ ಹಾಸಿಗೆಯಿಂದೆದ್ದೆನು. ಇದರಿಂದ ನನ್ನ ಮನಸ್ಸು ಹಗುರವಾಯಿತು. ಗೋಖಲೆಯವರ ಬಳಿಗೆ ಹೋಗಲು ನನಗೆ ಹೆದರಿಕೆಯಾಗುತ್ತಿದ್ದಿತು. ಆದರೆ ಅವರು ನನ್ನ ಸಂಕಲ್ಪವನ್ನು ಮನ್ನಿಸುವರೆಂದು ನಾನು ನಂಬಿದ್ದೆನು.

ಸಂಜೆ ನಾನೂ ಕಾಲೆನ್‌ಬಾಕರೂ ಗೋಖಲೆಯವರನ್ನು ನೋಡಲೋಸುಗ 'ನ್ಯಾಷನಲ್ ಲಿಬರಲ್ ಕ್ಲಬ್' ಗೆ ಹೋದೆವು. "ವೈದ್ಯರ ಸಲಹೆಯನ್ನು ಸ್ವೀಕರಿಸಬೇಕೆಂದು ನಿರ್ಧರಿಸಿರುವರೋ?" ಎಂಬುದೇ ಅವರ ಮೊದಲನೆಯ ಪ್ರಶ್ನೆಯಾಗಿದ್ದಿತು.

ನಾನು ನಮ್ರತೆಯಿಂದ, ಆದರೂ ನಿಶ್ಚಯಪೂರ್ವಕವಾಗಿ, ನಾನು "ನಾನು ಒಂದು ವಿಚಾರ ಹೊರತು ಉಳಿದುದನ್ನೆಲ್ಲಾ ಒಪ್ಪಲು ಸಿದ್ಧನಾಗಿದ್ದೇನೆ. ಆ ವಿಷಯದಲ್ಲಿ ಮಾತ್ರ ನನ್ನನ್ನು ಬಲಾತ್ಕಾರ ಮಾಡಕೂಡದೆಂದು ಬೇಡುತ್ತೇನೆ. ಹಾಲು, ಮೊಸರು, ಬೆಣ್ಣೆ ಮುಂತಾದವುಗಳನ್ನಾಗಲೀ ಮಾಂಸವನ್ನಾಗಲೀ ನಾನು ಮುಟ್ಟುವದಿಲ್ಲ. ಇವುಗಳನ್ನು ತೆಗೆದುಕೊಳ್ಳದಿರುವದರಿಂದ ನನಗೆ ಮರಣವು ಸಂಭವಿಸುವದಾದರೆ ಅದಕ್ಕೆ ಸಿದ್ಧನಾಗಿರುವದೇ ಲೇಸೆಂದು ನನಗೆ ತೋರುತ್ತದೆ." ಎಂದು ಹೇಳಿದೆನು.

"ಇದು ನಿಮ್ಮ ಅಂತಿಮ ನಿರ್ಣಯವೋ?" ಎಂದು ಗೋಖಲೆಯವರು ಕೇಳಿದರು.

"ನನಗೆ ಬೇರೆ ನಿರ್ಣಯವು ಸಾಧ್ಯವೇ ಇಲ್ಲವೆಂದು ತೋರುತ್ತದೆ. ಇದರಿಂದ ನಿಮಗೆ ದುಃಖವುಂಟಾಗುವುದೆಂದು ನನಗೆ

ಗೊತ್ತು. ಆದರೆ ಏನು ಮಾಡಲಿ! ನಾನು ನಿಮ್ಮ ಕ್ಷಮೆಯನ್ನು ಬೇಡುತ್ತೇನೆ.''

ಕೊಂಚ ದುಃಖಪಟ್ಟು ಆದರೂ ಅತ್ಯಂತ ಪ್ರೇಮದಿಂದ ಗೋಖಲೆಯವರು ''ನಿಮ್ಮ ನಿರ್ಧಾರವನ್ನು ನಾನು ಒಪ್ಪುವ ದಿಲ್ಲ.'' ಎಂದು ನನಗೆ ಹೇಳಿ ಡಾ. ಜೀವರಾಜ ಮಹೆತಾರವರ ಕಡೆಗೆ ತಿರುಗಿ ''ಗಾಂಧಿಯವರನ್ನು ಇನ್ನು ತೊಂದರೆಪಡಿಸ ಬೇಡಿ. ಅವರು ನಿರ್ಧರಿಸಿರುವ ಮಿತಿಯೊಳಗೆ ನಿಮಗೆ ಬೇಕಾದ ಯಾವ ಔಷಧಪಥ್ಯವನ್ನಾದರೂ ವಿಧಿಸಿರಿ.'' ಎಂದರು.

ವೈದ್ಯರು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರು. ಆದರೆ ಅವರು ನಿರುಪಾಯರಾಗಿದ್ದರು. ಹಲಸಂದೆಯ ಸಾರಿಗೆ ಸ್ವಲ್ಪ ಇಂಗನ್ನು ಹಾಕಿ ತೆಗೆದುಕೊಳ್ಳಬೇಕೆಂದು ಸಲಹೆ ಕೊಟ್ಟರು. ನಾನು ಇದಕ್ಕೆ ಒಪ್ಪಿ ಒಂದೆರಡು ದಿನ ತೆಗೆದುಕೊಂಡೆನು. ಆದರೆ ಇದರಿಂದ ನನ್ನ ನೋವು ಹೆಚ್ಚಿತು. ಹೀಗೆ ಇದು ನನಗೆ ಒಂಟ ದಿದ್ದುದರಿಂದ ನಾನು ಪುನಃ ಹಣ್ಣುಹಂಪಲನ್ನು ತೆಗೆದುಕೊಳ್ಳ ತೊಡಗಿದೆನು. ವೈದ್ಯರೇನೋ ಬಾಹ್ಯಚಿಕಿತ್ಸೆಯನ್ನು ನಡೆಸುತ್ತಾ ಹೋದರು. ಇದರಿಂದ ನನ್ನ ನೋವು ಸ್ವಲ್ಪ ಕಡಿಮೆಯಾಯಿತು. ಆದರೆ ನನ್ನ ನೇಮದಿಂದ ಅವರಿಗೆ ಕೈಕಟ್ಟಿದಂತಾಯಿತು.

ಈ ಮಧ್ಯೆ ಗೋಖಲೆಯವರಿಗೆ ಅಕ್ಟೋಬರಿನಲ್ಲಿ ಲಂಡನಿನ ಇಬ್ಬನಿಯನ್ನು ತಡೆಯಲಾಗದುದರಿಂದ ಅವರು ಹಿಂದುಸ್ಥಾನಕ್ಕೆ ಹಿಂತಿರುಗಿದರು.



೪೨

# ಪಕ್ಕೆಶೂಲೆಯ ಚಿಕಿತ್ಸೆ

ಪಕ್ಕೆಶೂಲೆಯು ನಿಲ್ಲದುದರಿಂದ ನನಗೆ ಸ್ವಲ್ಪಯೋಚನೆಗೆ ಕಾರಣವಾಯಿತು. ಆದರೆ ಹೊಟ್ಟೆಗೆ ಔಷಧ ತೆಗೆದುಕೊಳ್ಳುವದ ರಿಂದ ಇದನ್ನು ವಾಸಿಮಾಡಲಾಗುವದಿಲ್ಲ, ಪಥ್ಯಬಾಹ್ಯೋಪ ಚಾರಗಳೇ ಇದಕ್ಕೆ ಚಿಕಿತ್ಸೆ ಎಂಬುದು ನನಗೆ ಗೊತ್ತಿದ್ದಿತು. ನಾನು ಶಾಕಾಹಾರ ಸಂಬಂಧವಾಗಿ ಹೆಸರು ಪಡೆದಿದ್ದ ಡಾ. ಅಲಿನ್ಸನರನ್ನು ಚಿಕಿತ್ಸೆಗೆ ಕರೆದೆನು. ಅವರು ಆಹಾರಸುಧಾರಣೆ ಯಿಂದ ಜಾಡ್ಯವನ್ನು ವಾಸಿಮಾಡುತ್ತಿದ್ದರು. ಅವರೊಡನೆ ನನಗೆ ೧೮೯೦ರಲ್ಲಿ ಪರಿಚಯವಾಗಿದ್ದಿತು. ಅವರನ್ನು ನಾನು ನನಗೆ ಚಿಕಿತ್ಸೆಮಾಡಲು ಕರೆಸಿದೆನು. ಅವರು ನನ್ನ ಶರೀರವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಹಾಲು ತೆಗೆದುಕೊಳ್ಳುವದಿಲ್ಲ ವೆಂದು ನಾನು ಹಿಡಿದಿದ್ದ ವ್ರತವನ್ನು ಅವರಿಗೆ ವಿವರಿಸಿದೆನು. ಅವರು ನನಗೆ ಧೈರ್ಯಹೇಳಿ "ನೀವು ಹಾಲನ್ನು ತೆಗೆದುಕೊಳ್ಳ ಬೇಕಾದುದಿಲ್ಲ. ನೀವು ಕೆಲವು ದಿನದವರೆಗೂ ಕೊಬ್ಬುಳ್ಳ ಯಾವ ಪದಾರ್ಥವನ್ನೂ ತೆಗೆದುಕೊಳ್ಳಕೂಡದೆಂದೇ ನನ್ನ ಅಭಿಪ್ರಾಯ." ಎಂದರು. ಆಮೇಲೆ ಅವರು ನಾನು ಕಂದು ನಾನ್‌ರೊಟ್ಟಿ, ಬೀಟ್‌ಬೇರು, ಮೂಲಂಗಿ, ಈರುಳ್ಳಿ ಮುಂತಾದ ಗೆಡ್ಡೆಗಳನ್ನೂ ಮತ್ತು ಹೊಸ ಹಣ್ಣುಗಳನ್ನೂ ಮುಖ್ಯವಾಗಿ ಕಿತ್ತಲೆ ಹಣ್ಣನ್ನೂ ಸೇವಿಸಬೇಕೆಂದು ಹೇಳಿದರು. ತರಕಾರಿಗಳನ್ನು ನನಗೆ ಅಗೆಯ ಲಾಗದಿದ್ದರೆ ಅವುಗಳನ್ನು ಸಣ್ಣನಾಗಿ ಕೊಚ್ಚಬೇಕೆಂದೂ ಬೇಯಿಸ ಕೂಡದೆಂದೂ ಹೇಳಿದರು. ಈ ಆಹಾರವನ್ನು ನಾನು ಮೂರು ನಾಲ್ಕು ದಿವಸ ತೆಗೆದುಕೊಂಡೆನು. ಆದರೆ ಬೇಯಿಸದ ತರ ಕಾರಿಯು ನನಗೆ ಸಂಪೂರ್ಣವಾಗಿ ಸರಿಹೋಗಲಿಲ್ಲ. ಈ ಪ್ರಯೋಗವನ್ನು ಸಾಂಗವಾಗಿ ನಡೆಸಲು ನನ್ನ ಶರೀರವು ಯೋಗ್ಯ

ವಾದ ಸ್ಥಿತಿಯಲ್ಲಿರಲಿಲ್ಲ. ಹಸಿಯ ತರಕಾರಿಯನ್ನು ತಿನ್ನಲು ನನಗೆ ಒಗ್ಗುತ್ತಿರಲಿಲ್ಲ.

ಹಗಲಿರುಳೂ ನನ್ನ ಕೋಣೆಯ ಕಿಟಕಿಗಳನ್ನೆಲ್ಲಾ ತೆರೆದಿರಬೇಕೆಂದೂ ತೋಬಿಸಿಯ ನೀರಿನಲ್ಲಿ ನಾನು ಸ್ನಾನಮಾಡಬೇಕೆಂದೂ ನೋಯುತ್ತಿರುವ ಭಾಗಗಳನ್ನು ಎಣ್ಣೆಯಿಂದ ನೀವಬೇಕೆಂದೂ ಕಾಲು ಗಂಟೆಯಿಂದ ಅರ್ಧ ಗಂಟೆಯವರೆಗೆ ಬಯಲಿನಲ್ಲಿ ಓಡಾಡಬೇಕೆಂದೂ ಡಾ. ಆಲಿನ್‌ಸನರು ಸಲಹೆ ಕೊಟ್ಟರು. ಈ ಸೂಚನೆಗಳೆಲ್ಲಾ ನನ್ನ ಒಪ್ಪಿಗೆಗೆ ಬಂದುವು. ನನ್ನ ಕೊಠಡಿಗೆ ಫ್ರೆಂಚ್‌ಮಾದರಿಯ ಕಿಟಕಿ ಇದ್ದಿತು. (ಫ್ರೆಂಚ್ ಕಿಟಕಿಯೆಂದರೆ ಎತ್ತರವಾದ ಕಿಟಕಿ. ಇದರ ಬಾಗಿಲುಗಳನ್ನು ಮಡಿಸಬಹುದು. ಹೊರಗೆ ಹೋಗುವದಕ್ಕೂ ಒಳಗೆ ಬರುವದಕ್ಕೂ ಇದನ್ನು ಉಪಯೋಗಿಸುತ್ತಾರೆ.) ಅದನ್ನು ಪೂರ್ತಿ ತೆಗೆದಿದ್ದರೆ ಮಳೆಯು ಒಳಗೆ ಬೀಳುತ್ತಿದ್ದಿತು, ಮೇಲಿನ ಸಣ್ಣ ಕಿಟಕಿಯನ್ನು ತೆಗೆಯುವದಕ್ಕಾಗುತ್ತಿರಲಿಲ್ಲ. ಆ ದು ದ ರಿ ಂ ದ ನಾನು ಅದರ ಗಾಜನ್ನು ಒಡೆಸಿ ಗಾಳಿಯು ಓಡಾಡುವಂತೆ ಮಾಡಿದೆನು. ಮತ್ತು ಮಳೆಹನಿಯು ಒಳಗೆ ಬೀಳದಂತೆ ಕಿಟಕಿಗಳನ್ನು ಅರ್ಧ ತೆಗೆದೆನು.

ಇವೆಲ್ಲದರಿಂದ ನನ್ನ ಶರೀರಸ್ಥಿತಿಯು ಸ್ವಲ್ಪ ಉತ್ತಮಗೊಂಡರೂ ಕಾಹಿಲೆಯು ಪೂರ್ತಿಯಾಗಿ ಗುಣವಾಗಲಿಲ್ಲ. ಲೇಡಿ ಸೆಸಿಲಿಯಾ ರಾಬರ್ಟ್‌ಸರು ಆಗಾಗ ನನ್ನನ್ನು ನೋಡಲು ಬರುತ್ತಿದ್ದರು. ನಮ್ಮ ಮಧ್ಯೆ ಮೈತ್ರಿಯು ಬೆಳೆಯಿತು. ನಾನು ಹಾಲು ತೆಗೆದುಕೊಳ್ಳುವಂತೆ ನನ್ನನ್ನು ಪ್ರೇರಿಸಬೇಕೆಂದು ಆಕೆಗೆ ಪ್ರಬಲವಾದ ಇಚ್ಛೆಯಿದ್ದಿತು. ನಾನು ಇದಕ್ಕೆ ಸ್ವಲ್ಪವೂ ಒಪ್ಪದಿದ್ದುದರಿಂದ ಹಾಲಿನ ಗುಣವುಳ್ಳ ಇತರ ಪದಾರ್ಥಗಳನ್ನು ಕಂಡುಹಿಡಿಯಲು ಆಕೆಯು ಪ್ರಯತ್ನಪಟ್ಟರು. ಆಕೆಯ ಮಿತ್ರರೊಬ್ಬರು ಮಾಲ್ಟೆಡ್ ಮಿಲ್ಕ್ (ಹಾಲಿನ ಪುಡಿ)ಯನ್ನು ಸೂಚಿಸಿ

ಆದರಲ್ಲಿ ಹಾಲಿನ ಅಂಶವೇ ಇಲ್ಲವೆಂದೂ ಅದು ಹಾಲಿನ ಸಕಲ ಗುಣವುಳ್ಳ ರಾಸಾಯನಿಕ ಪದಾರ್ಥವೆಂದೂ ನಂಬಿಕೆ ಹೇಳಿದರು. ಆದರೆ ಅದರ ವಿಚಾರವೇನೂ ಅವರಿಗೆ ಗೊತ್ತಿರಲಿಲ್ಲ. ಲೇಡಿ ಸೆಸಿಲಿಯಾರವರಿಗೆ ಧಾರ್ಮಿಕ ನಿಯಮಗಳಲ್ಲಿ ಮನ್ನಣೆಯಿದ್ದಿತೆಂದು ನನಗೆ ಗೊತ್ತಿದ್ದಿತು. ಆದುದರಿಂದ ನಾನು ಆಕೆಯ ಮಾತಿನಲ್ಲಿ ಸಂಪೂರ್ಣ ಭರವಸೆಯಿಟ್ಟಿದ್ದೆನು. ಪುಡಿಯನ್ನು ನೀರಿನಲ್ಲಿ ಕರಗಿಸಿ ನಾನು ಬಾಯಿಗೆ ಹಾಕಿಕೊಳ್ಳುವದಕ್ಕಿಲ್ಲ, ಅದರ ರುಚಿಯು ಹಾಲಿನ ರುಚಿಯಂತೆಯೇ ಕಂಡಿತು. ಸೀಸೆಯ ಮೇಲಿದ್ದ ಚೀಟಿಯನ್ನು ಓದಲು ಇದು ಹಾಲಿನಿಂದ ಸಿದ್ಧಪಡಿಸಿದ ಪದಾರ್ಥವೆಂದು ಗೊತ್ತಾಯಿತು. ಅಂತು ನೀರು ಕುಡಿದಮೇಲೆ ನೀರು ಕೊಟ್ಟವನ ಜಾತಿ ಕೇಳಿದಂತಾಯಿತು. ನಾನು ಆ ಪುಡಿಯ ಉಪಯೋಗವನ್ನು ಬಿಟ್ಟುಬಿಟ್ಟೆನು.

ಈ ವಿಚಾರವನ್ನು ಲೇಡಿ ಸೆಸಲಿಯಾರವರಿಗೆ ತಿಳಿಸಿ ಇದಕ್ಕಾಗಿ ಚಿಂತಿಸಬೇಡಿರೆಂದು ಅವರಿಗೆ ಬರೆದೆನು. ಅವರು ಒಡನೆಯೇ ಓಡಿಬಂದು ತಮ್ಮ ದುಃಖವನ್ನು ವ್ಯಕ್ತಪಡಿಸಿದರು. ಆಕೆಯ ಮಿತ್ರರು ಸೀಸೆಯ ಮೇಲಿನ ಚೀಟಿಯನ್ನು ಓದಿಯೇ ಇರಲಿಲ್ಲ. ಇದರ ವಿಷಯವಾಗಿ ಯೋಚಿಸಕೂಡದೆಂದು ಕೋರಿ ಆಕೆಯು ಇಷ್ಟು ಕಷ್ಟಪಟ್ಟು ತಂದಿದ್ದ ಪದಾರ್ಥವನ್ನು ನಾನು ಉಪಯೋಗಿಸಲಾರದಿರಲು ನನ್ನ ವಿಷಾದವನ್ನು ತಿಳಿಸಿದೆನು. ಮತ್ತು ಅರಿಯದೆ ಹಾಲನ್ನು ಕುಡಿದುದರಿಂದ ನಾನು ತಪ್ಪು ಮಾಡಿದಂತೇನೂ ನನಗೆ ತೋರಲಿಲ್ಲವೆಂದು ಆಕೆಗೆ ನಂಬಿಕೆ ಹೇಳಿದೆನು.

ಲೇಡಿ ಸೆಸಿಲಿಯಾರವರೊಡನೆ ನನಗಿದ್ದ ಪರಿಚಯದ ಇತರ ಮಧುರ ಸಂಸ್ಮರಣಗಳನ್ನು ನಾನು ಬಿಟ್ಟುಬಿಡಬೇಕು. ಸಂಕಟಗಳ ಮತ್ತು ಆಶಾಭಂಗಗಳ ಮಧ್ಯೆ ನನ್ನನ್ನು ಸಂತೈಸಿದ ಮಿತ್ರರನೇಕರನ್ನು ನೆನಪಿಗೆ ತಂದುಕೊಳ್ಳಬಲ್ಲೆನು. ಶ್ರದ್ಧಾಳುಗಳು ಇವು

ಗಳಲ್ಲಿ ದೇವರು ದುಃಖವನ್ನೇ ಮಧುರವಾಗಿ ಮಾಡುವ ದಯಾಮಯ ಸಾಧನಗಳನ್ನು ಕಾಣುವರು.

ಡಾ. ಆಲಿನ್ಸನರು ಪುನಃ ಬಂದಾಗ ನಿಯಮಗಳನ್ನು ಸಡಿಲಿಸಿ ನನಗೆ ನೆಲಗಡಲೆಕಾಯಿಯ ಬೆಣ್ಣೆಯನ್ನಾಗಲಿ ಆಲಿವ್ ಎಣ್ಣೆಯನ್ನಾಗಲಿ ತೆಗೆದುಕೊಳ್ಳುವದಕ್ಕೂ ನನಗೆ ಬೇಕಾದರೆ ಕಾಯಿಪಲ್ಯಗಳನ್ನು ಅನ್ನದೊಡನೆ ಬೇಯಿಸಿ ತಿನ್ನವದಕ್ಕೂ ಅಪ್ಪಣೆ ಕೊಟ್ಟರು. ಈ ಬದಲಾವಣೆಗಳು ನನಗೆ ರುಚಿಸಿದುವಾದರೂ ಇವುಗಳಿಂದ ರೋಗವು ಸಂಪೂರ್ಣವಾಗಿ ಗುಣವಾಯಿತೆಂದು ಹೇಳುವಹಾಗಿಲ್ಲ. ಬಹು ಜಾಗರೂಕತೆಯ ಶುಶ್ರೂಷೆಯು ಇನ್ನೂ ಬೇಕಾಗಿದ್ದಿತು. ನಾನು ಹಾಸಿಗೆಯನ್ನು ಬಿಟ್ಟು ಬರಲಾಗುತ್ತಿರಲಿಲ್ಲ.

ಡಾ. ಮಹೆತಾರವರು ನನ್ನನ್ನು ಆಗಾಗ ನೋಡಿಕೊಂಡು ಹೋಗಲು ಬರುತ್ತಿದ್ದರು. "ನಾನು ಹೇಳಿದಂತೆ ಕೇಳಿದರೆ ನಿಮ್ಮ ಕಾಹಿಲೆಯನ್ನು ವಾಸಿಮಾಡುತ್ತೇನೆ." ಎಂದು ಅವರು ಸದಾ ಹೇಳುತ್ತಿದ್ದರು.

ಹೀಗೆ ನಡೆಯುತ್ತಿರಲು ಒಂದು ದಿನ ಮಿ. ರಾಬರ್ಟ್ಸರು ನನ್ನನ್ನು ನೋಡುವದಕ್ಕೆ ಬಂದು ನಾನು ಸ್ವದೇಶಕ್ಕೆ ಹಿಂತಿರುಗಬೇಕೆಂದು ಆಗ್ರಹಪೂರ್ವಕವಾಗಿ ಹೇಳಿದರು: "ನಿಮ್ಮ ಈಗಿನ ಸ್ಥಿತಿಯಲ್ಲಿ ನೀವಂತೂ ನೆಟ್ಲಿಗೆ ಹೋಗಲಾರಿರಿ. ಚಳಿಯು ಇನ್ನು ಮೇಲೆ ಇನ್ನೂ ಬಹಳ ಏರುತ್ತದೆ. ನೀವು ಹಿಂದುಸ್ತಾನಕ್ಕೆ ಹೋಗಬೇಕೆಂದು ನಾನು ಒತ್ತಿ ಹೇಳುತ್ತೇನೆ. ಏಕೆಂದರೆ ಅಲ್ಲಿಯೇ ನೀವು ಸಂಪೂರ್ಣವಾಗಿ ಗುಣಹೊಂದುವದು ಸಾಧ್ಯ. ನಿಮಗೆ ವಾಸಿಯಾದ ಮೇಲೆ ಯುದ್ಧವು ಇನ್ನೂ ನಡೆಯುತ್ತಿದ್ದರೆ ಸಹಾಯ ಮಾಡಲು ನಿಮಗೆ ಬೇಕಾದಷ್ಟು ಅವಕಾಶವಾಗುತ್ತದೆ.

ಇದುವರೆಗೆ ನೀವು ಮಾಡಿರುವದು ಕೂಡ ಅಗಣ್ಯವಾದುದೆಂದು ನಾನೆಂದಿಗೂ ಎಣಿಸುವದಿಲ್ಲ."

ನಾನು ಅವರ ಸಲಹೆಗೆ ಒಪ್ಪಿ ಹಿಂದುಸ್ಥಾನಕ್ಕೆ ಹೋಗಲು ಸಿದ್ಧಪಡಿಸಕೊಳ್ಳತೊಡಗಿದೆನು.



೪೩

# ಸ್ವದೇಶಕ್ಕೆ ತೆರಳಿದುದು

ಕಾಲ್‍ಬಾಕರು ಹಿಂದುಸ್ತಾನಕ್ಕೆ ಹೋಗಬೇಕೆಂಬ ಉದ್ದೇಶದಿಂದ ನನ್ನೊಡನೆ ಇಂಗ್ಲೆಂಡಿಗೆ ಬಂದಿದ್ದರು. ನಾವಿಬ್ಬರೂ ಒಂದೇ ಕಡೆ ಇಳಿದಿದ್ದೆವು, ಒಂದೇ ಜಹಜಿನಲ್ಲಿ ಹೊರಡಬೇಕೆಂದು ನಮಗೆ ಇಷ್ಟವಿದ್ದಿತು. ಆದರೆ ಸರಕಾರದವರು ಜರ್ಮನರನ್ನು ಕಣ್ಣಿಟ್ಟು ಬಹು ಎಚ್ಚರಿಕೆಯಿಂದ ನೋಡುತ್ತಿದ್ದುದರಿಂದ ಕಾಲ್‍ಬಾಕರಿಗೆ ರಹದಾರಿಯು (ಅಪ್ಪಣೆಚೀಟಿ) ದೊರಕುವ ವಿಷಯದಲ್ಲಿ ನಮಗೆ ಸಂದೇಹವಿದ್ದಿತು. ಅದಕ್ಕಾಗಿ ನಾನು ಕೈಯಲ್ಲಾದಷ್ಟು ಪ್ರಯತ್ನಪಟ್ಟೆನು. ರಾಬರ್ಟ್‍ಸರಿಗೂ ಅವರಿಗೆ ರಹದಾರಿಯನ್ನು ಕೊಡಿಸಬೇಕೆಂಬ ಅಭಿಪ್ರಾಯವಿದ್ದುದರಿಂದ ಅವರು ಅದಕ್ಕಾಗಿ ವೈಸ್‍ರಾಯರಿಗೆ ತಾರು ಕೊಟ್ಟರು. ಆದರೆ ಒಡನೆಯೇ ಅದಕ್ಕೆ ಲಾರ್ಡ್ ಹಾರ್ಡಿಂಜರಿಂದ ಉತ್ತರ ಬಂದಿತು: "ಇಂತಹ ಜವಾಬ್ದಾರಿಯನ್ನು ಹೊತ್ತುಕೊಳ್ಳಲು ಹಿಂದುಸ್ತಾನದ ಸರಕಾರದವರು ಸಿದ್ಧರಾಗಿಲ್ಲವೆಂದು ವಿಷಾದಿಸುತ್ತೇನೆ." ಎಂದು. ಈ ಉತ್ತರದ ಪರಿಣಾಮವನ್ನು ನಾವೆಲ್ಲರೂ ತಿಳಿದುಕೊಂಡೆವು.

ಕಾಲ್‍ಬಾಕರಿಂದ ಅಗಲುವದು ನನಗೆ ಬಹು ದುಃಖಕರವಾಗಿದ್ದಿತು. ಆದರೆ ಅವರಿಗೆ ಇನ್ನೂ ಹೆಚ್ಚು ಸಂಕಟವಾಯಿತೆಂಬುದು ನನಗೆ ಕಾಣಿಸುತ್ತಿದ್ದಿತು. ಅವರು ಹಿಂದುಸ್ತಾನಕ್ಕೆ ಬರುವದು ಸಾಧ್ಯವಾಗಿದ್ದಿದ್ದರೆ ಅವರು ಇಂದು ನೆಲ ಉತ್ತು ಅರಿವೆ ನೆಯ್ದು ಸರಳಜೀವನವನ್ನು ನಡೆಸುತ್ತಾ ಇರುತ್ತಿದ್ದರು. ಈಗ ಅವರು ದಕ್ಷಿಣ ಆಫ್ರಿಕದಲ್ಲಿ ತಾವು ಮೊದಲು ನಡೆಸುತ್ತಿದ್ದ ರೀತಿಯಲ್ಲಿಯೇ ಜೀವನವನ್ನು ನಡೆಸುತ್ತಾ ಶಿಲ್ಪಿಗಳಾಗಿ ಕೈತುಂಬ ಕೆಲಸ ಮಾಡುತ್ತಿದ್ದಾರೆ.

ನಾವು ಮೂರನೆಯ ದರ್ಜೆಯಲ್ಲಿ ಹೋಗಬೇಕೆಂದಿದ್ದೆವು. ಆದರೆ ಪಿ ಅಂಡ್ ಒ ಕಂಪೆನಿಯ ಜಹಜುಗಳಲ್ಲಿ ಮೂರನೆಯ ತರಗತಿಯ ಟಿಕೆಟುಗಳು ದೊರಕುತ್ತಿರಲಿಲ್ಲವಾದುದರಿಂದ ನಾವು ಎರಡನೆಯ ವರ್ಗದಲ್ಲಿ ಹೋಗಬೇಕಾಯಿತು.

ಜಹಜಿನಲ್ಲಿ ಹೊಸ ಹಣ್ಣು ಸಿಕ್ಕುತ್ತಿದ್ದಿತಾದರೂ ಒಣಗಿಸಿದ ಹಣ್ಣು ದೊರಕುತ್ತಿರಲಿಲ್ಲವಾದುದರಿಂದ ನಾವು ದಕ್ಷಿಣ ಆಫ್ರಿಕದಿಂದ ತಂದಿದ್ದ ಹಣ್ಣನ್ನು ಜೊತೆಗೆ ತೆಗೆದುಕೊಂಡು ಹೋದೆವು.

ಡಾ. ಜೀವರಾಜ ಮ ಹೆ ತಾ ರ ವ ರು ನನ್ನ ಪಕ್ಕೆಗೆ 'ಮೀಡ್ಸ್ ಪ್ಲಾಸ್ಟರ್' ಎಂಬ ಪುಡಿಯ ಪಟ್ಟಿಯನ್ನು ಕಟ್ಟಿ ನಾನು ಕೆಂಪು ಸಮುದ್ರವನ್ನು ತಲುಪುವವರೆಗೂ ಅದನ್ನು ಬಿಚ್ಚಕೂಡದೆಂದು ಹೇಳಿದ್ದರು. ನಾನು ಎರಡು ದಿವಸ ಇದರ ತೊಂದರೆಯನ್ನು ಸಹಿಸಿಕೊಂಡಿದ್ದೆನು. ಆದರೆ ಕಡೆಗೆ ನಾನು ಇದನ್ನು ತಡೆಯಲಾಗಲಿಲ್ಲ. ಪಟ್ಟಿಯನ್ನು ಬಿಚ್ಚಿ ಮೈ ಕೈ ಉಜ್ಜಿಕೊಂಡು ಚೊಕ್ಕಟವಾಗಿ ಸ್ನಾನಮಾಡುವ ಸ್ವಾತಂತ್ರ್ಯವನ್ನು ಸಂಪಾದಿಸಲು ನನಗೆ ಬಹು ಕಷ್ಟವಾಯಿತು.

ಹಣ್ಣುಹಂಪಲೇ ಮುಖ್ಯವಾಗಿ ನನ್ನ ಆಹಾರವಾಗಿದ್ದಿತು. ದಿನದಿನವೂ ನನ್ನ ಶರೀರಸ್ಥಿತಿಯು ಉತ್ತಮಹೊಂದುತ್ತಿದ್ದುದು ನನಗೆ ತೋರಿಬಂದಿತು. ನಾನು ಸೂಯೆಸ್ ಕಾಲುವೆಯನ್ನು ಸೇರುವ ಹೊತ್ತಿಗೆ ನನಗೆ ಬಹುಮಟ್ಟಿಗೆ ಗುಣವಾಯಿತು. ನಿಶ್ಶಕ್ತಿಯೇನೋ ತೋರುತ್ತಿದ್ದಿತು. ಆದರೆ ಅಪಾಯವನ್ನು ಪೂರ್ತಿಯಾಗಿ ದಾಟಿದೆನೆಂದು ನನಗೆ ಧೈರ್ಯ ಬಂದಿತು. ವ್ಯಾಯಾಮವನ್ನು ಬರಬರುತ್ತಾ ಹೆಚ್ಚು ಮಾಡಿದೆನು. ಸಮಶೀತೋಷ್ಣವಲಯದ ನಿರ್ಮಲವಾದ ಗಾಳಿಯೇ ನನ್ನ ಆರೋಗ್ಯಾಭಿವೃದ್ಧಿಗೆ ಮುಖ್ಯವಾದ ಕಾರಣವೆಂದು ನಾನು ಎಣಿಸಿದೆನು.

ಈ ಜಹಜಿನಲ್ಲಿ ಆಂಗ್ಲೇಯರಿಗೂ ಭಾರತೀಯರಿಗೂ ಮಧ್ಯೆ ನಾನು ಕಂಡ ಭೇದಭಾವವನ್ನು ದಕ್ಷಿಣ ಆಫ್ರಿಕದಿಂದ ನಾನು

ಸೀಮೆಗೆ ಮಾಡಿದ ಯಾನದಲ್ಲಿ ಕೂಡ ಕಂಡಿರಲಿಲ್ಲ. ಇದಕ್ಕೆ ಕಾರಣವು ಹಿಂದಿನ ಅನುಭವವೋ ಅಥವಾ ಬೇರೆಯೋ ನಾನು ಕಾಣೆ. ಕೆಲವು ಮಂದಿ ಆಂಗ್ಲರೊಡನೆ ನಾನು ಮಾತನಾಡಿದು ದೇನೋ ನಿಜ. ಆದರೆ ಈ ಮಾತುಕಥೆಯು ಕೇವಲ 'ಸುಪ್ರಭಾತ', 'ಶರಣಾರ್ತಿ', ಇವುಗಳಲ್ಲಿಯೇ ಮುಗಿದುಹೋಯಿತು. ದಕ್ಷಿಣ ಆಫ್ರಿಕದ ಜಹಜುಗಳಲ್ಲಿ ನಡೆಯುತ್ತಿದ್ದಂತೆ ಇಲ್ಲಿನ ಸಂಭಾಷಣೆಗಳು ಹಾರ್ದಿಕವಾಗಿದ್ದುದೇ ಅಪೂರ್ವ. ವ್ಯಕ್ತವಾಗಿ ಅಥವಾ ಅವ್ಯಕ್ತವಾಗಿ ಆಂಗ್ಲೇಯನ ಮನಸ್ಸಿನಲ್ಲಿದ್ದ ತಾನು ಆಳರಸರ ಕುಲದವನೆಂಬ ಭಾವನೆಯೂ ಅದೇ ರೀತಿಯಾಗಿ ಭಾರತೀಯನ ಮನಸ್ಸಿನಲ್ಲಿದ್ದ ತಾನು ಆಳುಗಳ ಕುಲದವನೆಂಬ ಭಾವನೆಯೂ ಇದಕ್ಕೆ ಕಾರಣವಾಗಿದ್ದುವೆಂದು ನನಗೆ ತೋರುತ್ತದೆ.

ಈ ವಾತಾವರಣದಿಂದ ಹೊರಬಿದ್ದು ಮನೆ ಸೇರಲು ನಾನು ಆತುರನಾಗಿದ್ದೆನು.

ಏಡನಿಗೆ ಬರುತ್ತಲೇ ನಮಗೆ ಸ್ವಲ್ಪಮಟ್ಟಿಗೆ ಮನೆಗೆ ಬಂದಂತೆ ತೋರತೊಡಗಿತು. ನಮಗೆ ಏಡನ್‌ವಾಲಾರವರ ಮನೆತನವು ಚೆನ್ನಾಗಿ ಗೊತ್ತಿದ್ದಿತು. ಏಕೆಂದರೆ ನಾವು ಮಿ· ಕೈಕೋಬಾದ್‌ಕಾವಸ್ಜೀ ದಿನ್‌ಷಾರವರನ್ನು ಡರಬನಿನಲ್ಲಿಯೇ ನೋಡಿದ್ದೆವು. ಅಲ್ಲಿ ಅವರೊಡನೆಯೂ ಅವರ ಪತ್ನಿಯೊಡನೆಯೂ ಗಾಢಪರಿಚಯವಾಗಿದ್ದಿತು.

ಕೆಲವು ದಿನಗಳಲ್ಲಿ ನಾವು ಮುಂಬಯಿಯನ್ನು ಸೇರಿದೆವು. ಹತ್ತು ವರ್ಷದ ಪ್ರವಾಸವಾದ ಮೇಲೆ ಸ್ವದೇಶಕ್ಕೆ ಹಿಂತಿರುಗುವದರ ಆನಂದವನ್ನು ಹೇಳುವದು ಹೇಗೆ?

ಗೋಖಲೆಯವರು ನನ್ನ ಸ್ವಾಗತಕ್ಕೆ ಸನ್ನಾಹ ಮಾಡಿದ್ದರು. ಅವರ ದೇಹಸ್ಥಿತಿಯು ಸೂಕ್ಷ್ಮವಾಗಿದ್ದರೂ ಅವರು ಇದಕ್ಕಾಗಿ ಮುಂಬಯಿಗೆ ಬಂದಿದ್ದರು. ಅವರಲ್ಲಿ ಐಕ್ಯಹೊಂದಿ ನನ್ನ ಹೊರೆಯನ್ನು ಕಳೆಯಬೇಕೆಂಬ ಉತ್ಸಾಹದಿಂದ ನಾನು ಹಿಂದುಸ್ತಾನದಲ್ಲಿ ಕಾಲಿಟ್ಟೆನು. ಆದರೆ ದೈವೇಚ್ಛೆಯು ಬೇರೆಯಾಗಿದ್ದಿತು.



## ೪೪

# ವಕೀಲಿಯ ಕೆಲವು ನೆನಹುಗಳು

ಹಿಂದುಸ್ಥಾನದಲ್ಲಿ ನನ್ನ ಜೀವನಚರಿತ್ರೆಯನ್ನು ಬಣ್ಣಿಸತೊಡಗುವದಕ್ಕೆ ಮುಂಚೆ ನಾನು ಉದ್ದೇಶಪೂರ್ವಕವಾಗಿ ಬರೆಯದೆ ಬಿಟ್ಟಿರುವ ಕೆಲವು ದಕ್ಷಿಣ ಆಫ್ರಿಕದ ಅನುಭವಗಳನ್ನು ವಿವರಿಸುವದು ಅಗತ್ಯವೆಂದು ತೋರುತ್ತದೆ.

ಕೆಲವು ವಕೀಲಮಿತ್ರರು ನನ್ನ ವಕೀಲಿಯ ಸಂಸ್ಮರಣಗಳನ್ನು ತಿಳಿಸಬೇಕೆಂದು ಹೇಳಿದ್ದಾರೆ. ಇವುಗಳ ಸಂಖ್ಯೆಯು ಎಷ್ಟು ಅಧಿಕವಾಗಿದೆಯೆಂದರೆ ನಾನು ಇವೆಲ್ಲವುಗಳನ್ನೂ ವರ್ಣಿಸತೊಡಗಿದರೆ ಇದೇ ಒಂದು ಗ್ರಂಥವಾಗುವುದು. ಅದೂ ಅಲ್ಲದೆ ಅಂತಹ ವರ್ಣನೆಯು ಈ ಪುಸ್ತಕದ ಪರಿಮಿತಿಯನ್ನು ಮೀರುವುದು. ಆದರೆ ಸತ್ಯೋಪಾಸನೆಗೆ ಸಂಬಂಧಿಸಿದ ಕೆಲವನ್ನು ಸ್ಮರಣೆಗೆ ತಂದುಕೊಳ್ಳುವದು ಪ್ರಾಯಶಃ ಅನುಚಿತವಾಗಲಾರದು.

ನನ್ನ ವಕೀಲಿಯ ಉದ್ಯೋಗದಲ್ಲಿ ನಾನು ಎಂದೂ ಅಸತ್ಯವನ್ನು ಆಶ್ರಯಿಸಲಿಲ್ಲ. ಈ ಕೆಲಸದಲ್ಲಿ ಎಷ್ಟೋ ಭಾಗವು ಸಾರ್ವಜನಿಕಸೇವೆಗೆ ಸಂಬಂಧಪಟ್ಟುದಾಗಿದ್ದಿತು. ಇದಕ್ಕಾಗಿ ನಾನು ನನಗೆ ತಗಲುತ್ತಿದ್ದ ವೆಚ್ಚವೆಷ್ಟೋ ಅಷ್ಟು ಹಣವನ್ನು ಮಾತ್ರ ತೆಗೆದುಕೊಳ್ಳುತ್ತಿದ್ದೆನು; ಕೆಲವು ವೇಳೆ ನಾನು ಇದನ್ನೂ ಕೈಯಿಂದ ಕೊಡುತ್ತಿದ್ದೆನು. ನನಗೆ ನೆನಪಿರುವಮಟ್ಟಿಗೆ ಇದನ್ನೆಲ್ಲಾ ನಾನು ಆಗಲೇ ತಿಳಿಸಿದ್ದೇನೆ. ಇಷ್ಟು ಹೇಳಿದುದರಿಂದ ನನ್ನ ವಕೀಲಿಯ ಉದ್ಯೋಗದ ಸಂಬಂಧವಾಗಿ ಹೇಳಲಗತ್ಯವಾದ ವಿಷಯಗಳನ್ನೆಲ್ಲಾ ಹೇಳಿರುವೆನೆಂದು ನಾನು ತಿಳಿದುಕೊಂಡಿದ್ದೆನು. ಆದರೆ ನಾನು ಇನ್ನೂ ಹೆಚ್ಚಾಗಿ ತಿಳಿಸಬೇಕೆಂದು ಮಿತ್ರರು ಇಚ್ಛಿಸುತ್ತಾರೆ. ಸತ್ಯದ ಹಾದಿಯನ್ನು ಬಿಡಲು

ನಾನು ಒಪ್ಪದ ಸಂದರ್ಭಗಳನ್ನು—ಎಷ್ಟೇ ಸ್ಥೂಲವಾಗಿ ಆಗಲಿ—ನಾನು ವರ್ಣಿಸುವದಾದರೆ ಇದರಿಂದ ವಕೀಲರಿಗೆ ಲಾಭವುಂಟಾಗ ಬಹುದೆಂದು ಅವರು ಎಣಿಸುವಂತೆ ತೋರುತ್ತದೆ.

ನಾನು ವಿದ್ಯಾರ್ಥಿಯಾಗಿದ್ದಾಗ ವಕೀಲಿಯೆಂದರೆ ಸಟೆಗಾರರ ಉದ್ಯೋಗವೆಂದು ಹೇಳುವದನ್ನು ಕೇಳಿದ್ದೆನು. ಆದರೆ ಸುಳ್ಳು ಹೇಳುವದರಿಂದ ನಾನು ಹಣವನ್ನಾಗಲಿ ಪದವಿಯನ್ನಾಗಲಿ ಗಳಿಸ ಬೇಕೆಂದಿರಲಿಲ್ಲವಾದುದರಿಂದ ಇದರಿಂದ ನನ್ನ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ.

ನನ್ನ ಈ ಸಿದ್ಧಾಂತವು ಅನೇಕವೇಳೆ ಪರೀಕ್ಷೆಗೊಳಗಾಯಿತು. ಎಷ್ಟೋ ಬಾರಿ ಇದಿರುಕಡೆಯವರು ತಮ್ಮ ಸಾಕ್ಷಿಗಳು ಸುಳ್ಳು ಸಾಕ್ಷ್ಯವನ್ನು ಹೇಳುವಂತೆ ಸಿದ್ಧಪಡಿಸಿರುವರೆಂದೂ ನಾನು ನಮ್ಮ ಕಡೆಯ ಸಾಕ್ಷಿಗಳಿಗಾಗಲಿ ಕಕ್ಷಿಗಾರನಿಗಾಗಲಿ ಸುಳ್ಳು ಹೇಳಲು ಉತ್ತೇಜನ ಕೊಟ್ಟರೆ ಸಾಕು, ನಮ್ಮ ಪಕ್ಷವು ಗೆಲ್ಲುವುದೆಂದೂ ನನಗೆ ಗೊತ್ತಾಗುತ್ತಿದ್ದಿತು. ಆದರೆ ನಾನು ಈ ಬಲೆಗೆ ಬೀಳದಂತೆ ಸದಾ ಎಚ್ಚರವಾಗಿರುತ್ತಿದ್ದೆನು. ನನ್ನ ಕಕ್ಷಿಗಾರನು ನನ್ನನ್ನು ಮೋಸಪಡಿಸಿರುವನೆಂಬ ಸಂಶಯವು ಮೊಕದ್ದಮೆಯನ್ನು ಗೆದ್ದಮೇಲೆ ನನ್ನ ಮನಸ್ಸಿನಲ್ಲಿ ಹುಟ್ಟಿದ ಸಂದರ್ಭವೊಂದು ಮಾತ್ರ ನನಗೆ ನೆನಪಿದೆ. ನನ್ನ ಕಕ್ಷಿಗಾರನ ವ್ಯಾಜ್ಯವು ನ್ಯಾಯವಾಗಿದ್ದರೆ ಮಾತ್ರ ನಮಗೆ ಜಯವಾಗ ಬೇಕು ಎಂದು ನಾನು ಸದಾ ನನ್ನ ಹೃದಯಾಂತರದಲ್ಲಿ ಹಾರೈ ಸುತ್ತಿದ್ದೆನು. ಮೊಕದ್ದಮೆಯು ನಮ್ಮ ಕಡೆ ಆದರೆ ಇಷ್ಟು ಹಣವನ್ನು ಕೊಡಬೇಕೆಂದು ನಾನು ಎಂದೂ ರುಸುಮನ್ನು ಗೊತ್ತು ಮಾಡಿದಂತೆ ನನಗೆ ನೆನಪಿಲ್ಲ. ನನ್ನ ಕಕ್ಷಿಗಾರನು ಗೆಲ್ಲಲಿ, ಸೋಲಲಿ ನಾನು ಗೊತ್ತಾದ ರುಸುಮನ್ನು ನಿರೀಕ್ಷಿಸುತ್ತಿದ್ದೆನು—ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ. ನಾನು ಸುಳ್ಳು ವ್ಯಾಜ್ಯವನ್ನು ತೆಗೆದುಕೊಳ್ಳುವೆನೆಂದಾಗಲೀ ಕಕ್ಷಿಗಾರರಿಗೆ ಸುಳ್ಳು

ಸಾಕ್ಷ್ಯವನ್ನು ಹೇಳಿಕೊಡುವೆನೆಂದಾಗಲೀ ನಿರೀಕ್ಷಿಸಕೂಡದೆಂದು ನಾನು ಮೊಟ್ಟಮೊದಲೇ ಪ್ರತಿಯೊಬ್ಬ ಹೊಸ ಕಕ್ಷಿಗಾರನನ್ನೂ ಎಚ್ಚರಿಸುತ್ತಿದ್ದೆನು. ಇದರ ಫಲವಾಗಿ ನಾನು ಎಂತಹ ಹೆಸರನ್ನು ಗಳಿಸಿದೆನೆಂದರೆ ಸುಳ್ಳು ವ್ಯಾಜ್ಯವೊಂದೂ ನನ್ನ ಬಳಿಗೆ ಬರುತ್ತಿರಲಿಲ್ಲ. ಅಷ್ಟೇಕೆ, ನನ್ನ ಕಕ್ಷಿಗಾರರಲ್ಲಿ ಕೆಲವರು ತಮ್ಮ ನ್ಯಾಯವಾದ ಮೊಕದ್ದಮೆಗಳನ್ನು ನನಗಾಗಿ ತೆಗಿದಿಟ್ಟು ಬೇರೆಯವುಗಳನ್ನು ಇತರರ ಬಳಿಗೆ ತೆಗೆದುಕೊಂಡು ಹೋಗುತ್ತಿದ್ದರು.

ಒಂದು ಮೊಕದ್ದಮೆಯು ಒದಗಿ ನನ್ನನ್ನು ಕಠಿಣ ಪರೀಕ್ಷೆಗೆ ಗುರಿಮಾಡಿತು. ನನ್ನ ಅತ್ಯುತ್ತಮ ಕಕ್ಷಿಗಾರರಲ್ಲಿ ಒಬ್ಬಾತನು ಇದನ್ನು ನನ್ನ ಬಳಿಗೆ ತೆಗೆದುಕೊಂಡು ಬಂದನು. ಇದು ಬಹು ತೊಡಕಾದ ಲೆಕ್ಕಕ್ಕೆ ಸಂಬಂಧಿಸಿದ್ದು ಅನೇಕ ದಿನ ಜರುಗಿದ್ದಿತು. ಇದರ ಹಲಕೆಲವು ಭಾಗವು ನಾಲ್ಕಾರು ನ್ಯಾಯಸ್ಥಾನಗಳ ಮುಂದೆ ನಡೆದಿದ್ದಿತು. ಕಟ್ಟಕಡೆಗೆ ಲೆಕ್ಕಪತ್ರದ ಭಾಗವನ್ನು ನ್ಯಾಯಸ್ಥಾನವು ನಿರ್ಣಯಕ್ಕಾಗಿ ಕೆಲ ಲೆಕ್ಕಾಚಾರದಲ್ಲಿ ಪ್ರವೀಣರಾದ ಪಂಚಾಯಿತರೊಬ್ಬರ ವಶಕ್ಕೆ ಕೊಟ್ಟಿತು. ಅವರ ನಿರ್ಣಯವು ಸಂಪೂರ್ಣವಾಗಿ ನನ್ನ ಕಕ್ಷಿಗಾರನ ಪರವಾಗಿದ್ದಿತು. ಆದರೆ ಪಂಚಾಯಿತರು ಲೆಕ್ಕಮಾಡುವದರಲ್ಲಿ ಅಜಾಗರೂಕತೆಯಿಂದ ಒಂದು ತಪ್ಪನ್ನು ಮಾಡಿದ್ದರು. ಅದು ಪರಿಣಾಮದಲ್ಲಿ ಎಷ್ಟೇ ಸಣ್ಣದಾಗಿರಲಿ ಸ್ವಭಾವದಲ್ಲಿ ಗುರುತರವಾಗಿದ್ದಿತು. ಏಕೆಂದರೆ ಅವರು ಖರ್ಚಿನ ಖಾತೆಗೆ ಬೀಳಬೇಕಾಗಿದ್ದುದನ್ನು ಜಮಾ ಖಾತೆಗೆ ಸೇರಿಸಿಬಿಟ್ಟಿದ್ದರು. ಇದಿರು ಪಕ್ಷದವರು ಪಂಚಾಯಿತರ ನಿರ್ಣಯವನ್ನು ಬೇರೆ ಕಾರಣಗಳಿಗಾಗಿ ವಿರೋಧಿಸಿದ್ದರು. ನಾನು ನಮ್ಮ ಕಕ್ಷಿಗಾರನ ಕಿರಿಯ ವಕೀಲನಾಗಿದ್ದೆನು. ಹಿರಿಯ ವಕೀಲರಿಗೆ ಮೇಲೆ ಹೇಳಿದ ತಪ್ಪು ಗೊತ್ತಾಗಲು ಅವರು ನಮ್ಮ ಕಕ್ಷಿಗಾರನು ಅದನ್ನು ಒಪ್ಪಿಕೊಳ್ಳಲು ಬದ್ಧನಲ್ಲವೆಂದು ಅಭಿಪ್ರಾಯಪಟ್ಟರು. ಯಾವ ವಕೀಲನೂ ತನ್ನ ಕಕ್ಷಿಗಾರನ ಹಿತಕ್ಕೆ ವಿರೋಧವಾದ ವಿಷಯವಾವುದನ್ನೂ ಒಪ್ಪಿಕೊಳ್ಳತಕ್ಕುದಿಲ್ಲವೆಂಬುದು

ಅವರ ಮತವಾಗಿದ್ದಿತು. ನಾನು ತಪ್ಪನ್ನು ಒಪ್ಪಿಕೊಳ್ಳುವದು ನಮ್ಮ ಕರ್ತವ್ಯವೆಂದು ಹೇಳಿದೆನು.

ಆದರೆ ಹಿರಿಯ ವಕೀಲರು "ಹಾಗೆ ಮಾಡಿದರೆ ನ್ಯಾಯಾಸ್ಥಾನವು ಪಂಚಾಯಿತರ ನಿರ್ಣಯವನ್ನು ಸಂಪೂರ್ಣವಾಗಿ ಹೊಡೆದು ಹಾಕುವ ಸಂಭವವು ಬಹು ಹೆಚ್ಚು. ಪ್ರಜ್ಞೆ ಇರುವ ಯಾವ ವಕೀಲನೂ ತನ್ನ ಕಕ್ಷಿಗಾರನ ಮೊಕದ್ದಮೆಯನ್ನು ಆ ಮಟ್ಟಿಗೆ ಅಪಾಯದಲ್ಲಿ ಸಿಕ್ಕಿಸುವದಿಲ್ಲ. ಅದೇನೇ ಆಗಲಿ ಅಂತಹ ಜವಾಬ್ದಾರಿಯನ್ನು ಹೊರಲು ನಾನೆಂದಿಗೂ ಒಪ್ಪೆನು. ಮೊಕದ್ದಮೆಯನ್ನು ಪುನಃ ಮೊದಲಿನಿಂದ ವಿಚಾರಣೆಮಾಡಲು ಕಳಿಸಿದರೆ ಅದರಿಂದ ನಮ್ಮ ಕಕ್ಷಿಗಾರನಿಗೆ ಎಷ್ಟು ವೆಚ್ಚವಾಗುವದೆಂದಾಗಲಿ ಹೇಳಲು ಸಾಧ್ಯವಿಲ್ಲ!" ಎಂದು ಹೇಳಿದರು.

ಈ ಸಂವಾದವು ನಡೆದಾಗ ಕಕ್ಷಿಗಾರನೂ ಅಲ್ಲಿದ್ದನು.

ನಾನು "ನಮ್ಮ ಕಕ್ಷಿಗಾರನೂ ನಾವೂ ಇದರಿಂದ ಉಂಟಾಗಬಹುದಾದ ಅಪಾಯಕ್ಕೆ ಸಿದ್ಧರಾಗಿರಬೇಕೆಂದು ನನಗೆ ತೋರುತ್ತದೆ. ನಾವು ತಪ್ಪನ್ನು ಒಪ್ಪಿಕೊಳ್ಳದಿದ್ದುದರಿಂದ ಮಾತ್ರ ಪಂಚಾಯಿತರ ನಿರ್ಣಯವನ್ನು ಅದು ಅನ್ಯಾಯವಾಗಿದ್ದರೂ ನ್ಯಾಯಸ್ಥಾನವು ಒಪ್ಪುವದೆಂದು ಖಂಡಿತವಾಗಿ ಹೇಗೆ ಗೊತ್ತು? ಮತ್ತು ನಾವು ಒಪ್ಪಿಕೊಳ್ಳುವದರಿಂದ ನಮ್ಮ ಕಕ್ಷಿಗಾರನು ಸೋಲುವನೆನ್ನೋಣ. ಅದರಿಂದ ಹಾನಿಯೇನು?" ಎಂದು ಕೇಳಿದೆನು.

"ಆದರೆ ನಾವು ಏಕೆ ತಾನೆ ಒಪ್ಪಿಕೊಳ್ಳಬೇಕು?" ಎಂದರು ಹಿರಿಯ ವಕೀಲರು.

ನಾನು "ನ್ಯಾಯಾಸ್ಥಾನವಾಗಲಿ ಇದಿರು ಕಡೆಯವರಾಗಲಿ ಅದನ್ನು ಕಂಡುಹಿಡಿಯುವದಿಲ್ಲವೆಂದು ಖಂಡಿತವಾಗಿ ಹೇಗೆ ಗೊತ್ತು?" ಎಂದು ಕೇಳಿದೆನು.

"ಒಳ್ಳೆಯದು, ಹಾಗಾದರೆ ನೀವು ಈ ಮೊಕದ್ದಮೆಯನ್ನು ವಾದಿಸುವರೇನು ? ನೀವು ಈಗ ಹೇಳಿದಂತೆ ವಾದಿಸಲು ನಾನು ಸಿದ್ಧನಾಗಿಲ್ಲ." ಎಂದು ಹಿರಿಯ ವಕೀಲರು ದೃಢತೆಯಿಂದ ಹೇಳಿದರು.

ನಾನು ನಮ್ರತೆಯಿಂದ "ನೀವು ವಾದಿಸುವದಿಲ್ಲವಾದರೆ ನಮ್ಮ ಕಕ್ಷಿಗಾರನು ಹಾಗೆ ಇಷ್ಟಪಟ್ಟರೆ ನಾನು ವಾದಿಸಲು ಸಿದ್ಧನಾಗಿದ್ದೇನೆ. ತಪ್ಪನ್ನು ಒಪ್ಪಿಕೊಳ್ಳದಿದ್ದರೆ ನಾನು ಮೊಕದ್ದಮೆಯನ್ನು ಮುಟ್ಟುವದೇ ಇಲ್ಲ." ಎಂದು ಹೇಳಿ ಕಕ್ಷಿಗಾರನ ಕಡೆಗೆ ನೋಡಿದೆನು. ಆತನು ಸ್ವಲ್ಪಮಟ್ಟಿಗೆ ಪೇಚಾಟಕ್ಕೆ ಸಿಕ್ಕಿದನು. ನಾನು ಮೊಟ್ಟಮೊದಲಿನಿಂದ ಈ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೆನು. ಕಕ್ಷಿಗಾರನಿಗೆ ನನ್ನಲ್ಲಿ ಸಂಪೂರ್ಣವಾದ ನಂಬಿಕೆಯಿದ್ದಿತು. ಆತನು ನನ್ನ ಸ್ವಭಾವವನ್ನು ಚೆನ್ನಾಗಿ ಅರಿತಿದ್ದನು. "ಒಳ್ಳೆಯದು, ಹಾಗಾದರೆ ನೀವೇ ವಾದಿಸಿ ತಪ್ಪನ್ನು ಒಪ್ಪಿಕೊಳ್ಳಿ. ನಮ್ಮ ಹಣೆಯಲ್ಲಿ ಹಾಗೆ ಬರೆದಿದ್ದರೆ ನಾವು ಸೋಲೋಣ. ದೇವರು ನ್ಯಾಯಪಕ್ಷವನ್ನು ರಕ್ಷಿಸಲಿ." ಎಂದು ಆತನು ಹೇಳಿದನು.

ನನಗೆ ಆನಂದವಾಯಿತು. ನಾನು ಆತನಿಂದ ಇದಕ್ಕೆ ಕಡಿಮೆಯಾಗಿಯೇನೂ ನಿರೀಕ್ಷಿಸಿರಲಿಲ್ಲ. ಹಿರಿಯ ವಕೀಲರು ಪುನಃ ನನ್ನನ್ನು ಎಚ್ಚರಗೊಳಿಸಿದರು; ನನ್ನ ಹಟಕ್ಕಾಗಿ ಮರುಕಗೊಂಡರು; ಆದರೂ ನನ್ನನ್ನು ಅಭಿನಂದಿಸಿದರು.

ನ್ಯಾಯಸ್ಥಾನದಲ್ಲಿ ಏನು ನಡೆಯಿತೆಂಬುದನ್ನು ಮುಂದಿನ ಅಧ್ಯಾಯದಲ್ಲಿ ನೋಡುವೆವು.



೪೫

# ಮೋಸ?

ನನ್ನ ಸಲಹೆಯ ವಿಷಯದಲ್ಲಿ ನನಗೆ ಸ್ವಲ್ಪವೂ ಸಂಶಯ ವಿಲ್ಲದಿದ್ದುದೇನೋ ಸರಿ. ಆದರೆ ಮೊಕದ್ದಮೆಯನ್ನು ಸರಿಯಾಗಿ ನಡೆಸುವದಕ್ಕೆ ನನಗಿರುವ ಯೋಗ್ಯತೆನ್ನು ಕುರಿತು ನಾನು ಬಹು ಸಂದೇಹಪಟ್ಟೆನು. ಇಂತಹ ಕಷ್ಟವಾದ ಮೊಕದ್ದಮೆ ಯನ್ನು ಶ್ರೇಷ್ಠನ್ಯಾಯಾಸ್ಥಾನದ ಮುಂದೆ ವಾದಿಸುವದು ಅತಿ ಸಾಹಸದ ವಿಷಯವೆಂದು ನನಗೆ ತೋರುತ್ತಿದ್ದಿತು. ನಾನು ಅಧೈರ್ಯದಿಂದ ಕಂಪಿಸುತ್ತಾ ನ್ಯಾಯಾಧೀಶರ ಮುಂದೆ ನಿಂತೆನು.

ಲೆಕ್ಕಪತ್ರದಲ್ಲಿದ್ದ ತಪ್ಪಿನ ವಿಚಾರವನ್ನುಹೇಳುತ್ತಲೇ ಒಬ್ಬರು ನ್ಯಾಯಾಧೀಶರು (ಶ್ರೇಷ್ಠನ್ಯಾಯಾಸ್ಥಾನದಲ್ಲಿ ಕೆಳಗಿನ ನ್ಯಾಯಾ ಸ್ಥಾನದ ತೀರ್ಪಿನ ಮೇಲೆ ಹೋಗಿರುವ ಮೊಕದ್ದಮೆಯನ್ನು ಇತ್ಯರ್ಥಮಾಡಲು ಸಾಮಾನ್ಯವಾಗಿ ಇಬ್ಬರು ನ್ಯಾಯಾಧೀಶರು ಕೂಡುತ್ತಾರೆ.) "ಗಾಂಧಿಯವರೇ, ಇದು ಮೋಸವಲ್ಲವೆ?" ಎಂದು ಕೇಳಿದರು.

ಈ ಆಪಾದನೆಯನ್ನು ಕೇಳಿ ನಾನು ಒಳಗೇ ಕೋಪದಿಂದ ಕುದಿದೆನು. ಏನೇನೂ ಆಧಾರವಿಲ್ಲದಿರುವಾಗ ಮೋಸದ ಆರೋ ಪಣೆಯನ್ನು ಹೊರುವದು ಸಹನಾತೀತವಾಗಿದ್ದಿತು.

"ಮೊಟ್ಟಮೊದಲಿನಿಂದ ಈ ರೀತಿಯಾಗಿ ಮನಸ್ಸು ಕೆಟ್ಟಿ ರುವ ನ್ಯಾಯಾಧೀಶರ ಮುಂದೆ ಈ ಕಷ್ಟವಾದ ಮೊಕದ್ದಮೆ ಯನ್ನು ನಾನು ವಾದಿಸಿ ಗೆಲ್ಲುವ ಸಂಭವವೆಲ್ಲಿ?" ಎಂದು ನನ್ನಲ್ಲಿ ನಾನೇ ಹೇಳಿಕೊಂಡೆನು. ಆದರೆ ಹೀಗೆ ಅಶಾಂತವಾದ ಮನ ಸ್ಸನ್ನು ಸಮಾಧಾನಕ್ಕೆ ತಂದುಕೊಂಡು "ನಾನು ಹೇಳುವದನ್ನು

ಸಂಪೂರ್ಣವಾಗಿ ಕೇಳದೆ ತಾವು ಮೋಸವಿದೆಯೆಂದು ಶಂಕಿಸುವದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ!" ಎಂದು ಉತ್ತರ ಕೊಟ್ಟೆನು.

"ನಾನೇನೂ ಆರೋಪಿಸಲಿಲ್ಲ. ನಾನು ಮಾಡಿದುದು ಕೇವಲ ಸೂಚನೆ." ಎಂದರು ನ್ಯಾಯಾಧೀಶರು.

"ತಮ್ಮ ಸೂಚನೆಯು ಈ ಸಂದರ್ಭದಲ್ಲಿ ಆರೋಪಣೆಯಾಗಿದೆಯೆಂದೇ ನನಗೆ ತೋರುತ್ತದೆ. ತಾವು ನನ್ನ ಹೇಳಿಕೆಯನ್ನು ಸಂಪೂರ್ಣವಾಗಿ ಕೇಳಿ ಆಮೇಲೆ ಕಾರಣ ತೋರಿದರೆ ನನ್ನ ಮೇಲೆ ತಪ್ಪು ಹೊರಿಸಬಹುದೆಂದು ಕೋರುತ್ತೇನೆ."

"ನೀವು ಮಾತನಾಡುತ್ತಿದ್ದಾಗ ಅಡ್ಡಬಂದುದಕ್ಕೆ ನಾನು ವಿಷಾದಿಸುತ್ತೇನೆ. ಲೆಕ್ಕಪತ್ರದಲ್ಲಿ ತಪ್ಪು ಹೇಗೆ ಬಿದ್ದಿತೆಂಬುದನ್ನು ನೀವು ವಿವರಿಸುತ್ತಿದ್ದಿರಲ್ಲ, ಅದನ್ನು ದಯೆಯಿಟ್ಟು ಮುಂದುವರಿಸಿ." ಎಂದು ನ್ಯಾಯಾಧೀಶರು ಹೇಳಿದರು.

ಸಮಾಧಾನ ಹೇಳಲು ನನ್ನಲ್ಲಿ ಸಾಕಾದಷ್ಟು ಸಾಮಗ್ರಿಯಿದ್ದಿತು. ನ್ಯಾಯಾಧೀಶರು ಈ ಪ್ರಶ್ನೆಯನ್ನು ಎತ್ತಿದುದರಿಂದ ಮೊಟ್ಟಮೊದಲಿನಿಂದ ನ್ಯಾಯಾಸ್ಥಾನವು ನನ್ನ ವಾದವನ್ನು ಗಮನಿಸಿ ಕೇಳುವಂತೆ ಮಾಡಲು ನನಗೆ ಸಾಧ್ಯವಾಯಿತು. ಇದರಿಂದ ನನಗೆ ಧೈರ್ಯಬಂದು ಸಮಾಧಾನವನ್ನು ವಿವರವಾಗಿ ಹೇಳಲು ಈ ಅವಕಾಶವನ್ನು ಉಪಯೋಗಿಸಿದೆನು. ನ್ಯಾಯಾಧೀಶರು ನಾನು ಹೇಳಿದುದನ್ನು ತಾಳ್ಮೆಯಿಂದ ಕೇಳಿದರು. ಲೆಕ್ಕದಲ್ಲಿ ಕಂಡುಬಂದ ಹೆಚ್ಚುಕಡಿಮೆಯು ಕೇವಲ ಅಜಾಗರೂಕತೆಯ ಫಲವೆಂದು ನ್ಯಾಯಾಧೀಶರು ಮನಗಾಣುವಂತೆ ಮಾಡಲು ನನಗೆ ಶಕ್ಯವಾಯಿತು. ಪಂಚಾಯಿತರು ಬಹು ಶ್ರಮಪಟ್ಟು ಸಿದ್ಧಪಡಿಸಿದ್ದ ನಿರ್ಣಯವನ್ನು ಸಂಪೂರ್ಣವಾಗಿ ತೊಡೆದುಹಾಕುವದು ಅವರ ಮನಸ್ಸಿಗೆ ಒಪ್ಪಲಿಲ್ಲ.

ಇದಿರು ಪಕ್ಷದ ವಕೀಲರು ನಾವು ಲೆಕ್ಕಪತ್ರದಲ್ಲಿ ತಪ್ಪನ್ನು ಒಪ್ಪಿಕೊಂಡಮೇಲೆ ತಾವು ಹೆಚ್ಚಾಗಿ ವಾದಿಸಬೇಕಾದುದಿಲ್ಲವೆಂಬ ನಂಬಿಕೆಯ ಆಶ್ರಯದಲ್ಲಿ ಸ್ವಸ್ಥಚಿತ್ತರಾಗಿದ್ದಂತೆ ಕಂಡಿತು. ಆದರೆ ನ್ಯಾಯಾಧೀಶರಿಗೆ ಆ ತಪ್ಪು ಕೇವಲ ಕೈತಪ್ಪಿಬಿದ್ದುದೆಂದೂ ಅದನ್ನು ಸುಲಭವಾಗಿ ತಿದ್ದಬಹುದೆಂದೂ ಮನವರಿಕೆಯಾಗಿದ್ದುದರಿಂದ ಅವರು ಆ ವಕೀಲರ ವಾದವನ್ನು ಆಗಾಗ ನಿಲ್ಲಿಸುತ್ತಿದ್ದರು. ವಕೀಲರು ಪಂಚಾಯಿತರ ನಿರ್ಣಯದಲ್ಲಿ ಹುಳುಕು ಕಂಡುಹಿಡಿಯಲು ಬಹು ಪ್ರಯತ್ನಪಟ್ಟರು. ಆದರೆ ಮೊಟ್ಟಮೊದಲು ನನ್ನ ಮೇಲೆ ಸಂಶಯವಿಟ್ಟಿದ್ದ ನ್ಯಾಯಾಧೀಶರೇ ಈಗ ಸಂಪೂರ್ಣವಾಗಿ ನಮ್ಮಕಡೆಗೆ ತಿರುಗಿದರು.

" ಗಾಂಧಿಯವರು ಲೆಕ್ಕದ ತಪ್ಪನ್ನು ಒಪ್ಪಿಕೊಂಡಿರಲಿಲ್ಲವೆನ್ನಿರಿ. ಆಗ ನೀವು ಏನು ಮಾಡುತ್ತಿದ್ದಿರಿ ? " ಎಂದು ಅವರು ಕೇಳಿದರು.

" ನಾವು ನಿಯಮಿಸಿದ ಗೃಹಸ್ಥರಿಗಿಂತಲು ಹೆಚ್ಚು ಯೋಗ್ಯರಾದ, ಹೆಚ್ಚು ಪ್ರಾಮಾಣಿಕರಾದ, ಆಯವ್ಯಯ ಶಾಸ್ತ್ರನಿಪುಣರನ್ನು ಪಡೆಯಲು ನಮಗೆ ಸಾಧ್ಯವಿರಲಿಲ್ಲ."

" ನಿಮ್ಮ ಪಕ್ಷವು ಎಲ್ಲರಿಗಿಂತ ಚೆನ್ನಾಗಿ ನಿಮಗೇ ಗೊತ್ತಿರುವುದೆಂದು ನ್ಯಾಯಸ್ಥಾನವು ಎಣಿಸಬೇಕು. ಯಾವ ಪ್ರವೀಣನಾಗಲಿ ಮಾಡಬಹುದಾದ ತಪ್ಪನ್ನು ಹೊರತು ಇನ್ನೇನನ್ನೂ ನೀವು ತೋರಿಸಲಾರಿರಾದರೆ ಸ್ಪಷ್ಟವಾಗಿ ಅಜಾಗರೂಕತೆಯಿಂದ ಉಂಟಾದ ಈ ತಪ್ಪಿಗಾಗಿ ಪುನಃ ಜಗಳವನ್ನು ಪ್ರಾರಂಭಿಸುವದಕ್ಕೂ ವೆಚ್ಚ ಮಾಡುವದಕ್ಕೂ ಕಕ್ಷಿಗಾರರನ್ನು ಬಲಾತ್ಕಾರಪಡಿಸಲು ನ್ಯಾಯಾಸ್ಥಾನವು ಹಿಂತೆಗೆಯುವುದು. ಅಂತಹ ತಪ್ಪನ್ನು ಸುಲಭವಾಗಿ ತಿದ್ದಲು ಸಾಧ್ಯವಿರುವಾಗ ವ್ಯವಹಾರವನ್ನು ಪುನಃ ಮೊದಲು ಮಾಡಬೇಕೆಂದು ನಾವು ಅಪ್ಪಣೆ ಮಾಡಲಾರೆವು. " ಎಂದು ನ್ಯಾಯಾಧೀಶರು ಹೇಳಿದರು.

ಹೀಗೆ ಇದಿರುಪಕ್ಷದ ವಕೀಲರ ಅಭ್ಯಂತರವು ಹಿಡಿಯಲಿಲ್ಲ. ಆ ತಪ್ಪನ್ನು ತಿದ್ದಿ ನ್ಯಾಯಸ್ಥಾನವು ಪಂಚಾಯಿತರ ನಿರ್ಣಯವನ್ನು ಸ್ವೀಕರಿಸಿತು ಅಥವಾ ಆ ತಪ್ಪನ್ನು ತಿದ್ದಬೇಕೆಂದು ಪಂಚಾಯಿತರಿಗೆ ಅಪ್ಪಣೆ ಮಾಡಿತು. ಇವೆರಡರಲ್ಲಿ ಯಾವುದು ನಡೆಯಿತೆಂಬುದು ನನಗೆ ಮರೆತು ಹೋಗಿದೆ.

ನನ್ನ ಹರ್ಷಕ್ಕೆ ಪಾರವೇ ಇರಲಿಲ್ಲ. ನನ್ನ ಕಕ್ಷಿಗಾರನಿಗೂ ಹಿರಿಯ ವಕೀಲರಿಗೂ ಅಷ್ಟೇ ಸಂತೋಷವಾಯಿತು. ಸತ್ಯಕ್ಕೆ ಭಂಗ ತರದೆ ವಕೀಲಿ ಉದ್ಯೋಗವನ್ನು ನಡೆಸುವದು ಅಸಾಧ್ಯವಲ್ಲವೆಂಬ ನನ್ನ ನಂಬಿಕೆಯು ದೃಢಪಟ್ಟಿತು.

ಆದರೆ ಆ ಉದ್ಯೋಗದ ಮೂಲದಲ್ಲಿಯೇ ಇದ್ದು ಅದನ್ನು ಕೆಡಿಸುವ ದೋಷವು ಮೊಕದ್ದಮೆಗಳನ್ನು ನಡೆಸುವದರಲ್ಲಿ ಸತ್ಯವನ್ನು ಪಾಲಿಸುವದರಿಂದ ಕೂಡ ಮಾಯುವಾಗುವದಿಲ್ಲವೆಂಬುದನ್ನು ಪಾಠಕರು ನೆನಪಿನಲ್ಲಿಡಲಿ.



೪೬

# ಕಕ್ಷಿಗಾರರು ಸಂಗಡಿಗರಾದುದು

ವಕೀಲಿ ಉದ್ಯೋಗದಲ್ಲಿ ನೇಟಾಲಿಗೂ ಟ್ರಾನ್ಸ್‌ವಾಲಿಗೂ ಇದ್ದ ವ್ಯತ್ಯಾಸವೇನೆಂದರೆ ನೇಟಾಲಿನಲ್ಲಿ ಅಡ್ವೊಕೇಟರೂ ಅಟಾರ್ನಿಗಳೂ ಅಲ್ಲಿನ ಎಲ್ಲಾ ನ್ಯಾಯಾಸ್ಥಾನಗಳಲ್ಲಿಯೂ ಪ್ರವೇಶಿಸಬಹುದಾಗಿದ್ದಿತು. ಆದರೆ ಟ್ರಾನ್ಸ್‌ವಾಲಿನಲ್ಲಿ ಮುಂಬಯಿಯಂತೆಯೇ ಅಡ್ವೊಕೇಟರ ಮತ್ತು ಅಟಾರ್ನಿಗಳ ಕಾರ್ಯಕ್ಷೇತ್ರಗಳು ಬೇರೆಯಾಗಿದ್ದುವು. ಬ್ಯಾರಿಸ್ಟರಾಗಿ ಬಂದವರು ಅಡ್ವೊಕೇಟರಾಗಿ ಕೆಲಸ ನಡೆಸುವರೋ ಅಥವಾ ಅಟಾರ್ನಿಯಾಗಿ ಉದ್ಯೋಗಮಾಡುವರೋ ಎಂದು ನಿರ್ಧರಿಸಲು ಅವರಿಗೆ ಅಧಿಕಾರವಿದ್ದಿತು. ಆದುದರಿಂದ ನಾನು ನೇಟಾಲಿನಲ್ಲಿ ಅಡ್ವೊಕೇಟಾಗಿಯೂ ಟ್ರಾನ್ಸ್‌ವಾಲಿನಲ್ಲಿ ಅಟಾರ್ನಿಯಾಗಿಯೂ ಸೇರಿದೆನು. ಏಕೆಂದರೆ ನಾನು ಕೇವಲ ಅಡ್ವೊಕೇಟಾಗಿದ್ದರೆ ಭಾರತೀಯರೊಡನೆ ನಿಕಟಸಂಬಂಧವನ್ನು ಬೆಳೆಸಲು ನನಗೆ ಅವಕಾಶವಾಗುತ್ತಿರಲಿಲ್ಲ. ಅಲ್ಲದೆ ದಕ್ಷಿಣ ಆಫ್ರಿಕದ ಬಿಳಿಯ ಅಟಾರ್ನಿಗಳು ನನಗೆ ಮೊಕದ್ದಮೆಗಳನ್ನು ತಂದುಕೊಡುತ್ತಿರಲಿಲ್ಲ.

ಆದರೆ ಟ್ರಾನ್ಸ್‌ವಾಲಿನಲ್ಲಿ ಕೂಡ ಅಟಾರ್ನಿಗಳಿಗೆ ಮ್ಯಾಜಿಸ್ಟ್ರೇಟರ ಮುಂದೆ ಮೊಕದ್ದಮೆ ನಡೆಸಲು ಅವಕಾಶವಿದ್ದಿತು. ಒಂದು ಸಲ ನಾನು ಜೋಹಾನ್ಸ್‌ಬರ್ಗಿನಲ್ಲಿ ಒಬ್ಬ ಮ್ಯಾಜಿಸ್ಟ್ರೇಟರ ಮುಂದೆ ಒಂದು ಮೊಕದ್ದಮೆಯನ್ನು ನಡೆಸುತ್ತಿರುವಾಗ ನನ್ನ ಕಕ್ಷಿಗಾರರನು ನನ್ನನ್ನು ಮೋಸಗೊಳಿಸಿರುವನೆಂಬುದು ನನಗೆ ಗೊತ್ತಾಯಿತು. ಸಾಕ್ಷ್ಯವನ್ನು ಹೇಳುತ್ತಿರುವಾಗ ಅವನು ಸಂಪೂರ್ಣವಾಗಿ ತಲೆಕೆಳಗಾದುದನ್ನು ನಾನು ಕಂಡೆನು. ಆದುದರಿಂದ ವಾದಿಸದೆಯೇ ನಾನು ಮೊಕದ್ದಮೆಯನ್ನು ವಜಾ ಮಾಡಬೇಕೆಂದು ಮ್ಯಾಜಿಸ್ಟ್ರೇಟರಿಗೆ ಹೇಳಿದೆನು. ಇದಿರು

ಪಕ್ಷದ ವಕೀಲರು ಆಶ್ಚರ್ಯಚಕಿತರಾದರು. ಮ್ಯಾಜಿಸ್ಟ್ರೇಟರು ಸಂತೋಷಗೊಂಡರು. ಸುಳ್ಳು ಮೊಕದ್ದಮೆಯನ್ನು ನನ್ನ ಬಳಿಗೆ ತಂದುದಕ್ಕಾಗಿ ನಾನು ನನ್ನ ಕಕ್ಷಿಗಾರನನ್ನು ಬೈದೆನು. ಸುಳ್ಳು ದಾವೆಗಳನ್ನು ನಾನು ಎಂದೂ ತೆಗೆದುಕೊಳ್ಳುವದಿಲ್ಲವೆಂದು ಅವನಿಗೆ ಗೊತ್ತಿದ್ದಿತು. ಅವನು ಮನಗಾಣುವಂತೆ ಈ ವಿಷಯವನ್ನು ನಾನು ಅವನಿಗೆ ಹೇಳಲು ಅವನು ತನ್ನ ತಪ್ಪನ್ನು ಒಪ್ಪಿಕೊಂಡನು. ಅವನಿಗೆ ವಿರೋಧವಾಗಿ ಮೊಕದ್ದಮೆಯನ್ನು ನಿರ್ಧರಿಸಬೇಕೆಂದು ನಾನು ಮ್ಯಾಜಿಸ್ಟ್ರೇಟರಿಗೆ ಹೇಳಿದುದಕ್ಕಾಗಿ ಅವನು ನನ್ನ ಮೇಲೆ ಸಿಟ್ಟಾಗಲಿಲ್ಲವೆಂದು ನನಗೆ ಸ್ವಲ್ಪ ನೆನಪಿದೆ. ಅದು ಹೇಗೇ ಇರಲಿ ಈ ಮೊಕದ್ದಮೆಯಲ್ಲಿ ನನ್ನ ನಡತೆಯಿಂದ ನನ್ನ ವಕೀಲಿ ಉದ್ಯೋಗಕ್ಕೇನೂ ಬಾಧಕವುಂಟಾಗಲಿಲ್ಲ. ಅಷ್ಟೇಕೆ, ಇದರಿಂದ ನನ್ನ ಕೆಲಸವು ಇನ್ನೂ ಸುಲಭಗೊಂಡಿತು. ನನ್ನ ಸತ್ಯಪರಾಯಣತೆಯಿಂದ ವಕೀಲರಲ್ಲಿ ನನ್ನ ಯಶಸ್ಸು ಹೆಚ್ಚಿತಲ್ಲದೆ ನಾನು ಕಪ್ಪುವರ್ಣದವನಾಗಿದ್ದರೂ ಅವರಲ್ಲಿ ಕೆಲವರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸುವದು ಕೂಡ ಸಾಧ್ಯವಾಯಿತೆಂಬುದನ್ನು ನಾನು ಕಂಡೆನು.

ನಾನು ವಕೀಲಿ ಕೆಲಸ ಮಾಡುತ್ತಿದ್ದಾಗ ನನಗೆ ತಿಳಿವಳಿಕೆಯಿಲ್ಲದ ವಿಚಾರವನ್ನು ನನ್ನ ಕಕ್ಷಿಗಾರರಿಂದಾಗಲಿ ಜತೆಯವರಿಂದಾಗಲಿ ಎಂದಿಗೂ ಮುಚ್ಚಿಡದೆ ಇರುವದು ನನ್ನ ಅಭ್ಯಾಸವಾಗಿದ್ದಿತು. ನನಗೆ ಯಾವ ವಿಷಯವಾದರೂ ತಿಳಿಯದೆ ಹೋದಲ್ಲಿ ಬೇರೆ ವಕೀಲರಿಂದ ಸಹಾಯ ಪಡೆಯಬೇಕೆಂದು ನಾನು ನನ್ನ ಕಕ್ಷಿಗಾರನಿಗೆ ಹೇಳುತ್ತಿದ್ದೆನು. ಒಂದುವೇಳೆ ಆತನು ನನ್ನ ಬಳಿಯೇ ಇರಲು ಇಷ್ಟಪಟ್ಟರೆ ಹಿರಿಯ ವಕೀಲರ ಒತ್ತಾಸೆಯನ್ನು ಪಡೆಯಲು ನನಗೆ ಅವಕಾಶ ಕೊಡಬೇಕೆಂದು ನಾನು ಆತನನ್ನು ಕೇಳುತ್ತಿದ್ದೆನು. ಈ ಸರಳವೃತ್ತಿಯು ನನಗೆ ನನ್ನ ಕಕ್ಷಿಗಾರರ ಅಮಿತ ಪ್ರೀತಿಯನ್ನೂ ನಂಬಿಕೆಯನ್ನೂ ಸಂಪಾದಿಸಿ ಕೊಟ್ಟಿತು. ಹಿರಿಯ ವಕೀಲರ ಸಲಹೆಯನ್ನು ತೆಗೆದುಕೊಳ್ಳಬೇ

ಕಾಗಿ ಬಂದಾಗ ಅವರು ರುಸುಮನ್ನು ಕೊಡಲು ಯಾವಾಗಲೂ ಸಿದ್ಧರಾಗಿರುತ್ತಿದ್ದರು. ಈ ಪ್ರೇಮವಿಶ್ವಾಸಗಳು ನನ್ನ ಸಾರ್ವಜನಿಕ ಕಾರ್ಯಗಳಲ್ಲಿ ನನಗೆ ಬೆಂಬಲವಾಗಿ ನಿಂತುವು.

ದಕ್ಷಿಣ ಆಫ್ರಿಕದಲ್ಲಿ ವಕೀಲಿ ಉದ್ಯೋಗವನ್ನು ಕೈಗೊಳ್ಳಲು ಸಮಾಜಸೇವೆಯೇ ಉದ್ದೇಶವೆಂದು ನಾನು ಹಿಂದಿನ ಅಧ್ಯಾಯಗಳಲ್ಲಿ ಸೂಚಿಸಿದ್ದೇನೆ. ಈ ಉದ್ದೇಶಸಾಧನೆಗೆ ಕೂಡ ಜನರ ಭರವಸೆಯನ್ನು ಸಂಪಾದಿಸುವದು ಆಗತ್ಯವಾಗಿದ್ದಿತು. ಉದಾರ ಮನಸ್ಕರಾದ ಭಾರತೀಯರು ನಾನು ಹಣ ತೆಗೆದುಕೊಂಡು ಮಾಡಿದ ಈ ಔದ್ಯೋಗಿಕ ಕಾರ್ಯವನ್ನು ಲೋಕಸೇವೆಯೆಂದು ಎಣಿಸಿದರು. ತಮ್ಮ ಅಧಿಕಾರಗಳ ಸಲುವಾಗಿ ಅವರು ಕಾರಾಗೃಹದ ಸಂಕಟವನ್ನು ಅನುಭವಿಸಬೇಕೆಂದು ನಾನು ಅವರಿಗೆ ಸಲಹೆ ಕೊಟ್ಟಾಗ ಅವರಲ್ಲಿ ಅನೇಕರು ಅದನ್ನು ಸಂತೋಷದಿಂದ ಸ್ವೀಕರಿಸಿದರು. ಹೀಗೆ ಮಾಡಿದುದಕ್ಕೆ ಅವರು ಈ ಮಾರ್ಗವು ಸರಿಯಾದುದೆಂದು ಜ್ಞಾನಪೂರ್ವಕವಾಗಿ ನಿರ್ಧರಿಸಿದುದಕ್ಕಿಂತಲೂ ಹೆಚ್ಚಾಗಿ ಅವರು ನನ್ನಲ್ಲಿಟ್ಟಿದ್ದ ಪ್ರೇಮವಿಶ್ವಾಸಗಳೇ ಕಾರಣ.

ನಾನು ಇದನ್ನು ಬರೆಯುತ್ತಿರುವಂತೆಯೇ ಅನೇಕ ಮಧುರ ಸಂಸ್ಮರಣಗಳು ನನ್ನ ಮನಸ್ಸಿಗೆ ಬರುತ್ತವೆ. ನೂರಾರು ಮಂದಿ ಕಕ್ಷಿಗಾರರು ನನ್ನ ಮಿತ್ರರಾಗಿ ಲೋಕಸೇವೆಯಲ್ಲಿ ನಿಜವಾದ ಸಂಗಡಿಗರಾದರು. ತೊಡಕುಗಳಿಂದಲೂ ಅಪಾಯಗಳಿಂದಲೂ ತುಂಬಿದ್ದ ಜೀವನವನ್ನು ಅವರ ಸಂಗವು ಮಧುರಗೊಳಿಸಿತು.



೪೭

# ಕಕ್ಷಿಗಾರರನ್ನು ರಕ್ಷಿಸಿದುದು

ಇದುವರೆಗೆ ವಾಚಕರಿಗೆ ಪಾರ್ಸೀ ರುಸ್ತುಂಜಿಯವರ ಹೆಸರಿನ ಪರಿಚಯವು ಚೆನ್ನಾಗಿ ಉಂಟಾಗಿರುತ್ತದೆ. ಒಮ್ಮೆಯೇ ನನ್ನ ಸಹಯೋಗಿಗಳೂ ಕಕ್ಷಿಗಾರರೂ ಆದರವರು. ಅಥವಾ ಅವರು ಮೊದಲು ನನ್ನ ಸಹಯೋಗಿಗಳಾಗಿ ಆಮೇಲೆ ಕಕ್ಷಿಗಾರರಾದ ರೆಂದು ಹೇಳಿದರೆ ಹೆಚ್ಚು ಉಚಿತವಾದೀತು. ಅವರ ವಿಶ್ವಾಸವನ್ನು ನಾನು ಎಷ್ಟುಮಟ್ಟಿಗೆ ಸಂಪಾದಿಸಿದೆನೆಂದರೆ ಅವರು ತಮ್ಮ ಸ್ವಂತ ಕುಟುಂಬದ ವಿಷಯಗಳಲ್ಲಿಯೂ ನನ್ನ ಸಲಹೆಯನ್ನು ಕೇಳಿ ಅನು ಸರಿಸುತ್ತಿದ್ದರು. ಅವರು ಕಾಹಿಲೆ ಬಿದ್ದಾಗ ಕೂಡ ನನ್ನ ಸಹಾ ಯವನ್ನು ಬೇಡುತ್ತಿದ್ದರು. ನಮ್ಮಿಬ್ಬರ ಜೀವನದ ರೀತಿಗೆ ಹೆಚ್ಚು ಅಂತರವಿದ್ದಿತಾದರೂ ಅವರು ನನ್ನ ಕುಂಟುವೈದ್ಯದ ಚಿಕಿತ್ಸೆ ಯನ್ನು ಸ್ವೀಕರಿಸಲು ಹಿಂತೆಗೆಯುತ್ತಿರಲಿಲ್ಲ.

ಒಂದು ಸಲ ಈ ಮಿತ್ರರು ದೊಡ್ಡ ಆಪತ್ತಿಗೆ ಸಿಕ್ಕಿದರು. ಅವರು ತಮ್ಮ ವ್ಯವಹಾರಗಳಲ್ಲಿ ಹೆಚ್ಚು ಕಡಿಮೆ ಎಲ್ಲವನ್ನೂ ನನಗೆ ತಿಳಿಸುತ್ತಿದ್ದರಾದರೂ ಒಂದು ವಿಷಯವನ್ನು ಮಾತ್ರ ಉದ್ದೇಶಪೂರ್ವಕವಾಗಿ ನನ್ನಿಂದ ಮುಚ್ಚಿಟ್ಟಿದ್ದರು. ಅವರು ಮುಂಬಯಿಯಿಂದಲೂ ಕಲ್ಕತ್ತೆಯಿಂದಲೂ ಬಹು ಬೆಲೆ ಬಾಳುವ ವ್ಯಾಪಾರದ ಸರಕುಗಳನ್ನು ತರಿಸುತ್ತಿದ್ದರು. ಹೀಗೆ ಮಾಡು ವಾಗ ಎಷ್ಟೋ ಬಾರಿ ಸುಂಕವನ್ನು ತಪ್ಪಿಸಿಕೊಳ್ಳಲೋಸುಗ ಕಳ್ಳ ತನದಿಂದ ಸರಕನ್ನು ಒಯ್ಯುತ್ತಿದ್ದರು. ಆದರೆ ಅವರಿಗೂ ಸುಂಕದ ಅಧಿಕಾರಿಗಳಿಗೂ ಸುಸ್ನೇಹವಿದ್ದುದರಿಂದ ಯಾರೂ ಅವರ ಮೇಲೆ ಸಂಶಯಪಡುತ್ತಿರಲಿಲ್ಲ. ಅಧಿಕಾರಿಗಳು ರುಸ್ತುಂಜಿಯವರ ಪಟ್ಟಿಯನ್ನೇ ನಂಬಿ ಸುಂಕವನ್ನು ಲೆಕ್ಕ ಹಾಕುತ್ತಿದ್ದರು. ಇವ ರಲ್ಲಿ ಕೆಲವರು ಈ ಒಳಸಂಚಿಗೆ ಸೇರಿದ್ದರೂ ಇದ್ದಿರಬಹುದು.

ಆದರೆ ಗುಜರಾತೀ ಕವಿಯಾದ ಅಖಾನು ಹೇಳಿರುವಂತೆ ಪಾದರಸವನ್ನು ನುಂಗುವದೂ ಕದ್ದ ಹಣವನ್ನು ದಕ್ಕಿಸಿಕೊಳ್ಳುವದೂ ಒಂದೇ --ಎರಡೂ ಹೊರಗೆ ಬಿದ್ದೇ ಬೀಳುತ್ತವೆ. ಪಾರ್ಸೀ ರುಸ್ತುಂಜಿಯವರ ಕಳ್ಳತನವು ಕೂಡ ಈ ಗಾದೆಯ ನಿಯಮವನ್ನು ಮೀರಲಿಲ್ಲ. ಅದು ಬಯಲಾಯಿತು. ಅವರು ನನ್ನ ಬಳಿಗೆ ಓಡಿಬಂದರು. ಅವರ ಕಣ್ಣುಗಳಿಂದ ನೀರು ಸುರಿಯುತ್ತಿದ್ದಿತು. "ಭಾಯಿ (ಅಣ್ಣಾ), ನಾನು ನಿಮ್ಮನ್ನು ಮೋಸ ಪಡಿಸಿದ್ದೇನೆ. ನನ್ನ ತಪ್ಪು ಇಂದು ಬಯಲಾಗಿದೆ. ನಾನು ಸುಂಕ ಕೊಡದೆ ಕಳ್ಳತನದಿಂದ ಸರಕನ್ನು ಒಯ್ದಿದ್ದೇನೆ. ನನಗೆ ದಂಡನೆಯಾಗುವದು ಖಂಡಿತ. ನಾನು ಸೆರೆಮನೆಗೆ ಹೋಗಬೇಕು. ಸರ್ವನಾಶವಾಗುತ್ತದೆ. ಈ ಸಂಕಟದಿಂದ ನನ್ನನ್ನು ಪಾರುಮಾಡಲು ನಿಮ್ಮೊಬ್ಬರಿಗೇ ಸಾಧ್ಯ. ನಿಮ್ಮಿಂದ ಇನ್ನೇನನ್ನೂ ನಾನು ಮರೆಮಾಚಿಲ್ಲ. ವ್ಯಾಪಾರಕ್ಕೆ ಸಂಬಂಧಪಟ್ಟ ಇಂತಹ ವಿಷಯಗಳನ್ನು ನಿಮಗೆ ಹೇಳಿ ಬೇಸರಪಡಿಸಬಾರದೆಂದು ನಾನು ಈ ವಿಚಾರವಾಗಿ ನಿಮಗೆ ಏನನ್ನೂ ಹೇಳಿರಲಿಲ್ಲ. ಆದರೆ ಈಗ ನನ್ನ ಪಶ್ಚಾತ್ತಾಪವು ಎಷ್ಟೆಂದು ಹೇಳಲಿ!" ಎಂದರವರು.

ನಾನು ಅವರನ್ನು ಸಮಾಧಾನಪಡಿಸಿ "ನಿಮ್ಮನ್ನು ರಕ್ಷಿಸುವದೂ ಬಿಡುವದೂ ದೇವರ ಕೈಯಲ್ಲಿದೆ. ನನ್ನ ರೀತಿಯಂತೂ ನಿಮಗೆ ಗೊತ್ತೇ ಇದೆ. ನಿಮ್ಮ ತಪ್ಪನ್ನು ಒಪ್ಪಿಕೊಳ್ಳುವದರ ಮೂಲಕ ಮಾತ್ರ ನಾನು ನಿಮ್ಮನ್ನು ರಕ್ಷಿಸಲು ಪ್ರಯತ್ನಪಡಬಲ್ಲೆನು." ಎಂದೆನು.

ಇದನ್ನು ಕೇಳಿ, ಪಾಪ, ಪಾರ್ಸಿಯವರ ಪ್ರಾಣವೇ ಹಾರಿ ಹೋದಂತಾಯಿತು.

"ನಾನು ನಿಮ್ಮೆದಿರಿಗೆ ಒಪ್ಪಿಕೊಂಡಿರುವದು ಸಾಲದೆ?" ಎಂದು ಅವರು ಕೇಳಿದರು.

ನಾನು ಮೆಲ್ಲಗೆ "ನೀವು ಹಾನಿ ಮಾಡಿರುವದು ನನಗಲ್ಲ, ಸರಕಾರಕ್ಕೆ. ನನ್ನ ಮುಂದೆ ಒಪ್ಪಿಕೊಂಡುದರಿಂದ ನಿಮಗೇನು ಲಾಭ ?" ಎಂದೆನು.

"ಕಡೆಗೆ ನಾನು ಮಾಡುವದೇನೋ ನೀವು ಹೇಳಿದ ಹಾಗೆಯೇ ಸರಿ. ಆದರೆ ನೀವು ನನ್ನ ಹಳೆಯ ವಕೀಲರಾದ ಎ........ರ ಸಲಹೆಯನ್ನು ಕೇಳುವದಿಲ್ಲವೆ ? ಅವರೂ ನನ್ನ ಮಿತ್ರರೇ." ಎಂದು ಪಾರ್ಸೀ ರುಸ್ತುಂಜಿಯವರು ಹೇಳಿದರು.

ವಿಚಾರ ಮಾಡಿ ನೋಡಲು ಈ ಸುಂಕದ ಮೋಸವು ಬಹು ದಿನದಿಂದ ನಡೆಯುತ್ತಿದ್ದುದಾಗಿ ತಿಳಿಯಬಂದಿತು. ಆದರೆ ಈಗ ಕಂಡುಹಿಡಿದಿದ್ದ ಮೋಸವು ಬಹು ಸ್ವಲ್ಪ ಹಣಕ್ಕೆ ಸಂಬಂಧಪಟ್ಟು ದಾಗಿದ್ದಿತು. ನಾವು ಅವರ ವಕೀಲರ ಬಳಿಗೆ ಹೋದೆವು. ಅವರು ಇದಕ್ಕೆ ಸಂಬಂಧಪಟ್ಟ ಕಾಗದಪತ್ರಗಳನ್ನು ಓದಿಕೊಂಡು "ಈ ಮೊಕದ್ದಮೆಯನ್ನು ನ್ಯಾಯಾಧೀಶರೊಡನೆ ಪಂಚಾಯಿತರೂ ತೀರ್ಮಾನ ಮಾಡುತ್ತಾರೆ. ನೇಟಾಲಿನ ಪಂಚಾಯಿತರು ಭಾರತೀಯನನ್ನು ಬಿಟ್ಟುಬಿಡುವದು ಕೇವಲ ಅಸಂಭವ. ಆದರೆ ನಾನು ಆಸೆಯನ್ನು ಬಿಡುವದಿಲ್ಲ." ಎಂದರು.

ನನಗೆ ಈ ವಕೀಲರೊಡನೆ ಹೆಚ್ಚು ಪರಿಚಯವಿರಲಿಲ್ಲ. ಪಾರ್ಸೀ ರುಸ್ತುಂಜಿಯವರು 'ತಾವು ಉಪಕಾರ ಮಾಡಿದಂತಾಯಿತು. ಆದರೆ ಈ ಮೊಕದ್ದಮೆಯಲ್ಲಿ ಗಾಂಧಿಯವರ ಸಲಹೆಯಂತೆ ನಡೆಯಬೇಕೆಂದು ನಾನು ಇಷ್ಟಪಡುತ್ತೇನೆ. ಅವರು ನನ್ನನ್ನು ಚೆನ್ನಾಗಿ ಬಲ್ಲರು. ಆವಶ್ಯಕವಿದ್ದಲ್ಲೆಲ್ಲಾ ತಾವು ಅವರಿಗೆ ಸಲಹೆಯನ್ನು ಕೊಡತಕ್ಕುದೇನೋ ಸರಿ." ಎಂದು ಉತ್ತರ ವಿತ್ತರು.

ಈ ರೀತಿಯಾಗಿ ವಕೀಲರ ಪ್ರಶ್ನೆಯನ್ನು ಒತ್ತಟ್ಟಿಗಿಟ್ಟು ನಾವು ಪಾರ್ಸೀ ರುಸ್ತುಂಜಿಯವರ ಅಂಗಡಿಗೆ ಹೋದೆವು.

ಈಗ ಅವರಿಗೆ ನನ್ನ ಅಭಿಪ್ರಾಯವನ್ನು ವಿವರಿಸುತ್ತಾ ನಾನು "ಈ ಮೊಕದ್ದಮೆಯನ್ನು ನ್ಯಾಯಾಸ್ಥಾನಕ್ಕೆ ತೆಗೆದು ಕೊಂಡು ಹೋಗಕೂಡದೆಂದೇ ನನ್ನ ಮತ. ನಿಮ್ಮ ಮೇಲೆ ಕಟ್ಟಳೆಯನ್ನು ನಡೆಸುವದು ನಡೆಸದಿರುವದು ಸುಂಕದ ಅಧಿ ಕಾರಿಯ ಕೈಯಲ್ಲಿದೆ. ಆತನು ಕೂಡ ಸರಕಾರದ ವಕೀಲರ ಸಲಹೆ ಯಂತೆ ನಡೆದುಕೊಳ್ಳಬೇಕು. ನಾನು ಅವರಿಬ್ಬರನ್ನೂ ಬೆಟ್ಟಿ ಮಾಡಲು ಸಿದ್ಧನಾಗಿದ್ದೇನೆ. ಅವರು ಗೊತ್ತುಮಾಡುವ ದಂಡ ವನ್ನು ನೀವು ತೆರಲೊಪ್ಪಬೇಕೆಂದು ನನ್ನ ಸೂಚನೆ. ಅವರು ಇದಕ್ಕೆ ಸಮ್ಮತಿಸುವರೆಂದೇ ತೋರುತ್ತದೆ. ಒಂದು ವೇಳೆ ಅವ ರೊಪ್ಪದಿದ್ದರೆ ನೀವು ಕಾರಾಗೃಹಕ್ಕೆ ತೆರಳಲು ಸಿದ್ಧರಾಗಿರಬೇಕು. ಸೆರೆಮನೆಗೆ ಹೋಗುವದಕ್ಕಿಂತಲೂ ತಪ್ಪುಮಾಡುವದೇ ಹೆಚ್ಚು ಲಜ್ಜಾಸ್ಪದವೆಂದು ನಾನು ತಿಳಿಯುತ್ತೇನೆ. ಅಪಮಾನದ ಕೆಲಸ ವನ್ನಂತು ಮಾಡಿದುದಾಗಿಹೋಗಿದೆ. ಕಾರಾಗೃಹವಾಸವನ್ನು ನೀವು ಪ್ರಾಯಶ್ಚಿತ್ತವೆಂದೆಣಿಸಬೇಕು. ಇನ್ನೊಂದು ಕಳ್ಳತನದಿಂದ ಸುಂಕ ವನ್ನು ತಪ್ಪಿಸಿಕೊಳ್ಳುವದಿಲ್ಲವೆಂದು ಮನೋನಿರ್ಧಾರವನ್ನು ಮಾಡು ವದೇ ನಿಜವಾದ ಪ್ರಾಯಶ್ಚಿತ್ತ." ಎಂದು ಹೇಳಿದೆನು.

ಇದೆಲ್ಲವೂ ಪಾರ್ಸೀ ರುಸ್ತುಂಜಿಯವರಿಗೆ ರುಚಿಸಿತೆಂದು ನಾನು ಹೇಳಲಾರೆನು. ಅವರು ಸ್ವಭಾವತಃ ಧೀರರಾಗಿದ್ದರು. ಆದರೆ ಈ ಬಾರಿ ಅವರ ಧೈರ್ಯವು ಕುಂದಿಹೋಗಿದ್ದಿತು. ಅವರ ಮಾನಕೀರ್ತಿಗಳೆಲ್ಲವೂ ಗಂಡಾಂತರಕ್ಕೆ ಸಿಕ್ಕಿದ್ದುವು. ತಾವು ಅಷ್ಟು ಜಾಗರೂಕತೆಯಿಂದ, ಅಷ್ಟು ಶ್ರಮದಿಂದ, ಕಟ್ಟಿದ್ದ ಕಟ್ಟ ಡವು ಬಿದ್ದುಹೋದರೆ ಅವರ ಗತಿಯೇನು ?

ಅವರು "ನಾನು ನಿಮ್ಮ ಕೈಯಲ್ಲಿದ್ದೇನೆಂದು ಆಗಲೇ ಹೇಳಿದ್ದೇನೆ. ನಿಮಗೆ ಇಷ್ಟಬಂದಂತೆ ಮಾಡಿರಿ." ಎಂದರು.

ನಾನು ಈ ಮೊಕದ್ದಮೆಯಲ್ಲಿ ನನ್ನ ಪ್ರೇರಣಾಶಕ್ತಿಯ ನ್ನೆಲ್ಲಾ ಉಪಯೋಗಿಸಿದೆನು. ನಾನು ಸುಂಕದ ಅಧಿಕಾರಿಯನ್ನು

ಕಂಡು ಅವರಿಗೆ ಎಲ್ಲಾ ವಿಷಯವನ್ನೂ ನಿರ್ಭಯವಾಗಿ ತಿಳಿಸಿದೆನು. ಲೆಕ್ಕದ ಪುಸ್ತಕಗಳನ್ನೆಲ್ಲಾ ಅವರ ಮುಂದಿಡುವದಾಗಿ ಮಾತುಕೊಟ್ಟು ಪಾರ್ಸೀ ರುಸ್ತುಂಜಿಯವರು ಎಷ್ಟು ಪಶ್ಚಾತ್ತಾಪ ಪಡುತ್ತಿದ್ದರೆಂಬುದನ್ನೂ ಅವರಿಗೆ ಹೇಳಿದೆನು.

ಸುಂಕದ ಅಧಿಕಾರಿಯು "ಈ ಪಾರಸೀ ಮುದುಕರನ್ನು ಕಂಡರೆ ನನಗೆ ಇಷ್ಟ. ಅವರ ಬುದ್ಧಿಗೇಡಿತನಕ್ಕಾಗಿ ನಾನು ವಿಷಾದಿಸುತ್ತೇನೆ. ನನ್ನ ಕರ್ತವ್ಯವೇನೆಂಬುದು ನಿಮಗೆ ತಿಳಿದೇ ಇದೆ. ಸರಕಾರದ ವಕೀಲರ ಸಲಹೆಯನ್ನು ನಾನು ಅನುಸರಿಸಬೇಕು. ಆದುದರಿಂದ ನೀವು ಅವರನ್ನು ಒಡಂಬಡಿಸಲು ನಿಮ್ಮ ಪ್ರಯತ್ನವನ್ನೆಲ್ಲಾ ಉಪಯೋಗಿಸಬೇಕೆಂದು ಸೂಚಿಸುತ್ತೇನೆ." ಎಂದರು.

"ನೀವು ರುಸ್ತುಂಜಿಯನ್ನು ನ್ಯಾಯಾಸ್ಥಾನಕ್ಕೆ ಎಳೆಯಲು ಆಗ್ರಹ ಮಾಡದಿದ್ದರೆ ನನಗೆ ಬಹುಸಂತೋಷ." ಎಂದೆನು.

ಆತನಿಂದ ಈ ಅಭಯದಾನವನ್ನು ಹೊಂದಿ ಸರಕಾರದ ವಕೀಲರೊಡನೆ ಪತ್ರವ್ಯವಹಾರ ಬೆಳೆಸಿದೆನು. ಅವರನ್ನೂ ಕಂಡೆನು. ನಾನು ಏನನ್ನೂ ಮರೆಮಾಚದಿದ್ದುದನ್ನು ಅವರು ಶ್ಲಾಘಿಸಿದರೆಂದೂ ನಾನು ಮುಚ್ಚಿಟ್ಟುಕೊಂಡ ಸಂಗತಿಯೊಂದೂ ಇಲ್ಲವೆಂದು ಅವರಲ್ಲಿ ದೃಢನಂಬಿಕೆ ಹುಟ್ಟಿತೆಂದೂ ಹೇಳಲು ನನಗೆ ಸಂತೋಷವಾಗುತ್ತದೆ.

ಈ ಸಂದರ್ಭದಲ್ಲಿಯೋ ಅಥವಾ ಬೇರೆ ಪ್ರಸಂಗದಲ್ಲಿಯೋ, ನನಗೆ ನೆನಪಿಲ್ಲ, ನನ್ನ ಸ್ಥಿರಪ್ರಯತ್ನವೂ ನಿಷ್ಕಾಪಟ್ಯವೂ ಅವರಿಂದ "ನೀವು ಎಂದಿಗೂ 'ಇಲ್ಲ' ಎನ್ನಿಸಿಕೊಂಡು ಹೋಗುವವರಲ್ಲ." ಎಂಬ ಶಹಬಾಸ್ ಗಿರಿಯನ್ನು ನನಗೆ ಸಂಪಾದಿಸಿಕೊಟ್ಟುವು.

ಪಾರ್ಸಿ ರುಸ್ತುಂಜಿಯವರ ಮೇಲಿನ ಮೊಕದ್ದಮೆಯು ರಾಜಿಯಾಯಿತು. ಅವರು ಎಷ್ಟು ಹಣವನ್ನು ಕೊಡದೆ ಮೋಸ ಪಡಿಸಿದೆನೆಂದು ಒಪ್ಪಿಕೊಂಡಿದ್ದರೋ ಅದರ ಎರಡರಷ್ಟು ಹಣ ವನ್ನು ದಂಡವಾಗಿ ಕೊಡಬೇಕೆಂದು ನಿರ್ಧಾರವಾಯಿತು. ಈ ಮೊಕದ್ದಮೆಯ ವಿಷಯಗಳನ್ನೆಲ್ಲಾ ಬರೆಸಿ ಆ ಕಾಗದಕ್ಕೆ ಕಟ್ಟು ಹಾಕಿಸಿ ಅದು ತನಗೂ ತಮ್ಮ ಉತ್ತರಾಧಿಕಾರಿಗಳಿಗೂ ತಮ್ಮ ಜೊತೆಯ ವರ್ತಕರಿಗೂ ನಿತ್ಯ ಮಾರ್ಗದರ್ಶಿಯಾಗಿರುವಂತೆ ಅದನ್ನು ತಮ್ಮ ಕಚೇರಿಯಲ್ಲಿ ತಗಲುಹಾಕಿಸಿದರು.

ಈ ಕ್ಷಣಿಕ ಪಶ್ಚಾತ್ತಾಪದಿಂದ ನಾನು ಮರುಳಾಗಕೂಡ ದೆಂದು ಪಾರ್ಸಿ ರುಸ್ತುಂಜಿಯವರ ಮಿತ್ರರು ನನಗೆ ಎಚ್ಚರಿಕೆ ಕೊಟ್ಟರು. ಈ ವಿಷಯವನ್ನು ನಾನು ರುಸ್ತುಂಜಿಯವರಿಗೆ ತಿಳಿ ಸಲು ಅವರು "ನಾನು ನಿಮಗೆ ಮೋಸಮಾಡಿದರೆ ನನ್ನ ಗತಿ ಯೇನು ?" ಎಂದರು.



# ಟಿಪ್ಪಣಿಗಳು

---

**ಜೋಸೆಫ್ ಚೇಂಬರ್ಲೇನ್ (ಪು. ೧) ೩ನೆಯ ಭಾಗದ ಟಿಪ್ಪಣಿಯನ್ನು ನೋಡಿ)**

**ಬೋಅರ್ ಯುದ್ಧ (ಪು. ೨)**

ಈ ಯುದ್ಧವು ೧೦–೧೦–೧೮೯೯ ರಿಂದ ೩೧–೫–೧೯೦೨ರ ವರೆಗೆ ನಡೆದು ವಿರೀನಿಜಿಂಗ್ ಸಂಧಿಯಲ್ಲಿ ಮುಕ್ತಾಯವಾಯಿತು. ಬೋಅರರೆಂದರೆ ಹಾಲೆಂಡ್ ದೇಶದಿಂದ ಸುಮಾರು ೪೦೦ ವರ್ಷಗಳ ಹಿಂದೆ ದಕ್ಷಿಣ ಆಫ್ರಿಕಕ್ಕೆ ಹೋಗಿ ನೆಲೆಸಿದ ಡಚ್ಚರು. ಇವರಿಗೂ ಅಲ್ಲಿ ನೆಲೆಸಿದ್ದ ಬ್ರಿಟಿಷರಿಗೂ ರಾಜಕೀಯ ವಿಚಾರದಲ್ಲಿಯೂ ಭೂಮಿಕಾಣಿಗಳ ವಿಷಯದಲ್ಲಿಯೂ ಅಸೂಯೆ ಹೆಚ್ಚಿ ವೈಮನಸ್ಯವುಂಟಾದುದೇ ಈ ಯುದ್ಧಕ್ಕೆ ಕಾರಣ. ಈ ಯುದ್ಧದಲ್ಲಿ ಮೊಟ್ಟಮೊದಲು ಬ್ರಿಟಿಷರಿಗೆ ಪರಾಜಯವಾಯಿತು. ಬೋಅರ್ ಗಂಡಸರೂ ಹೆಂಗಸರೂ ತಮ್ಮ ಸರ್ವಸ್ವವನ್ನೂ ತ್ಯಜಿಸಿ ಅಪೂರ್ವ ವೀರತನದಿಂದ ಯುದ್ಧದಲ್ಲಿ ಭಾಗಿಗಳಾದರು. ಮೂವತ್ತು ತಿಂಗಳಿಗಿಂತ ಹೆಚ್ಚಾಗಿ ಯುದ್ಧವು ಸಾಗಿದ ಮೇಲೆ ಬ್ರಿಟಿಷರಿಗೆ ಜಯವು ಲಭಿಸುತ್ತಾ ಬಂದಿತು. ಆದರೆ ಈ ಹೊತ್ತಿಗೆ ಎರಡು ಪಕ್ಷದವರೂ ಬಸವಳಿದುಹೋಗಿದ್ದರು. ಇದಲ್ಲದೆ ಬೋಅರರ ಪಕ್ಷವು ನ್ಯಾಯವೆಂದು ಇಂಗ್ಲೆಂಡಿನಲ್ಲಿಯೇ ಅನೇಕ ಮಂದಿ ಪ್ರತಿಪಾದಿಸತೊಡಗಿದ್ದರು. ಇದೆಲ್ಲದರ ಫಲವಾಗಿ ಸಂಧಿಯುಂಟಾಗಿ ಬೋಅರರ ಸ್ವತಂತ್ರ ರಾಷ್ಟ್ರಗಳಾದ ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀ ಸ್ಟೇಟ್, ಬ್ರಿಟಿಷರಿಗೆ ಸೇರಿದ್ದ ನೇಟಾಲ್ ಮತ್ತು ಕೇಪ್‌ಕಾಲೊನಿ ಇವೆಲ್ಲವೂ ಒಟ್ಟಿಗೆ ಸೇರಿ ದಕ್ಷಿಣ ಆಫ್ರಿಕದ 'ಡೊಮಿನಿಯನ್' ಆಗಿ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ನೆಲೆಗೊಂಡುವು. ಈ ಯುದ್ಧವು

'ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ'ದಲ್ಲಿ ವರ್ಣಿತವಾಗಿದೆ.

**ಬೈಬಲ್** (ಪು. ೧೯. ಮೂರನೆಯ ಭಾಗದ ಟಿಪ್ಪಣಿಯನ್ನು ನೋಡಿ)

**ಸ್ವಾಮಿ ವಿವೇಕಾನಂದರು** (ಪು. ೨೦) ಮೂರನೆಯ ಭಾಗದ ಟಿಪ್ಪಣಿಯನ್ನು ನೋಡಿ.

**ರೇವಾಶಂಕರ ಭಾಯೀ** (ಪು. ೨೩) ಎರಡನೆಯ ಭಾಗದ ಟಿಪ್ಪಣಿಯನ್ನು ನೋಡಿ.

**ಕ್ಯೂನೆಯವರ ಜಲೋಪಚಾರ** (ಪು. ೨೬) ಮೂರನೆಯ ಭಾಗದ ಟಿಪ್ಪಣಿಯನ್ನು ನೋಡಿ.

**'ಗಿರಿಮಿಟಿಯರು'** (ಪು. ೨೬)

ಎರಡನೆಯ ಭಾಗ ೩೯–೪೦ ನೆಯ ಪುಟಗಳನ್ನು ನೋಡಿ. ಇವರ ವಿಷಯವೂ 'ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ'ದಲ್ಲಿ ಸವಿಸ್ತಾರವಾಗಿ ವರ್ಣಿತವಾಗಿದೆ.

**"ಇದೆಲ್ಲವನ್ನೂ ರೋಗಶಯ್ಯೆಯಲ್ಲಿಯೇ ಬಿದ್ದುಕೊಂಡು ಬರೆಯುತ್ತಿದ್ದೇನೆಂದು........" (ಪು. ೩೩)**

೧೯೨೬ನೆಯ ಡಿಸೆಂಬರಿನಲ್ಲಿ ಗೌಹತಿಯಲ್ಲಿ ರಾಷ್ಟ್ರಮಹಾಸಭೆಯ ಅಧಿವೇಶನವು ಮುಗಿದ ಮೇಲೆ ಗಾಂಧೀಜಿಯವರು ಸಂಯುಕ್ತ ಪ್ರಾಂತ್ಯ, ಬಿಹಾರ, ಮಧ್ಯಪ್ರಾಂತ್ಯ, ಬೀರಾರ್ ಮತ್ತು ಮಹಾರಾಷ್ಟ್ರ, ಈ ಪ್ರಾಂತ್ಯಗಳಲ್ಲಿ 'ದರಿದ್ರನಾರಾಯಣ'ನ ಸೇವೆಗಾಗಿ ಸಂಚಾರಮಾಡಿ ಹರಿದ್ವಾರಕ್ಕೆಹೋಗಿ ಅಲ್ಲಿನ ವಾರ್ಷಿಕ ಸ್ನಾತಕ ಪದವೀ ಪ್ರದಾನೋತ್ಸವವನ್ನು ನೋಡಿಕೊಂಡು ಕರ್ಣಾಟಕದಲ್ಲಿ ತಮ್ಮ ಸಂಚಾರವನ್ನು ಆರಂಭಿಸಬೇಕೆಂದು ಪಯಣ ಬೆಳೆಸುತ್ತಿರುವಾಗ ೧೯೨೭ನೇ ಮಾರ್ಚ್ ೨೪ರಲ್ಲಿ ಕಾಹಿಲೆಬಿದ್ದರು.

ಆಗ ಅವರು ಮೈಸೂರು ಸಂಸ್ಥಾನಕ್ಕೆ ಬಂದು ನಂದೀದುರ್ಗದ ಮೇಲೆ ವಿಶ್ರಾಂತಿಗಾಗಿಯೂ ಆರೋಗ್ಯಲಾಭಕ್ಕಾಗಿಯೂ ಎರಡು ತಿಂಗಳಿದ್ದರು. ಆ ಕಾಲದಲ್ಲಿಯೇ ಈ ಅಧ್ಯಾಯುವನ್ನು ಬರೆದುದು.

**ಪ್ರತಿಯೊಂದು ವಿಷಯುವನ್ನೂ ಕಟ್ಟಕಡೆಗೆ ಏಳು ದೃಷ್ಟಿಯಿಂದ ನೋಡಬಹುದು (ಪು. ೩೪)**

ಆಲಿವರ್ ವೆಂಡೆಲ್ ಹೋಮ್ಸ್ ಎಂಬ ಪ್ರಸಿದ್ಧ ಅಮೆರಿಕ ಲೇಖಕನ 'ಅಟೋಕ್ರಾಟ್ ಆಫ್ ದಿ ಬ್ರೆಕ್ಫಸ್ಟ್ ಟೇಬ್ಲ್' ಎಂಬ ಪುಸ್ತಕದಲ್ಲಿರುವ ಈ ಭಾಗದೊಂದಿಗೆ ಮೇಲಿನ ವಾಕ್ಯವನ್ನು ಹೋಲಿಸಬಹುದು:

ರಾಮುನಿಗೂ ಭೀಮುನಿಗೂ ಚರ್ಚೆ ನಡೆದಾಗ ಕಟ್ಟಕಡೆಗೆ ಸ್ಪಷ್ಟವಾಗಿ ಆರು ಜನವಾದರೂ ಅದರಲ್ಲಿ ಭಾಗಿಗಳಾಗಿರುವರೆಂದು ಹೇಳಬಹುದು. ಅವರು ಯಾರೆಂದರೆ

ಮೂವರು ರಾಮುರು:

೧. ನಿಜವಾದ ರಾಮು : ಇವನನ್ನು ದೇವರೇ ಬಲ್ಲ.
೨. ರಾಮುನು ತಾನೆಂದು ತಿಳಿದುಕೊಂಡಿರುವ ರಾಮು : ಇವನೆಂದಿಗೂ ನಿಜವಾದ ರಾಮುನಲ್ಲ. ಅನೇಕ ವೇಳೆ ಇವರಿಬ್ಬರಿಗೂ ಬಹಳ ವ್ಯತ್ಯಾಸವಿರುತ್ತದೆ.
೩. ಭೀಮುನು ರಾಮುನೆಂದು ತಿಳಿದುಕೊಂಡಿರುವ ರಾಮು : ಇವನು ನಿಜವಾದ ರಾಮುನೂ ಅಲ್ಲ. ರಾಮುನ ರಾಮುನೂ ಅಲ್ಲ. ಇವನಿಗೂ ಉಳಿದಿಬ್ಬರು ರಾಮುರಿಗೂ ಸಾಮಾನ್ಯವಾಗಿ ಬಹಳ ವ್ಯತ್ಯಾಸವಿರುತ್ತದೆ.

ಹೀಗೆಯೇ ಮೂವರು ಭೀಮುರು. ಅಂತು ಒಟ್ಟು ಆರು ಜನ.

**ಚರಕ (ಪು. ೧೮)**

ಪ್ರಾಚೀನ ಹಿಂದೂ ವೈದ್ಯಗ್ರಂಥ.

**ರೌಲಟ್ ಕಾನೂನು** (ಪು. ೩೮)೫ ನೆಯ ಭಾಗದ ೩೯ನೆಯ ಅಧ್ಯಾಯವನ್ನೂ ಟಿಪ್ಪಣಿಯನ್ನೂ ನೋಡಿ.

**ಗೋಪಾಲಕೃಷ್ಣ ಗೋಖಲೆ** (ಪು. ೬೧) ೨ನೆಯ ಭಾಗದ ಟಿಪ್ಪಣಿಯನ್ನು ನೋಡಿ.

**ಯಹೂದ್ಯರು** (ಪು. ೬೭)

ಏಷ್ಯಾಖಂಡದ ನೈರುತ್ಯ ಭಾಗದಲ್ಲಿ ಈ ಜನಾಂಗದವರು ವಾಸವಾಗಿದ್ದರು. ಯೇಸು ಕ್ರಿಸ್ತನು ಈ ಜನಾಂಗಕ್ಕೆ ಸೇರಿದವನೇ. ಕ್ರಿಸ್ತನ ಧರ್ಮಪ್ರಚಾರವನ್ನು ಈ ಕುಲದ ಗುರುಗಳು ಸಹಿಸದೆ ಕಡೆಗೆ ಆ ಮಹಾತ್ಮನನ್ನು ಶಿಲುಬೆಗೆ ಹಾಕಿಸಿದರು. ಕ್ರಿಸ್ತಮತವು ಪ್ರಾಬಲ್ಯಕ್ಕೆ ಬಂದ ಮೇಲೆ ಈಸಾಯಿಗಳು ಯಹೂದ್ಯರನ್ನು ಬಹುವಾಗಿ ಹಿಂಸಿಸಿದರು. ಯಹೂದ್ಯರು ವ್ಯಾಪಾರದಲ್ಲಿ ಬಹು ಕುಶಲರು. ಪ್ರಪಂಚದ ಎಲ್ಲೆಡೆಗಳಲ್ಲಿಯೂ ಹರಡಿದ್ದಾರೆ. ಇತ್ತೀಚಿಗೆ ಅವರ ಪ್ರಾಚೀನ ಮಾತೃಭೂಮಿಯಾದ ಪ್ಯಾಲೆಸ್ಟೈನಿನಲ್ಲಿ ಅವರು ಪುನಃ ನೆಲೆಸುವದಕ್ಕೆ ಸೌಕರ್ಯಗಳನ್ನೊದಗಿಸಿಕೊಡುವ ಪ್ರಯತ್ನವು ನಡೆಯುತ್ತಿದೆ. ಈ ಉದ್ಯಮವು ಸುಲಭವಾಗಿ ಕೈಗೂಡತಕ್ಕುದೆಂದು ಹೇಳುವಂತಿಲ್ಲ.

**ರೆವರೆಂಡ್ ಸಿ. ಎಫ್. ಆಂಡ್ರ್ಯೂಸ್**

ಇವರು ಉದ್ಯೋಗತಃ ಈಸಾಯಿ ಪಾದ್ರಿಗಳು. ಗಾಂಧೀಜಿಯವರ ಪರಮಮಿತ್ರರಲ್ಲೊಬ್ಬರು. ಕವಿ ರವೀಂದ್ರರ ಶಾಂತಿನಿಕೇತನದಲ್ಲಿ ಉಪಾಧ್ಯಾಯರಾಗಿರುವದೇ ಇವರ 'ಖಾಯಂ' ಪದವಿ. ಇವರು ಹಿಂದುಸ್ತಾನಕ್ಕೆ ಬಂದು ಅನೇಕ ವರ್ಷಗಳಾದುವು. ಅಂದಿನಿಂದ ಇವರು ಈ ದೇಶವನ್ನೇ ತಮ್ಮ ತಾಯ್ನಾಡಾಗಿ ಎಣಿಸಿ ಇಲ್ಲಿನ ಜನರ ಸೇವಾಕಾರ್ಯದಲ್ಲಿ ನಿರಂತರೋದ್ಯಮಿಗಳಾಗಿದ್ದಾರೆ. ಪ್ರಪಂಚದ ಇತರ ಭಾಗಗಳಲ್ಲಿ ನೆಲೆಸಿರುವ ಭಾರತೀಯರ ಸ್ಥಿತಿಗತಿಗಳನ್ನುತ್ತಮಪಡಿಸುವದರಲ್ಲಿ ಇವರು ಮಾಡಿರುವ ಸಹಾಯವು ಅಷ್ಟಿಷ್ಟಲ್ಲ.

## ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸ ಶಾಸ್ತ್ರೀ

ಇವರು ದಕ್ಷಿಣ ದೇಶದವರು. ಮದರಾಸ್ ನಗರದಲ್ಲಿರುವ 'ಹಿಂದೂ ಹೈಸ್ಕೂಲಿ'ನ ಮುಖ್ಯೋಪಧ್ಯಾಯರಾಗಿರುವಾಗ ಗೋಖಲೆಯವರ ಲಕ್ಷ್ಯವು ಇವರ ಮೇಲೆ ಬಿದ್ದು, ಇವರು ಗೋಖಲೆಯವರು ಸ್ಥಾಪಿಸಿದ ಭಾರತಸೇವಾಸಂಘ(ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ)ದ ಸದಸ್ಯರಾದರು. ಗೋಖಲೆಯವರ ಮರಣಾನಂತರ ಇವರೇ ಆ ಸಂಸ್ಥೆಯ ಅಧ್ಯಕ್ಷರಾದರು. ದೇಶ ಸೇವೆಯಲ್ಲಿ ನುರಿತ ಹಿರಿಯರಲ್ಲಿ ಇವರೊಬ್ಬರು. ಇವರು ಪ್ರಪಂಚದ ಅತ್ಯಂತ ಪ್ರಸಿದ್ಧ ವಾಗ್ಮಿಗಳಲ್ಲೊಬ್ಬರೆಂದೆಣಿಸಲ್ಪಡುತ್ತಾರೆ. ಹಿಂದುಸ್ತಾನದ ಸರಕಾರದ ಪರವಾಗಿ ಇವರು ಭಾರತೀಯರು ನೆಲೆಸಿರುವ ನಾಡುಗಳಿಗೆಲ್ಲಾ ರಾಯಭಾರಿಗಳಾಗಿ ಹೋಗಿದ್ದರು. ಸರಕಾರದ ಪ್ರತಿನಿಧಿಯಾಗಿ ವಾಷಿಂಗ್ಟನ್‌ನಲ್ಲಿ ಸೇರಿದ ಶಾಂತಿಸ್ಥಾಪನಾಸಭೆಗೂ ಹೋಗಿದ್ದರು. ಇತ್ತೀಚೆಗೆ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಪಾಡು ಅತಿ ಕೇಡಾಗಿ ಅದರ ಸಂಬಂಧವಾಗಿ ದೊಡ್ಡ ಚಳವಳಿ ನಡೆದಾಗ ಶ್ರೀ. ಶಾಸ್ತ್ರಿಗಳು ಪ್ರಾಮುಖ್ಯ ಪಾತ್ರವನ್ನು ವಹಿಸಿದರು. ಈ ವಿಷಯವಾಗಿ ಇಲ್ಲಿನ ಸರಕಾರಕ್ಕೂ ದಕ್ಷಿಣ ಆಫ್ರಿಕದ ಸರಕಾರಕ್ಕೂ ಸಂಧಿಸಮಾರಂಭವು ನಡೆದಾಗ ಶ್ರೀ. ಶಾಸ್ತ್ರಿಗಳೂ ಇಲ್ಲಿನ ಸರಕಾರದ ಪ್ರತಿನಿಧಿಗಳಲ್ಲೊಬ್ಬರಾಗಿದ್ದರು. ಈ ಸಂಧಿಯ ಪ್ರಕಾರ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಹಕ್ಕುಗಳ ರಕ್ಷಣೆಗಾಗಿ ಹಿಂದುಸ್ತಾನದ ಸರಕಾರದ ಪ್ರತಿನಿಧಿಯೊಬ್ಬರು ನೇಮಕವಾಗಬೇಕಾಗಿದ್ದಿತು. ಇಂತಹ ಪ್ರತಿನಿಧಿಗಳಲ್ಲಿ ಶ್ರೀ. ಶಾಸ್ತ್ರಿಯವರೇ ಮೊದಲನೆಯವರು. ಈಚೆಗೆ ಅವರ ಆರೋಗ್ಯವು ಕೆಟ್ಟುಹೋದುದರಿಂದ ಅವರು ಆ ಕೆಲಸವನ್ನು ಬಿಟ್ಟು ಬರಬೇಕಾಯಿತು. ಆಸ್ಥಾನದಲ್ಲಿದ್ದು ಅವರು ಮಾಡಿದ ಕೆಲಸವು ಅದ್ವಿತೀಯವಾದುದು. ರಾಜಕೀಯ ರಂಗದಲ್ಲಿ ಶ್ರೀ. ಶಾಸ್ತ್ರಿಗಳು ಮಂದಗತಿಪಕ್ಷಕ್ಕೆ ಸೇರಿದವರೆಂದು ಎಣಿಕೆ.

### ರಾಬಿನ್‌ಸನ್ ಕ್ರೂಸೋ (ಪು. ೬೮)

ಇದು ಇಂಗ್ಲೆಂಡಿನ ಪ್ರಸಿದ್ಧ ಗದ್ಯ ಗ್ರಂಥಕರ್ತರಲ್ಲಿ ಒಬ್ಬನಾದ ಡೇನಿಯಲ್ ಡೆಫೋ ಎಂಬಾತನು ಬರೆದ ಕಾದಂಬರಿಯ ನಾಯಕನ ಹೆಸರು. ಎಲ್ಲಾ ರಾಷ್ಟ್ರಗಳಿಗೂ ದೂರವಾಗಿ ಸಮುದ್ರ ಮಧ್ಯದಲ್ಲಿರುವ ಸಣ್ಣ ದ್ವೀಪದಲ್ಲಿ ಕ್ರೂಸೋವು ಒಬ್ಬೊಂಟಿಗನಾಗಿದ್ದು ಸ್ವಾವಲಂಬನೆಯ ಪ್ರಭಾವದಿಂದ ಸಂತೃಪ್ತ ಜೀವನವನ್ನು ನಡೆಸಿದುದೆಂತೆಂಬುದರ ವರ್ಣನೆಯೇ ಈ ಮನೋರಂಜಕ ಕಾದಂಬರಿಯ ಕಥಾವಸ್ತು.

### ಹೆನ್ರಿ ಎಸ್. ಎಲ್. ಪೋಲಕ್ (ಪು. ೮೦)

ಇವರು ಈ ಭಾಗದಲ್ಲಿ ವಿವರಿಸಿರುವಂತೆ ಗಾಂಧೀಜಿಯವರ ಸಹಯೋಗಿಗಳಾದಂದಿನಿಂದ ಇಂದಿನವರೆಗೂ ಭಾರತೀಯರಿಗೆ ಮಿತ್ರರಾಗಿದ್ದು ಅವರಿಗಾಗಿ ಎಷ್ಟೋ ಸಾಹಸಪಟ್ಟಿರುತ್ತಾರೆ. ದಕ್ಷಿಣ ಆಫ್ರಿಕದಲ್ಲಿ ಗಾಂಧೀಜಿಯವರು ವಕೀಲಿ ಕೆಲಸಮಾಡುತ್ತಿದ್ದಾಗ ಇವರು ಅವರ ಸಹಾಯಕರಾಗಿದ್ದರು. 'ಇಂಡಿಯನ್ ಒಪಿನಿಯನ್' ಪತ್ರಿಕೆಯನ್ನು ಕೆಲವುಕಾಲ ನಡೆಸಿದರು. ಸತ್ಯಾಗ್ರಹ ಕದನದಲ್ಲಿ ಗಾಂಧೀಜಿಯವರು ದಸ್ತಗಿರಿ ಮಾಡಲ್ಪಟ್ಟಮೇಲೆ ಇವರೇ ಸತ್ಯಾಗ್ರಹಿಗಳ ಸೈನ್ಯಕ್ಕೆ ಮುಂದಾಳಾಗಿ ಇವರೂ ದಸ್ತಗಿರಿ ಮಾಡಲ್ಪಟ್ಟರು. ವಿಚಾರಣೆಯಾದ ಮೇಲೆ ಇವರಿಗೆ ಮೂರು ತಿಂಗಳ ಕಾರಾಗೃಹವಾಸವು ವಿಧಿಸಲ್ಪಟ್ಟಿತು. ಇವರೆಸಗಿದ ಸೇವಾಕಾರ್ಯದಲ್ಲೆಲ್ಲಾ ಇವರ ಸಹಧರ್ಮಿಣಿಯೂ ಹಾರ್ದಿಕವಾಗಿ ಭಾಗಿಗಳಾಗಿದ್ದರು. ಇವರುಗಳ ವಿಷಯವು 'ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ'ದಲ್ಲಿ ವರ್ಣಿತವಾಗಿದೆ.

### ರೆವರೆಂಡ್ ಜೋಸೆಫ್ ಡೋಕ್ (ಪು. ೮೦)

ಗಾಂಧೀಜಿಯವರ ಆತ್ಮಶಕ್ತಿಯಿಂದ ಆಕರ್ಷಿತರಾದ ಆಂಗ್ಲ ಸಜ್ಜನರಲ್ಲಿ ಇವರೊಬ್ಬರು. ಆಂಡ್ರ್ಯೂಸರಂತೆ ಇವರೂ ಪಾದ್ರಿ

ಗಳು. ಗಾಂಧೀಜಿಯವರು ದಕ್ಷಿಣ ಆಫ್ರಿಕದಲ್ಲಿ ಒಬ್ಬ ಪಠಾನನ ಕೈಯಲ್ಲಿಬಲವಾಗಿ ಏಟು ತಿಂದು ಅವರಿಗೆ ಪ್ರಾಣಾಪಾಯ ಸಂಭವಿದಾಗ ಅವರನ್ನು ಆರೈಕೆ ಮಾಡಿದವರು ಇವರು ಮತ್ತು ಇವರ ಹೆಂಡತಿಯವರು. ಗಾಂಧೀಜಿಯವರ ಮೊಟ್ಟಮೊದಲನೆಯ ಜೀವನ ಚರಿತ್ರೆಯನ್ನು ಬರೆದವರಿವರೇ. ಗಾಂಧೀಜಿಯವರು ಸೆರೆಮನೆಯಲ್ಲಿರುವಾಗ ಇವರು ಕೆಲವುಕಾಲ 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಸಂಪಾದಕರಾಗಿದ್ದರು. ದಕ್ಷಿಣ ಆಫ್ರಿಕದ ಒಳಭಾಗದಲ್ಲಿನ ಕಪ್ಪುಜನರಿಗೆ ಈಸಾಯೀ ಮತಪ್ರಚಾರಮಾಡುತ್ತಿರುವಾಗ ಇವರು ರೋಗಗ್ರಸ್ತರಾಗಿ ಅಕಾಲಮರಣಕ್ಕೆ ತುತ್ತಾದರು. ಇವರ ವಿಷಯವು 'ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ'ದಲ್ಲಿ ವರ್ಣಿತವಾಗಿದೆ.

**ಜಾನ್ ರಸ್ಕಿನ್ (ಪು. ೯೦)**

ಜೀವಿತಕಾಲ ೧೮೧೯–೧೯೦೦. ಹತ್ತೊಂಬತ್ತನೆಯ ಶತಮಾನದ ಅತ್ಯಂತ ಪ್ರಸಿದ್ಧ ಲೇಖಕರಲ್ಲಿ ಇವರೊಬ್ಬರು. ಆಧುನಿಕ ನಾಗರಿಕತೆಯ ಕಲಾಸಾಹಿತ್ಯದೊಡನೆ ಪ್ರಚಂಡ ಯುದ್ಧವನ್ನು ಕಾದಿದರಿವರು. ಶಿಲ್ಪಚಿತ್ರಕಲಾ ಪ್ರಪಂಚದಲ್ಲಿ ಖ್ಯಾತಿವೆತ್ತುದಲ್ಲದೆ ಇವರು ಸಮಾಜಶಾಸ್ತ್ರ ಅರ್ಥಶಾಸ್ತ್ರಗಳ ಬೆಳೆವಣಿಗೆಗೂ ಕಾರಣರಾದರು. ಇವರ ಶೈಲಿಯು ಅಪೂರ್ವ ಗಾಂಭೀರ್ಯದಿಂದಲೂ ಮಾಧುರ್ಯದಿಂದಲೂ ಕೂಡಿದುದಾಗಿದೆ. ತಾವು ಬೋಧಿಸುವಂತೆಯೇ ತಮ್ಮ ಜೀವನವನ್ನು ನಡೆಸುವ ಅತಿ ವಿರಳ ಜನರಲ್ಲಿ ಇವರೊಬ್ಬರು.

**ಫೂಲ್ಸ್‌ಕ್ಯಾಪ್ (ಪು. ೯೭) ಮೊದಲನೆಯ ಭಾಗದ ಟಿಪ್ಪಣಿಯನ್ನು ನೋಡಿ.**

**ಮಗನಲಾಲ ಗಾಂಧೀ (ಪು. ೧೦೨) ೩ನೆಯ ಭಾಗದ ಟಿಪ್ಪಣಿಯನ್ನು ನೋಡಿ.**

**ವಿವಾಹದ ದಾಖಲೆಯ ಅಧಿಕಾರಿಗಳು (ಪು. ೧೦೯)**

ವಿವಾಹವು ಧಾರ್ಮಿಕ ದೃಷ್ಟಿಯಿಂದ ಸಾಂಗವಾಗಿ ನೆರವೇರ ಬೇಕಾದರೆ ಆಯಾ ಧರ್ಮದ ವಿವಾಹ ವಿಧಿಯನ್ನನುಸರಿಸಿ ಕರ್ಮ ವೆಸಗಬೇಕು. ಆದರೆ ಕಾನೂನಿನ ದೃಷ್ಟಿಯಿಂದ ವಿವಾಹವು ಪೂರ್ಣ ವಾಗಬೇಕಾದರೆ ಇದಾವದೂ ಆವಶ್ಯಕವಿಲ್ಲ. ಇದಕ್ಕಾಗಿ ನೇಮಕ ವಾಗಿರುವ ಅಧಿಕಾರಿಯ ಮುಂದೆ ಹೋಗಿ 'ರಜಿಸ್ಟರ್' ಮಾಡಿ ಸಿದರೆ ವಿವಾಹವು ಮುಗಿಯಿತೆಂದೆಣಿಸಲ್ಪಡುತ್ತದೆ.

**ಹರಿಲಾಲ ಗಾಂಧೀ (ಪು. ೧೧೫)**

ಇವರು ಗಾಂಧೀಜಿಯವರ ಜ್ಯೇಷ್ಠ ಪುತ್ರರು. ದಕ್ಷಿಣ ಆಫ್ರಿಕದ ಸತ್ಯಾಗ್ರಹ ಕದನವು ನಡೆದಾಗ ಇವರು ತಂದೆಯವ ರೊಡನೆ ಇದ್ದು ಅನೇಕಬಾರಿ ಸೆರೆಮನೆಗೆ ಹೋದರು. ಆದರೆ ಇತ್ತೀಚೆಗೆ ತಂದೆಮಕ್ಕಳ ಜೀವನ ಮಾರ್ಗಗಳು ಭಿನ್ನವಾಗಿವೆ. ಇವರು ಇಂದಿನ ಪಾಶ್ಚಿಮಾತ್ಯ ನಾಗರಿಕತೆಯಲ್ಲಿ ವಿಶ್ವಾಸವುಳ್ಳವ ರಾಗಿ ವ್ಯಾಪಾರ ಸಂಸ್ಥೆಗಳ ಸಂಚಾಲನೆಯಲ್ಲಿ ಉದ್ಯುಕ್ತರಾಗಿ ದ್ದಾರೆ ಗಾಂಧೀಜಿಯವರ ಮಕ್ಕಳಲ್ಲಿ ಈ ರೀತಿಯ ಮನೋ ವೃತ್ತಿಯುಳ್ಳವರಿವರೊಬ್ಬರೇ.

**ಛಗನಲಾಲ ಗಾಂಧೀ (ಪು. ೧೧೬)**

ಗಾಂಧೀಜಿಯವರ ಜೊತೆಗೆ ದಕ್ಷಿಣ ಆಫ್ರಿಕದಲ್ಲಿ ನೆಲೆಸಲು ಅಲ್ಲಿಗೆ ಹೋದವರಲ್ಲಿ ಇವರೊಬ್ಬರು. ಅಂದಿನಿಂದ ಇಂದಿನವರೆಗೂ ಇವರು ಗಾಂಧೀಜಿಯವರೊಂದಿಗೇ ಇದ್ದಾರೆ. ಸಾಬರ್ಮತೀ ಉದ್ಯೋಗ ಮಂದಿರ (ಸತ್ಯಾಗ್ರಹಾಶ್ರಮ)ದಲ್ಲಿದ್ದರು. ಈ ವರ್ಷದ ಮಾರ್ಚ್ ೧೨ನೆಯ ತಾರೀಖಿನ ದಿನ ಉಪ್ಪಿನ ತೆರಿಗೆ ಯನ್ನು ಮುರಿಯಲು ಗಾಂಧೀಜಿಯವರ ನೇತೃತ್ವದಲ್ಲಿ ಹೊರಟ ಸತ್ಯಾಗ್ರಹ ದಳದಲ್ಲಿ ಇವರೂ ಒಬ್ಬರು ಸೈನಿಕರು. ಇವರು ಗಾಂಧೀಜಿಯವರಿಗೆ ಹತ್ತಿರದ ಸಂಬಂಧಿಗಳಾಗಿದ್ದಾರೆ.

**ಭಗವಾನ್ ಬುದ್ಧನ ತ್ಯಾಗ** (ಪು. ೧೪೯) ೩ನೆಯ ಭಾಗದ ಟಿಪ್ಪಣಿಯನ್ನು ನೋಡಿ.

**'ಟಾಲ್‌ಸ್ಟಾಯ್ ಫಾರ್ಮ್'** (ಪು. ೧೫೦)

ಸತ್ಯಾಗ್ರಹ ಕದನದಲ್ಲಿ ಸೆರೆಮನೆಗೆ ಹೋದವರ ಕುಟುಂಬಗಳೆಲ್ಲಾ ಒಟ್ಟಿಗಿದ್ದು ಒಂದೇ ರೀತಿಯ ಸರಳಜೀವನವನ್ನು ನಡೆಸುವದಕ್ಕೆ ಅನುಕೂಲವಾಗಿರುವಂತೆ ಟ್ರಾನ್ಸ್‌ವಾಲಿನಲ್ಲಿ ಇದು ಕಾಲನ್‌ಬಾಕರು ಕೊಟ್ಟ ನೂರಾರು ಎಕರೆಗಳ ಭೂಮಿಯ ಮೇಲೆ ಗಾಂಧೀಜಿಯವರಿಂದ ಸ್ಥಾಪಿಸಲ್ಪಟ್ಟಿತು. 'ದಕ್ಷಿಣ ಆಫ್ರಿಕದಲ್ಲಿನ ಸತ್ಯಾಗ್ರಹದ ಇತಿಹಾಸ'ದಲ್ಲಿ ಇದರ ಸವಿಸ್ತಾರ ವರ್ಣನೆಯಿದೆ.

**ಟ್ರ್ಯಾಪಿಸ್ಟ್ ಮೊನಾಸ್ಟರಿ** (ಪು. ೧೬೦)

ಈಸಾಯಿಯಾ ಮಠಗಳಲ್ಲಿ ಒಂದಕ್ಕೆ ಈ ಹೆಸರು. ಈ ಪಂಥವು ಫ್ರಾನ್ಸ್ ದೇಶದಲ್ಲಿರುವ ಲಾ ಟ್ರಾಪ್ ಎಂಬ ಊರಿನಲ್ಲಿ ೧೧೪೦ರಲ್ಲಿ ಸ್ಥಾಪಿತವಾಗಿ ೧೬೬೨ರಲ್ಲಿ ಪುನರುಜ್ಜೀವಿತವಾಯಿತು. ಮೌನ, ಪ್ರಾರ್ಥನೆ, ಧರ್ಮಗ್ರಂಥಪಠನೆ ಮತ್ತು ಶಾರೀರಿಕ ಉದ್ಯೋಗ, ಇವು ಅವರ ಕರ್ತವ್ಯಕರ್ಮಗಳಾಗಿದ್ದುವು. ಫ್ರಾನ್ಸ್ ದೇಶದಲ್ಲಿ ೧೮ನೆಯ ಶತಮಾನದ ಅಂತ್ಯದಲ್ಲಿ ರಾಜಕೀಯ ವಿಪ್ಲವವು ಸಂಭವಿಸಿದಾಗ ಇವರು ದೇಶಭ್ರಷ್ಟರಾಗಿ ಇಂಗ್ಲೆಂಡಿನಲ್ಲೂ ತದನಂತರ ಐರ್ಲೆಂಡಿನಲ್ಲೂ ನೆಲೆಸಿದರು. ಇಂದು ಫ್ರಾನ್ಸ್, ಬೆಲ್ಜಿಯಮ್, ಇಟಲಿ, ಅಲ್ಜೀರಿಯಾ, ಐರ್ಲೆಂಡ್ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಈ ಪಂಥದವರ ಮಠಗಳಿವೆ.

**ಮಹಾಯುದ್ಧ** (ಪು. ೧೮೨)

ಇದು ೧೯೧೪ರಲ್ಲಿ ಪ್ರಾರಂಭವಾಗಿ ೧೯೧೮ರಲ್ಲಿ ಕೊನೆಗಂಡಿತು. ಇದರ ಪ್ರತ್ಯಕ್ಷ ಕಾರಣವು ಸರ್ವಿಯಾದೇಶದಲ್ಲಿ ನಡೆದ ಆಸ್ಟ್ರಿಯಾ ಚಕ್ರಾಧಿಪತ್ಯದ ಯುವರಾಜರ ಕೊಲೆ. ಆದರೆ ವ್ಯಾಪಾರ ಸಂಬಂಧವಾಗಿ ಜರ್ಮನಿಗೂ ಇಂಗ್ಲೆಂಡಿಗೂ ಇದ್ದ ಅಸೂಯೆಯೂ

ಫ್ರಾನ್ಸ್ ಮತ್ತು ಜರ್ಮನಿಗೆ ಇದ್ದ ರಾಜಕೀಯ ದ್ವೇಷವೂ ನಿಜವಾದ ಕಾರಣಗಳೆನ್ನಬಹುದು. ಇಂತಹ ಘೋರಯುದ್ಧವನ್ನು ಪ್ರಪಂಚವೆನ್ನೆಂದೂ ಕಂಡಿಲ್ಲ. ಇಡೀ ಜಗತ್ತಿನ ಮುಖ್ಯ ರಾಷ್ಟ್ರಗಳೆಲ್ಲವೂ ಇದರಲ್ಲಿ ಭಾಗಿಗಳಾಗಿದ್ದುವೆಂದು ಹೇಳಬಹುದು. ಒಂದುಕಡೆ ಇಂಗ್ಲೆಂಡ್, ಫ್ರಾನ್ಸ್, ರಷ್ಯಾ, ಬೆಲ್ಜಿಯಂ ಸರ್ಬಿಯ ಮತ್ತು ಇಟಲಿ, ಇದಿರುಕಡೆ ಜರ್ಮನಿ, ಆಸ್ಟ್ರಿಯಾ ಮತ್ತು ತುರ್ಕಿ. ಹೀಗೆ ಒಟ್ಟುಕೂಡಿದ್ದುವು. ೧೯೧೮ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನವು ಇಂಗ್ಲೆಂಡಿನ ಪಕ್ಷವನ್ನು ಸೇರಲು ಅದರಿಂದ ಯುದ್ಧದ ಬಣ್ಣವೇ ಬದಲಾಯಿಸಿ ಆ ಪಕ್ಷಕ್ಕೆ ವಿಜಯವು ಲಭಿಸಿತು.

**ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ** (ಪು. ೧೯೩)

**ಮೊದಲನೆಯ ಭಾಗದ ಟಿಪ್ಪಣಿಯನ್ನು ನೋಡಿ.**

**ಮಿಸ್ ಎಮಿಲಿ ಹಾಬ್‌ಹಾಸ್** (ಪು. ೧೯೩)

ಈಕೆಯು ಶ್ರೀಮಂತರ ಕುಲದಲ್ಲಿ ಜನಿಸಿದರೂ ತಮ್ಮ ಜೀವನವೆಲ್ಲಾ ಬಡವರ ಸೇವೆಯಲ್ಲೇ ಕಳೆದರು. ಬೋಅರ್ ಯುದ್ಧವು ಪ್ರಾರಂಭವಾದಾಗ ಬೋಅರರ ಪಕ್ಷವನ್ನು ವಹಿಸಿ ಅವರಿಗೆ ವಿಜಯವು ಲಭಿಸಲೆಂದು ಸಾರ್ವಜನಿಕವಾಗಿ ಪ್ರಾರ್ಥಿಸಿದ ಆಂಗ್ಲೇಯರಲ್ಲಿ ಇವರೊಬ್ಬರು. ಲಾರ್ಡ್ ಕಿಚನರು ಬೋಅರ್ ಸ್ತ್ರೀಯರನ್ನು ಒಟ್ಟುಗೂಡಿಸಿ ಹಿಂಸೆ ಕೊಡತೊಡಗಿದಾಗ ಇವರು ಅಧಿಕಾರಿಗಳ ಆಜ್ಞೆಯನ್ನು ಲಕ್ಷಿಸದೆ ಟ್ರಾನ್‌ಸ್ವಾಲಿಗೆ ನುಗ್ಗಿ ಆ ಸ್ತ್ರೀಯರಿಗೆ ಬೆಂಬಲವಾಗಿ ನಿಂತರು. ಆಮೇಲೆ ಇವರು ಸತ್ಯಾಗ್ರಹ ಯುದ್ಧದಲ್ಲಿ ಭಾರತೀಯರಿಗೂ ಬಹಳ ನೆರವಿತ್ತರು. ಈಕೆಯು ಗತಿಸಿ ಒಂದೆರಡು ವರ್ಷಗಳಾದುವು.

**ನ್ಯಾಷನಲ್ ಲಿಬರಲ್ ಕ್ಲಬ್** (ಪು. ೨೦೧)

ಐರೋಪ್ಯರಲ್ಲಿ ಯಾವದಾದರೂ ಪಂಗಡಕ್ಕೆ ಸೇರಿದ ಜನರು ತಾವು ಒಬ್ಬರನ್ನೊಬ್ಬರು ಬೆಟ್ಟಿ ಮಾಡುವ ಅನುಕೂಲ್ಯಕ್ಕಾಗಿ 'ಕ್ಲಬ್' ಎಂಬ ಸಂಸ್ಥೆಗಳನ್ನು ಸ್ಥಾಪಿಸುವ ವಾಡಿಕೆಯುಂಟು.

ಅವುಗಳಲ್ಲಿ ಅನ್ನಾಹಾರಾದಿಗಳಿಗೂ ಇಳಿದುಕೊಳ್ಳುವದಕ್ಕೂ ಸೌಕರ್ಯವುಂಟು. ಇಂಗ್ಲೆಂಡಿನ 'ಪ್ರಗತಿಪಕ್ಷ (ಮೂರನೆಯ ಭಾಗದ ಟಿಪ್ಪಣಿಯನ್ನು ನೋಡಿ) ದ ಮುಖ್ಯ 'ಕ್ಲಬ್' ಗೆ 'ನ್ಯಾಷನಲ್ ಲಿಬರಲ್ ಕ್ಲಬ್' ಎಂದು ಹೆಸರು. ಗೋಖಲೆಯವರಿಗೆ ಆ ಪಕ್ಷದ ಅನೇಕ ಮುಂದಾಳುಗಳ ಪರಿಚಯವಿದ್ದುದರಿಂದ ಅವರು ಆ 'ಕ್ಲಬ್' ನಲ್ಲಿ ಇಳಿದಿದ್ದರು.

**ರಹದಾರಿ (ಪ್ಯಾಸ್ ಪೋರ್ಟ್) (ಪು. ೨೦೮)**

ಒಂದು ರಾಷ್ಟ್ರದ ಜನರು ಮತ್ತೊಂದು ರಾಷ್ಟ್ರಕ್ಕೆ ಸಂಚಾರಾರ್ಥವಾಗಿ ಹೋಗಬೇಕಾದರೆ ತಮ್ಮ ಸರಕಾರದಿಂದ ಅಪ್ಪಣೆಚೀಟಿಯನ್ನು ಪಡೆದಿರಬೇಕು. ಇಂತಹ ಚೀಟಿಗೆ 'ಪ್ಯಾಸ್ ಪೋರ್ಟ್' ಎಂದು ಹೆಸರು. ಕಳ್ಳಕಾಕರೇ ಮುಂತಾದ ದುರ್ವ್ಯಾಪಾರಿಗಳ ದುಷ್ಕಾರ್ಯವನ್ನಡಗಿಸುವದೇ ಈ ಏರ್ಪಾಟಿನ ಉದ್ದೇಶ. ಆದರೆ ರಾಜಕೀಯ ದೃಷ್ಟಿಯಿಂದ ಈ ಅಧಿಕಾರವನ್ನು ಸರಕಾರಗಳ ಬಿಗಿಯಿಂದ ಉಪಯೋಗಿಸುವದೂ ಉಂಟು. ಯುದ್ಧಸಮಯದಲ್ಲಂತು ಇದರ ಕಟ್ಟುಗಿಟ್ಟು ಅತಿ ವಿಶೇಷವಾಗಿರುತ್ತದೆ.

**ಲಾರ್ಡ್ ಹಾರ್ಡಿಂಜ್ (ಪು. ೨೦೮)**

ಇವರು ಅನೇಕ ದೇಶಗಳಲ್ಲಿ ಇಂಗ್ಲೆಂಡಿನ ರಾಯಭಾರಿಗಳಾಗಿದ್ದು ೧೯೧೦ರಿಂದ ೧೯೧೬ರ ವರೆಗೆ ಹಿಂದುಸ್ಥಾನದ ವೈಸ್ರಾಯರಾಗಿದ್ದರು. ಇವರು ಪ್ರಜಾನುರಾಗಿಗಳಾಗಿದ್ದು ತಮ್ಮ ರಾಜ್ಯಭಾರದಲ್ಲಿ ಭಾರತೀಯರ ಆದರವನ್ನೂ ಗೌರವವನ್ನೂ ಗಳಿಸಿದರು. ದಕ್ಷಿಣ ಆಫ್ರಿಕದಲ್ಲಿ ಭಾರತೀಯರು ನಡೆಸುತ್ತಿದ್ದ ಸತ್ಯಾಗ್ರಹ ಕದನಕ್ಕೆ ಇವರು ತಮ್ಮ ಬೆಂಬಲವನ್ನು ಕೊಟ್ಟರು. ೧೯೧೨ರಲ್ಲಿ ಇವರ ಮೇಲೆ ಯಾರೋ ಸಿಡಿಮದ್ದನ್ನೆಸೆದರು. ಆದರೆ ದೈವವಶಾತ್ ಅವರಿಗೆ ಪ್ರಾಣಾಪಾಯವಾಗಲಿಲ್ಲ. ವೈಸರಾಯ್ ಪಟ್ಟದಿಂದಿಳಿದ ನಂತರ ಇವರು ೧೯೨೦ರಿಂದ ೧೯೨೨ರ ವರೆಗೆ ಪ್ಯಾರಿಸಿನಲ್ಲಿ ಬ್ರಿಟಿಷ್ ರಾಯಭಾರಿಗಳಾಗಿದ್ದರು.



# ಅನುಕ್ರಮಣಿಕೆ